ವಾಸುದೇವ ಸಾಹಿತ್ಯರತ್ನಮಾಲೆ—೩
ಮತ್ತು
ಮನೋಹರ ಗ್ರಂಥಮಾಲೆಯ ೧೧೧ನೆಯ ಕುಸುಮ

# ಯವನಸ್ವೈರಂಧ್ರೀ

( ಐತಿಹಾಸಿಕ ಕಾದಂಬರಿ )

೨

ಬರೆದವರು :

ಕೆರೂರ ವಾಸುದೇವಾಚಾರ್ಯರು.



ಡಿಸೆಂಬರ
೧೯೫೨

ಬೆಲೆ
೨-೪-೦

ಪ್ರಕಾಶಕರು :
ಧೀರೇಂದ್ರ ವಾಸುದೇವಾಚಾರ್ಯ ಕೆರೂರ
ಬಾಗಿಲುಕೋಟೆ.



ಸಂಪಾದಕರು :
ಜಿ. ಬಿ. ಜೋಶಿ

( ಮೊದಲನೆ ಆವೃತ್ತಿ ೨೫೧೦ ಪ್ರತಿಗಳು )

ಪುಸ್ತಕ ಮಾರಾಟಗಾರರು :

ವಾಸುದೇವ ಪುಸ್ತಕಾಲಯ
ಬಾಗಿಲುಕೋಟೆ.

ಮನೋಹರ ಗ್ರಂಥಮಾಲೆ
ಧಾರವಾಡ.

ಮುದ್ರಕರು :
ವಿ. ವಾಯ್. ಜತಾರ
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್, ಧಾರವಾಡ

# ಓದುವ ಮೊದಲು

ಇಂದಿಗೆ ನಾಲ್ವತ್ತು ನಾಲ್ವತ್ತೈದು ವರ್ಷಗಳ ಹಿಂದೆ 'ಇಂದಿರೆ' 'ಯದುಮಹಾರಾಜ' 'ಔರಂಗಜೇಬ' ಮೊದಲಾದ ಕಾದಂಬರಿಗಳನ್ನು ಆಗ ತಾವು ಸಂಪಾದಕರಾಗಿ ನಡೆಯಿಸುತ್ತಿದ್ದ 'ಸಚಿತ್ರಭಾರತ'ದ ಮುಖಾಂತರ ಕನ್ನಡ ಸಾಹಿತ್ಯಪ್ರಪಂಚಕ್ಕೆ ಬರೆದುಕೊಟ್ಟು ಸುಪರಿಚಿತರೂ ಸುಪ್ರಸಿದ್ಧರೂ ಆದ ದಿವಂಗತ ಕೆರೂರ ವಾಸುದೇವಾಚಾರ್ಯರ ಇನ್ನೂ ಪುಸ್ತಕ ರೂಪದಲ್ಲಿ ಬೆಳಕು ಕಾಣದ ಸಾಹಿತ್ಯಕೃತಿಗಳ ಪರಿಚಯವನ್ನು—ಒಂದು, ಕನ್ನಡ ಸಾಹಿತ್ಯವು ನಡೆದು ಬಂದ ದಾರಿಯಲ್ಲಿ ಅವು ದೀಪಗಂಬವಾಗಿ ನಿಂತಿರುವುದನ್ನು ಗುರುತಿಸುವ ದೃಷ್ಟಿಯಿಂದಲೂ, ಒಂದು, ಅವರ ಬರೆವಣಿಗೆಯಲ್ಲಿ ಕಂಡುಬರುವ ಸತ್ವವೇ ಹೇಗೆ ಇಂದಿನ ಕನ್ನಡ ಸಾಹಿತ್ಯದ ಅಂತಃಸತ್ವವನ್ನು ಬೆಳೆಯಿಸಲು ಅನುವುಮಾಡಿಕೊಟ್ಟಿತೆಂಬದನ್ನು ತೋರಿಸುವ ದೃಷ್ಟಿಯಿಂದಲೂ ನಾಲ್ವತ್ತು ವರ್ಷಗಳ ವರೆಗೆ ಅಜ್ಞಾತವಾಸದಲ್ಲಿದ್ದ ಈ ಐತಿಹಾಸಿಕ ಕಾದಂಬರಿ 'ಯವನಸ್ವೈರಂಧ್ರಿ'ಯನ್ನೂ ಅವರೇ ಬೇರೆ ಬೇರೆ ಅಭಿಧಾನಗಳನ್ನಿಟ್ಟುಕೊಂಡು ಬರೆದ ಮೂವತ್ತಾರು ಸಂಪೂರ್ಣಕಥೆಗಳ ಸಂಗ್ರಹವನ್ನೂ (ಈ ಕಥೆಗಳಲ್ಲಿ ಕಾಲ್ಪನಿಕ ಮತ್ತು ಐತಿಹಾಸಿಕ ಕಥೆಗಳ ಸಂಕಲನಕ್ಕೆ 'ಪ್ರೇಮವಿಜಯ' ಎಂದು, ಚಾರಿತ್ರಿಕ-ಕಥೆಗಳಿಗೆ "ಬೆಳಗಿದ ದೀಪಗಳು" ಎಂದು, ಪತ್ತೇದಾರಿ ಕಥೆಗಳಿಗೆ "ಬೆಳ್ಳೀಚಿಕ್ಕೆ" ಎಂದು, ಸಾಮಾಜಿಕ-ಕಥೆಗಳಿಗೆ "ತೊಳೆದ ಮುತ್ತು" ಎಂದು, ಬೇರೆ ಬೇರೆ ಹೆಸರಿನಿಂದ ಬೇರೆ ಬೇರೆ ಗ್ರಂಥಗಳನ್ನೆ ಪ್ರಕಟಿಸಿ) ಸಾಧ್ಯವಾದರೆ, ನಮ್ಮ ಗ್ರಾಹಕರು ಇವಕ್ಕೆ ಒಲಿದರೆ "ವಿಚಾರ ಲಹರಿ" ಎಂಬ ಅವರ ಇನ್ನಿತರ ಬರೆಹಗಳ ಇನ್ನೊಂದು ಸಂಗ್ರಹವೊಂದನ್ನೂ ಕೊಟ್ಟು — ನಮ್ಮ ಮನೋಹರ ಗ್ರಂಥಮಾಲೆಯ ಗ್ರಾಹಕರಿಗೂ ಮಾಡಿ ಕೊಡಬೇಕೆಂಬ ಬಯಕೆಯಿಂದ 'ವಾಸುದೇವ ಸಾಹಿತ್ಯರತ್ನಮಾಲೆ'ಯಲ್ಲಿ ಈ ಗ್ರಂಥಗಳು ಪ್ರಕಟವಾಗುವವಾದರೂ ಮನೋಹರಗ್ರಂಥಮಾಲೆಯ ಗ್ರಾಹಕರಿ

ಗಾಗಿ ಅವನ್ನು ಅದೇ ಸಮಯದಲ್ಲಿ ಪಡೆದುಕೊಂಡು ಸಲ್ಲಿಸುವ ಒಂದು ವಿಶೇಷ ಸೌಲಭ್ಯವನ್ನು ಒದಗಿಸಿಕೊಡಲಾಗಿದೆ.

ಎಲೆಯ ಮರೆಯ ಕಾಯಿಯಂತೆ, ಧರೆಯ ಮರೆಯ ನೀರಿನಂತೆ, ಜಲಧಿಯ ಮರೆಯ ಅಗ್ನಿಯಂತೆ ತಮ್ಮ ಇರವನ್ನೇ ಬರೆಹದ ಹಿಂದೆ ಮರೆಯಾಗಿಸಿಕೊಂಡು ಇಡಿ ಜೀವನವನ್ನು, ಕಂಡವರಿಗೆ ಕಂಡಿತು, ಕಾಣದಿದ್ದವರಿಗೆ ಇಲ್ಲ ಎನ್ನುವ ಹಾಗೆ ಮಿಂಚಿಸಿ ಹೋದರು ಕೆರೂರ ವಾಸುದೇವಾಚಾರ್ಯರು. ಕೀರ್ತಿಕಾಮರಾಗಿ ಮಾಲೆಗಳಿಗೆ ಅವರು ತಲೆ ಬಾಗಿಸಲಿಲ್ಲ; ಅಧ್ಯಕ್ಷಪೀಠಗಳನ್ನು ಅವರು ಅಲಂಕರಿಸಲಿಲ್ಲ. ಗದ್ದಲ ಬಿಟ್ಟು ದೂರ ಇರುವ ಪ್ರಕೃತಿ ಅವರದು. ಹೀಗಿದ್ದರೆಂದೇ ಇಷ್ಟೆಲ್ಲ ಬರೆಯಲು ಸಾಧಿಸಿತೇನೋ! ಅವರು ಆಗ ಬರೆದದ್ದನ್ನೆಲ್ಲ ನೋಡಿದರೆ, ಓದಿದರೆ, ಒಳಗೊಳಗೇ ಆಶ್ಚರ್ಯದ ಬಾಯಿ ತೆರೆಯುವದು.

೧೯೦೮ರಲ್ಲಿಯೆ ಸ್ವತಂತ್ರವಾದ ಸಾಮಾಜಿಕ ಕಾದಂಬರಿಯನ್ನು (ಇಂದಿರೆ) ಬರೆದು ಪ್ರಕಟಿಸಿದರು; ಆದ್ಯ ಕಾದಂಬರಿಕಾರರಾದರು.

೧೯೧೩ ಅಕ್ಟೋಬರದಲ್ಲಿ 'ಸಚಿತ್ರಭಾರತ'ಕ್ಕೆ ಸಂಪಾದಕರಾಗಿ ಅದನ್ನು ಮೂರು ವರ್ಷಗಳ ವರೆಗೆ ಮೊದಲಿನಿಂದ ಕೊನೆಯ ವರೆಗೆ ತಾವೇ ಬೇರೆ ಬೇರೆ ಅಭಿಧಾನಗಳಿಂದ, ಬೇರೆ ಬೇರೆ ವೇಷಗಳಲ್ಲಿ ಬರೆದು ಸವ್ಯಸಾಚಿಯಾಗಿ ನಡೆಯಿಸಿದರು. ಅವರು ಆಗ ಹಾಗೆ ಪಟ್ಟ ಶ್ರಮದ ಫಲವಾಗಿಯೋ ಏನೋ ಈಗ ಏನೂ ಬರೆಯದೆ ಸಂಪಾದಕರಾಗಿ ಮಾಸಿಕಗಳನ್ನು ನಡೆಯಿಸುವದು ಬಹು ಸುಲಭವಾಗಿದೆ ನಮಗೆ.

"ಯದುಮಹಾರಾಜ" "ಔರಂಗಜೇಬ" "ಯವನಸೈರಂಧ್ರೀ" ಈ ಮೂರು ಐತಿಹಾಸಿಕ-ಕಾದಂಬರಿಗಳನ್ನೂ "ವಾಲ್ಮೀಕಿ-ವಿಜಯ" ಪೌರಾಣಿಕ-ಕಾದಂಬರಿಯನ್ನೂ "ಸುರತನಗರದ ಶ್ರೇಷ್ಠಿ," "ವಸಂತಯಾಮಿನಿ ಸ್ವಪ್ನಚಮತ್ಕಾರ" "ರಮೇಶ-ಲಲಿತ" "ಪತಿವಶೀಕರಣ" "ನಲ-ದಮಯಂತಿ" "ರುಕ್ಮಿಣೀಹರಣ" ಈ ಆರು ದೊಡ್ಡ ನಾಟಕಗಳನ್ನೂ ಮೂವತ್ತಾರು ಸಂಪೂರ್ಣ-ಕಥೆಗಳನ್ನೂ ಅನೇಕ ನಿಬಂಧ, ಲೇಖನಗಳನ್ನೂ (ಒಟ್ಟಿನಲ್ಲಿ ಸುಮಾರು ೨೫೦೦ ಪುಟಗಳಾಗಬಹುದು) ಈ ಮೂರು ವರ್ಷ

ಗಳಲ್ಲಿಯೆ ಬರೆದು ಸಚಿತ್ರಭಾರತದ ಮುಖಾಂತರ ಪ್ರಕಟಿಸಿದರು.

'ಸಚಿತ್ರಭಾರತ'ವು ನಿಂತ ಮೇಲೆ ೧೯೧೭ರಲ್ಲಿ ಇವರು 'ಶುಭೋದಯ' ಎಂಬ ಒಂದು ವಾರಪತ್ರಿಕೆಯನ್ನೂ ತಾವೇ ಸಂಪಾದಕರಾಗಿ ಹೊರಡಿಸಿದರು. ೧೯೨೦-೨೧ರಲ್ಲಿ ಬಂದ ಆಚಾರ್ಯರ ಮರಣವೇ ಈ ವಾರಪತ್ರಿಕೆಯನ್ನು ನಿಲ್ಲಿಸಿತು. ದೇಹದಲ್ಲಿ ಉಸಿರಿರುವವರೆಗೂ ಇವರ ಕೈ ಕೆಲಸಮಾಡುತ್ತಿತ್ತು. ಕೊನೆಯ ಈ ಮೂರು ವರ್ಷಗಳಲ್ಲಿಯೂ ಇವರು ಬರೆದದ್ದು ಅಷ್ಟಿಷ್ಟಲ್ಲ. ಆದರಲ್ಲಿಯ ಬರೆಹಗಳನ್ನೂ ಸಂಗ್ರಹಿಸಿದರೆ ಸುಮಾರು ಎರಡುಸಾವಿರ ಪುಟಗಳಷ್ಟಾದರೂ ಆಗಬಹುದು. ಈ ಬರೆಹಗಳು ಆಗಿನ ಕಾಲದ ಸಮಾಜದ ಮೇಲೆ, ಆಗಿನ ಜನರ ಆಶೆ ಆಕಾಂಕ್ಷೆಗಳ, ರೀತಿ ನೀತಿಗಳ ಮೇಲೆ, ರಾಜಕೀಯ ವಾತಾವರಣದ ಮೇಲೆ 'ಕ್ಷ' ಕಿರಣಗಳಾಗಿ ಪರಿಣಮಿಸುವಷ್ಟು ಮಾರ್ಮಿಕವಾಗಿವೆ, ಸೂಕ್ಷ್ಮದರ್ಶಿಗಳಾಗಿವೆ.

"Look in thy heart and write"— Sidney

"....ಯಾವದಾದರೊಂದು ಲೇಖದ ಪರಿಣಾಮವು ಸಮಾಜದ ಮೇಲೆ ಹೇಗಾಗಿರುವದೆಂಬದನ್ನು ಅರಿತುಕೊಳ್ಳಬೇಕಾದರೆ ಆ ಲೇಖಾಂತರ್ಗತವಾದ ವಿಚಾರಗಳ ಪ್ರಾಗಲ್ಭ್ಯವೇ ಸಾಕ್ಷಿ. ಆ ಲೇಖದಲ್ಲಿ ಆಕರ್ಷಕ ಶಕ್ತಿ ಎಷ್ಟಿರುವದು? ವಿಚಾರಗಳಿಂದ ಪ್ರತಿವಿಚಾರವನ್ನು ಹುಟ್ಟಿಸುವ ಸಾಮರ್ಥ್ಯವು ಅದರಲ್ಲಿ ಇದೆಯೋ ಹೇಗೆ? ಅದರಿಂದುದ್ಭವಿಸಿದ ವಕ್ತೃತ್ವಪೂರ್ಣವಾದ ಸ್ವರಗಳು ಬಲವಾದ ಸ್ಫೂರ್ತಿಯನ್ನು ಬೀರುತ್ತಿದ್ದರೆ ಮಾತ್ರ ಅದರ ಪರಿಣಾಮವು ಕ್ರಮೇಣ ದಿಗಂತದಲ್ಲಿಯೂ ಚಿರಸ್ಥಾಯಿಯಾಗುವಂತಾಗುವದು. ಬರೆದ ಪುಟಗಳಲ್ಲಿ ವಿಚಾರೋತ್ತೇಜಕವಾದ ಶಕ್ತಿ ಸಾನ್ನಿಧ್ಯವೇ ಇಲ್ಲದಿದ್ದರೆ ಆ ಬರವಣಿಗೆಯು ಕ್ಷಣೈಕಜೀವನವುಳ್ಳದ್ದು.... ಇಂದು ಬರೆದ ಇಲ್ಲವೆ ನುಡಿದ ವಿಚಾರಗಳು ಮರುದಿನವೇ ಹಳೆಯವೆಂದು ಹೀಯಾಳಿಸಲ್ಪಡಬಾರದೆಂದು ಮನಸ್ಸಿದ್ದವರು ನುಡಿಯುವಾಗಲಿ ಲೇಖವನ್ನಾಗಲಿ ಏಕಮನಸ್ಸಿನಿಂದ ನಿಷ್ಠಾಪೂರ್ವಕವಾಗಿ ನುಡಿಯುತ್ತ ಇಲ್ಲವೆ ಬರೆಯುತ್ತಿರಬೇಕು. ತನ್ನ ಮನಸ್ಸಿಗೇ ಬಾರದ ನುಡಿ ವಿಧಾನಗಳು ಎರಡನೆಯವರನ್ನು ಹೇಗೆ ಸಮ್ಮತಿಸುವವು?.... ಬಯಲುವಿಚಾರಗಳಿಂದ ತುಂಬಿ

ದಂತೆ ಇದ್ದರೂ ಬರಿದಾದ ಕೆಲ ಪುಸ್ತಕ-ಲೇಖಗಳು ಕೆಲವೊಂದು ಕಾರಣದಿಂದ ತತ್ಕಾಲ ಮಾತ್ರವೇ ಸ್ತುತಿ ಕೀರ್ತಿಗಳನ್ನು ಪಡೆದು, ಅರ್ಧ ಜನಸಮೂಹವು "ಎಂಥ ಕವಿತೆ!" "ಎಂಥ ಗ್ರಂಥ!" "ಎಂಥ ನಾಟಕ!" "ಎಂಥ ವಿಭೂತಿ!" ಎಂತ ಅವನ್ನು ಹಾಡಿ ಹಾರೈಸುತ್ತಿದ್ದರೂ, ಅಲ್ಲಿ ಜ್ಞಾನ ಜ್ಯೋತಿಯು ಪೂರ್ಣಪ್ರದೀಪ್ತವಾಗಬೇಕಾದರೆ ಇನ್ನೂ ತೈಲಸಾಹಿತ್ಯವು ಎಷ್ಟೋ ಬೇಕು.... ಜೀವನವೇ ಪುನರುಜ್ಜೀವನಕ್ಕೆ ಸಮರ್ಥವು; ನಾವು ಎಷ್ಟು ಬೆಳೆದಾಡಿದರೂ ನಮ್ಮ ಬೆಲೆಯಿದ್ದಷ್ಟೇ ಬೆಲೆ ಬಾಳುವೆವು.

ಭಾಷಾಜ್ಞಾನಸಂಪಾದಿತವಾದ ಕೀರ್ತಿಯು ದೈವಾಧೀನವಲ್ಲ. ಪುಸ್ತಕವು ಪ್ರಕಟವಾದ ಕ್ಷಣವೇ ಅದನ್ನು ಅರ್ಧಮರ್ಧ ಓದಿ ಅದರ ದೈವನಿರ್ಣಯವನ್ನು ಮಾಡುವ ಅಧಿಕಾರವು ವಾಚಾಲರಾದ ಸರಸ್ವತೀಪುತ್ರರದಲ್ಲ; ಈ ನಿರ್ಣಯದಾನಕ್ಕೆ ಅಧಿಕಾರೀ ವರ್ಗವು ಬೇರೆಯಿರುವದು. ಹಣದಾಸೆ, ಸ್ತುತಿಯ ಲಾಲಸೆ, ಹಾಗೂ ಭೀತಿಯ ಬೆದರಿಕೆ ಮುಂತಾದ ಯಾವ ಉಪಾಯಗಳಿಗೂ ಒಳಗಾಗದಂಥದೊಂದು ನಿರ್ಮಲವಾದ ನಿರ್ಣಾಯಕರ ಸಭೆಯು ಪ್ರತಿಯೊಂದು ಸಮಾಜದಲ್ಲಿರುತ್ತದೆ. ಅಲ್ಲಿಯೇ ಕೀರ್ತಿಗೆ ಯೋಗ್ಯಾಯೋಗ್ಯರ ವಿಚಾರವಾಗುವದು. ಬಾಳಲಿಕ್ಕೆ ಯೋಗ್ಯವಿದ್ದಂಥ ಪುಸ್ತಕಗಳೇ ಬಾಳುತ್ತವೆ. ಸುವರ್ಣಾಕ್ಷರಗಳಲ್ಲಿ ಮುದ್ರಿತವಾದ ಪುಸ್ತಕವಾದರೂ ಅಂತರಂಗದಲ್ಲಿ ತತ್ವಾಭಿನಿವೇಶನವಿಲ್ಲದಿದ್ದರೆ ಅದು ಸ್ಮೃತಿಪಥವನ್ನು ಹೊಂದಲಿಕ್ಕೇಬೇಕು.... ಯಾವ ಪುಸ್ತಕವನ್ನು ಯಾರೂ ಬರೆಯಬೇಕಾಗಿಲ್ಲ; ಅದು ತನ್ನನ್ನು ತಾನೇ ಬರೆದುಕೊಳ್ಳುತ್ತದೆ...."

ತಮ್ಮ ಸಂಪಾದಕೀಯ ಸೂತ್ರವೆಂದು ಅವರೇ ಹೇಳಿದ ಈ ಮಾತುಗಳು ಆಚಾರ್ಯರ ಎಲ್ಲ ಬರೆವಣಿಗೆಯ ಹಿಂದೆ ಇದ್ದ ಅವರ ಮನೋವೃತ್ತಿಯನ್ನು ಮಾರ್ಮಿಕವಾಗಿ ಚಿತ್ರಿಸುತ್ತವೆ. "What I must do is all that concerns me, not what the people think" ಹೂದೋಟದಲ್ಲಿ ಇಂದು ಅರಳಿದ ಹೂ ನಿನ್ನೆ ಅರಳಿದ್ದನ್ನು ನೆನೆಸುತ್ತದೆಯೇ? ಅಥವಾ ನಾಳೆ ಅರಳುವದನ್ನು ನೆನೆದು ಮರುಗುತ್ತದೆಯೇ? ಗುಲಾಬಿಯನ್ನು ನೋಡಿ ಮಲ್ಲಿಗೆ ಅರಳದೆ ಇರುತ್ತದೆಯೆ? ಅದೂ ಅರಳುತ್ತದೆ, ಇದೂ ಅರಳುತ್ತದೆ.

ಎಲ್ಲರ ಹೃದಯಮೊಗ್ಗೆಗಳೂ ಅರಳಬೇಕಾದ್ದೆ. ಆಚಾರ್ಯರೂ ಈ ಬರೆಹಗಳಲ್ಲಿ ತಮ್ಮ ಹೃದಯಮೊಗ್ಗೆಗಳನ್ನು ಅರಳಿಸಿದ್ದಾರೆ, ವಿಚಾರಸುಗಂಧವನ್ನು ಬೀರಿದ್ದಾರೆ.

ದಿವಂಗತ **ವಾಸುದೇವಾಚಾರ್ಯರು** ಬರೆದ ಸಾಹಿತ್ಯದ ಮೊತ್ತವನ್ನು ಮಾತ್ರ ಇಲ್ಲಿ ಸೂಚಿಸಿದಂತಾಗಿದೆ. ಇನ್ನು ಮುಂದಿನ ಅವರ ಗ್ರಂಥಗಳಲ್ಲಿ ಆಚಾರ್ಯರ ವ್ಯಕ್ತಿಪರಿಚಯ ಸಾಹಿತ್ಯಪರಿಚಯಗಳನ್ನು ಸ್ವಲ್ಪ ವಿಸ್ತಾರವಾಗಿಯೆ ಬರೆಯಬೇಕೆಂದಿದ್ದರಿಂದ ಇಲ್ಲಿಗೇ ಮುಗಿಸುತ್ತೇನೆ.

— ಜಿ. ಬಿ. ಜೋಶಿ

# ಪ್ರಕಾಶಕರ ಮಾತು

ನಾನು ಮನೋಹರ ಗ್ರಂಥಮಾಲೆಯ ಸಂಪಾದಕರಾದ ಶ್ರೀ. ಜಿ. ಬಿ. ಜೋಶಿಯವರ ಸಹಾಯದಿಂದ ದಿವಂಗತ ಕೆರೂರ ವಾಸುದೇವಾಚಾರ್ಯರು ಬರೆದ ಸಾಹಿತ್ಯವನ್ನೆಲ್ಲ ಒಂದು ಕ್ರಮಬದ್ಧವಾದ ರೀತಿಯಲ್ಲಿ ಪುಸ್ತಕರೂಪವಾಗಿ ಪ್ರಕಟಿಸಬೇಕೆಂದೆಣಿಸಿ ಈ "ವಾಸುದೇವ ಸಾಹಿತ್ಯರತ್ನಮಾಲೆ"ಯನ್ನು ಪ್ರಾರಂಭಿಸಿದ್ದೇನೆ. ಐತಿಹಾಸಿಕ ಕಾದಂಬರಿಯಾದ ಈ "ಯವನಸೈರಂಧ್ರಿ"ಯು ಆ ಮಾಲೆಯಲ್ಲಿಯ ನಾಲ್ಕನೆಯ ರತ್ನ.

ನಂಜನಗೂಡಿನ ಸತಿಹಿತೈಷಿಣೀ ಗ್ರಂಥಮಾಲೆಯ ಸಂಪಾದಿಕೆಯರಾದ ಶ್ರೀಮತಿ ತಿರುಮಲಾಂಬಾ ಅವರು ದಿವಂಗತ ವಾಸುದೇವಾಚಾರ್ಯರ ಮೇಲಿನ ತಮ್ಮ ಗೌರವದಿಂದ, ತಮ್ಮಲ್ಲಿದ್ದ 'ಸಚಿತ್ರಭಾರತ'ದ ಮೊದಲ ಸಂಪುಟವನ್ನು ಸಮಯಕ್ಕೆ ಒದಗಿಸಿಕೊಡದಿದ್ದರೆ ಈ ಕಾದಂಬರಿಯು ಈಗ ಮೂವತ್ತೆಂಟು ವರ್ಷಗಳ ವರೆಗೆ ಕಳೆದಂತೆ ಇನ್ನು ಮುಂದೆಯೂ —ಎಷ್ಟು ಕಾಲದ ವರೆಗೊ ಹೇಳಲು ಬರುವಂತಿಲ್ಲ— ಅಜ್ಞಾತವಾಸವನ್ನು ಕಳೆಯ ಬೇಕಾಗುತ್ತಿತ್ತು. ಆದರೆ ಸಕಾಲಕ್ಕೆ ನೆರವಿಗೆ ಬಂದು ಕತ್ತಲೆಯಲ್ಲಿದ್ದ ಈ ಕೃತಿರತ್ನವನ್ನು ಬೆಳಕಿಗೆ ತರಲು ಅನುವು ಮಾಡಿಕೊಟ್ಟದ್ದಕ್ಕಾಗಿ ಶ್ರೀಮತಿ ತಿರುಮಲಾಂಬಾ ಅವರ ಉಪಕಾರವನ್ನು ಸ್ಮರಿಸುತ್ತೇನೆ. ಈ ಮೊದಲೆ ಸಚಿತ್ರಭಾರತದ ಸಂಪುಟಗಳನ್ನು ಕೊಟ್ಟು ಗ್ರಂಥಪ್ರಕಟನೆಗೆ ಸಹಾಯ ಮಾಡಿದ ಹುಬ್ಬಳ್ಳಿಯ ಶ್ರೀ. ಸರಸ್ವತಿ ವಿದ್ಯಾರಣ್ಯ ವಾಚನಾಲಯದ ಸಂಚಾಲಕರಿಗೂ ಶ್ರೀ. ಮಂಗಳವೇಢೆ ಶ್ರೀನಿವಾಸರಾಯರಿಗೂ ನಾನು ಋಣಿಯಾಗಿದ್ದೇನೆ.

—ಧೀರೇಂದ್ರ ವಾ. ಕೆರೂರ

# ಯವನ ಸೈರಂಧ್ರೀ

## ಮೊದಲನೆಯ ಅಧ್ಯಾಯ

### ಕಥಾಸಂದರ್ಭ

ಪ್ರತಾಪಶಾಲಿಯಾದ ಅಕಬರಬಾದಶಹನು ಒಳ್ಳೇ ಸಾಹಸದಿಂದಲೂ, ಪರಾಕ್ರಮದಿಂದಲೂ ಅನೇಕ ರಾಷ್ಟ್ರಗಳನ್ನು ಮುರಿದು ಹಿಂದುಸ್ಥಾನದಲ್ಲಿ ಪ್ರಚಂಡವಾದ ಸಾಮ್ರಾಜ್ಯವನ್ನು ಸ್ಥಾಪಿಸಿ ವೈಭವದಿಂದ ರಾಜ್ಯವನ್ನಾಳಿ ಪ್ರಜಾರಂಜನವನ್ನು ಮಾಡುತ್ತ ಅಖಂಡವಾದ ಕೀರ್ತಿಯನ್ನು ಸಂಪಾದಿಸಿದನು. ಅಕಬರನ ಪೂರ್ವದಲ್ಲಿ ಪೃಥ್ವಿಯ ಮೇಲೆ ಅನೇಕ ಸಣ್ಣದೊಡ ಸಾಮ್ರಾಜ್ಯಗಳಾಗಿಹೋದವು. ಆದರೆ ಶತ್ರುಗಳನ್ನು ಶಸ್ತ್ರದಿಂದಲೂ, ಪರಾಜಿತರನ್ನು ಪ್ರೇಮದಿಂದಲೂ, ವಿದ್ವಜ್ಜನರನ್ನು ಔದಾರ್ಯದಿಂದಲೂ ತನ್ನ ವಶದಲ್ಲಿಟ್ಟುಕೊಂಡ ಮಹಾತ್ಮನಾದ ಅಕಬರಚಕ್ರವರ್ತಿಗೆ ಸರಿಯಾದ ಚಕ್ರವರ್ತಿಯು ಎಲ್ಲಿಯೂ ಇರಲಿಲ್ಲ.

ಅಕಬರನ ತಂದೆಯಾದ ಹುಮಾಯುನಬಾದಶಹನನ್ನು ಪಟ್ಟದಿಂದ ತಳ್ಳಿ ದಿಲ್ಲಿಯ ರಾಜ್ಯವನ್ನು ಆಕ್ರಮಿಸಿದ ಸತ್ವಶಾಲಿಯಾದ ಶೀರಶಹನ ವಂಶದವರು ಬಂಗಾಲದಲ್ಲಿ ಆಳುತ್ತಿದ್ದು ಅಕಬರಬಾದಶಹನಿಗೆ ವಿರೋಧಿಗಳಾಗಿದ್ದರು. ಬದ್ಧವೈರಿಗಳಾದ ಈ ಅಫಗಾನರ ಹೆಸರೇ ಅಳಿದುಬಿಡಬೇಕೆಂದು ನಿಶ್ಚಯಿಸಿ ಸ್ವತಃ ಅಕಬರನೇ ಪ್ರಬಲವಾದ ಸೇನೆಯನ್ನು ಕಟ್ಟಿಕೊಂಡು ಹೋಗಿ ಅಫಗಾನರ ಬಲವನ್ನು ಸಮೂಲವಾಗಿ ಮುರಿದು ಅವರನ್ನು ಬಂಗಾಲ ಪ್ರಾಂತದಿಂದ ಹೊರಗೆ ಹಾಕಿದನು.

ಸೋತರೂ ಹಿಂಜರಿಯದ ಕಲಿಗಳಾದ ಅಫಗಾನರಿಗೂ ವಿಜಯಿಗಳಾದ ಮೊಗಲರಿಗೂ ಅದೇ ಬಂಗಾಲ ಪ್ರಾಂತದಲ್ಲಿ ಆಗಾಗ್ಗೆ ಭಯಂಕರವಾದ ಕದನಗಳೆಸಗಿ ಅಲ್ಲಲ್ಲಿ ಅನಾಹೂತವಾದ ಹಾನಿಗಳಾಗುತ್ತಿದ್ದವು.

ಹಿಂದಕ್ಕೆ ಅಫಗಾನರ ಆಳಿಕೆಗೆ ಒಳಗಾಗಿದ್ದ ಜಮೀನದಾರರಲ್ಲಿ ಅನೇಕರು ತಮ್ಮ ಪೂರ್ವದ ಸುಲ್ತಾನನಾದ ದಾವುದಖಾನನ ಪಕ್ಷವನ್ನು ಕಟ್ಟಿಕೊಂಡು ಮೊಗಲರೊಡನೆ ಹೋರಾಡಿದ್ದರಿಂದ ಅವರೆಲ್ಲರೂ ಸೋತು ಹೋಗಿ ಈಗ ತಮ್ಮ ವತನ-ವೃತ್ತಿ, ಮನೆ-ಮಾರುಗಳಿಗೆ ಎರವಾಗಿ ದೇಶಭ್ರಷ್ಟ ರಾದರು. ಇಂಥ ಜಮೀನದಾರರಲ್ಲಿ ಬೀರನಗರದ ಭೂಪೇಂದ್ರನಾಥರಾಯ ನೆಂಬವನು ಒಬ್ಬನಾಗಿದ್ದನು. ಮೊಗಲರು ಬೀರನಗರವನ್ನು ಸುಲಿದು ಭೂಪೇಂದ್ರನ ಹೇರಳವಾದ ಸಂಪತ್ತನ್ನು ಎತ್ತಿಕೊಂಡು ಹೋದರು. ಅವನ ಗ್ರಾಮಗಳ ಸುತ್ತಲಿನ ಸಮೃದ್ಧಿಮಯವಾದ ಬೆಳೆಗಳನ್ನು ದಂಡಾಳುಗಳೂ, ಕಳ್ಳರೂ ಕೂಡಿಯೇ ಹಾಳುಮಾಡಿದರು. ಭೂಪೇಂದ್ರನ ರಮ್ಯವಾದ ಉದ್ಯಾನಗಳನ್ನು ಬಾದಶಹನ ಆನೆಗಳು ಕಿತ್ತಿ ಈಡಾಡಿದವು. ಶೃಂಗರಿಸಿದ ಅವನ ದಿವಾನಖಾನೆಯಲ್ಲಿ ಸೈನಿಕರು ಕತ್ತಿಗಳನ್ನು ಕಟ್ಟಿದರು.

ಪರಾಜಿತನಾದ ಸುಲ್ತಾನ ದಾವುದಖಾನನಿಗೆ ಬಂಡುಗಾರನೆಂಬ ಕೀಳುತರದ ಹೆಸರು ಬಂದಿತು. ಅವನು ವೈಭವದಿಂದ ಆಳಿದ ರಾಜ್ಯದಲ್ಲಿಯೇ ಅವನಿಗೆ ನಿಂತು ನೀರು ಕುಡಿಯಲಿಕ್ಕೆ ಸ್ಥಳವಿಲ್ಲದೆ ಹೋಯಿತು. ಅವನ ಪಕ್ಷವನ್ನು ಕಟ್ಟಿದ ಜಮೀನದಾರರೆಲ್ಲರೂ ದೇಶಭ್ರಷ್ಟರಾಗಿ ಅನನ್ಯಗತಿ ಯಾಗಿ ತಿರುಗಿದರು. ಇನ್ನೇನು ಗತಿಯೆಂದು ಬಾಯಿಬಿಡುತ್ತ ದಾವುದ ಖಾನನು ಕಡೆಗೆ ಅಕಬರನಿಗೆ ಶರಣಾಗತನಾದನು. ಪರಮೋದಾರನಾದ ಬಾದಶಹನು ದಾವುದಖಾನನಿಗೆ ಜೀವದಾನ ಕೊಟ್ಟು ಅವನು ಮತ್ತೆ ಬಂಗಾಲಕ್ಕೆ ಬರಕೂಡದಂತೆ ಒಡಂಬಡಿಸಿಕೊಂಡು ಅವನನ್ನು ಓಡಿಸಾ ಪ್ರಾಂತಕ್ಕೆ ಅಟ್ಟಿಬಿಟ್ಟನು. ಆಗ ಬಂಗಾಲದ ಜಮೀನದಾರರೆಲ್ಲರೂ ಅಕಬರನ ಆಳಿಕೆಗೆ ಒಪ್ಪಿಕೊಂಡು ತಮ್ಮ ತಮ್ಮ ಗ್ರಾಮಗಳಿಗೆ ಬಂದು ನಿಂತುಕೊಂಡು ಸುಖದಿಂದಿದ್ದರು.

ಮನುಷ್ಯನು ಸರ್ವಸ್ವವನ್ನು ಕಳಕೊಂಡರೂ ಆಶೆಯು ಕಡಿಮೆಯಾಗದೆ ಅವನಲ್ಲಿ ವಿಪುಲವಾಗಿ ಉಳಿಯುವದು. ( ಸತ್ತಬಳಿಕಾದರೂ ಆಶೆ ತಪ್ಪುವ ದಿಲ್ಲೆಂದು ಭೂತಗಳಲ್ಲಿ ನಂಬಿಗೆಯ್ಯುವರು ಹೇಳುವದುಂಟು.) ತನ್ನವಸ್ತಿ ಕಾಸಿಗೆ ಪಂಚೇರಾದರೂ ದಾವುದಖಾನನು ಬಂಗಾಲದ ಹಂಬಲವನ್ನು ಬಿಡ ಲಿಲ್ಲ. ಜಾತ್ಯಾ ಅಫಗಾನರೇ ಕಡವಿನವರು; ಅವರಲ್ಲಿ ದಾವುದಖಾನನಂತೂ

ಅತಿ ಸಾಹಸಿಯೂ, ದುರ್ದಮನೂ ಆಗಿದ್ದನು. ಒಪ್ಪಂದವಾದ ಬಳಿಕ ಕೆಲವು ದಿವಸ ಮರೆಮಾತಿಗೆ ಬಿಟ್ಟು ದಾವುದಖಾನನು ಮತ್ತೆ ಬಂಗಾಲದಲ್ಲಿ ಅನರ್ಥ ಕರವಾದ ಗೊಂದಲವನ್ನೆಬ್ಬಿಸಿದನು. ಕಳ್ಳರೂ, ಪುಂಡರೂ ಇಂಥವರ ಯೋಗ್ಯತೆಯುವರೇ ಆದ ಕೆಲಜನ ಜಮೀನದಾರರೂ ಆ ಹತಭಾಗ್ಯನಾದ ಅಫಗಾನನ ಸುತ್ತಲೂ ನೆರೆದರು. ದಾವುದಖಾನನು ತಮ್ಮ ಪೂರ್ವದ ರಾಜನೆಂಬ ಮಿಥ್ಯಾಭಿಮಾನವನ್ನು ತಳೆದ ಕೆಲಜನ ಅದೂರದರ್ಶಿಗಳಾದ ಜಮೀನದಾರರೂ ದಾವುದಖಾನನ ಪಕ್ಷಕ್ಕೆ ಮತ್ತೆ ಸೇರಿದರು.

ಪರಸ್ಪರ ವಿರೋಧಿಗಳಾಗಿರುವ ಕೆಲ ಜನ ಜಮೀನದಾರರು ತಮ್ಮ ತಮ್ಮ ವೈರಿಗಳ ಪಾರಿಪತ್ಯಮಾಡುವದು ಇದೇ ಸಮಯವೆಂದೆಣಿಸಿ ದಾವುದ ಖಾನನ ಪಕ್ಷಕ್ಕೆ ಸೇರಿ ಅವನ ಸಹಾಯದಿಂದ ತಮ್ಮ ನೆರೆ ಜಮೀನದಾರರ ಆಸ್ತಿಗಳನ್ನೆಲ್ಲ ಹಾಳುಮಾಡಿದರು. ದೇವೀಪುರದ ಜಮೀನದಾರನಾದ ನವಕುಮಾರನು ತನಗೆ ವೈರಿಯಾಗಿರುವ ಭೂಪೇಂದ್ರನಾಥನ ನಾಶವನ್ನು ಬಯಸಿ ದಾವುದಖಾನನ ಪಕ್ಷಕ್ಕೆ ಸೇರಿಕೊಂಡು ಅಫಗಾನರ ದಂಡು ಕರಕೊಂಡು ಬಂದು ಬೀರನಗರದ ಮೇಲೆ ಸಾಗಿಹೋಗುವ ಉದ್ಯೋಗದಲ್ಲಿ ಇದ್ದನು.

ಭೂಪೇಂದ್ರನಾಥನು ದಾವುದಖಾನನನ್ನು ಕಂಡು “ ನೀವು ಅಕಬರ ಬಾದಶಹರೊಡನೆ ಒಪ್ಪಂದ ಮಾಡಿಕೊಂಡು ಬಂಗಾಲದಲ್ಲಿ ಮತ್ತೆ ಕಾಲು ಇಡುವದಿಲ್ಲೆಂದು ಆಣೆ ಮಾಡಿದ್ದೀರಿ. ಈಗ ನೀವು ವಚನಭ್ರಷ್ಟರಾಗುವರಲ್ಲದೆ ಅನೇಕ ಜನ ಜಮೀನದಾರರ ಸ್ವಾಮಿನಿಷ್ಠೆಯನ್ನು ಕೆಡಿಸುತ್ತಲಿರುವಿರಿ. ನಿಮಗಂತೂ ಜಯವಾಗುವದು ಸುಳ್ಳುಮಾತು. ಅಕಬರಬಾದಶಹನ ಸೈನ್ಯದ ಮುಂದೆ ನೀವು ಹಿಡಿತಂದ ನಾಯಿಗಳು ಎಷ್ಟುಮಟ್ಟಿಗೂ ನಿಲ್ಲಲಾರವು. ನಿಮ್ಮ ಗತಿ ಏನಾಗುವುದೋ ದೇವರೇ ಬಲ್ಲ. ವ್ಯರ್ಥವಾಗಿ ಬಡಜನರ ಪ್ರಾಣ ತೆಗೆದುಕೊಳ್ಳಬೇಡಿರಿ ” ಎಂದು ಉಪದೇಶಮಾಡಲು ದಾವುದಖಾನನೂ ಅವರ ಅನುಯಾಯಿಗಳಾದ ಕೆಲ ಜನ ಜಮೀನದಾರರೂ ಕಲಿತು ಬುದ್ಧಿಯ ಮಾತು ಹೇಳಬಂದ ಭೂಪೇಂದ್ರನ ಅಮರ್ಯಾದೆ ಮಾಡಿದರು.

ವೃದ್ಧನಾದ ಭೂಪೇಂದ್ರನು ಕ್ರುದ್ಧನಾಗಿ ತಾನಿನ್ನು ಯುದ್ಧಕ್ಕೆ ಸನ್ನದ್ಧನಾಗಬೇಕೆಂದೆಣಿಸಿ ತನ್ನ ಗ್ರಾಮಗಳಲ್ಲಿರುವ ಬಂಟರನ್ನೆಲ್ಲ ನೆರವಿ

ಕೊಂಡು ನಿಂತನು. ಬಾಗಿದ ಟೊಂಕಕ್ಕೆ ನಡುಕಟ್ಟು ಕಟ್ಟಿ, ಹಂಜೀಬುಟ್ಟಿ ಯಂತಿರುವ ತಲೆಗೆ ಮುಂದೀಲವನ್ನು ಬಿಗಿಯಾಗಿ ಸುತ್ತಿ, ವೃದ್ಧಾಪ್ಯಕ್ಕೆ ನಡುಗು ತ್ತಿರುವ ಕೈಯಲ್ಲಿ ಪ್ರಚಂಡವಾದ ಖಡ್ಗವನ್ನು ಹಿಡುಕೊಂಡು ನಿಂತ ಭೂಪೇಂದ್ರನಾಥನ ಆವೇಶವನ್ನು ಕಂಡು ಉದ್ರಿಕ್ತರಾದ ಸಾವಿರಾರು ಜನ ಬಂಟರು ಆ ಪಿತಾಮಹನ ಸಂರಕ್ಷಣೆಗಾಗಿ ಜೀವದ ಹಂಗುದೊರೆದು, ಏನು ಬಂದದ್ದು ಬರಲೆಂದು ಸಿದ್ಧರಾಗಿ ನಿಂತುಕೊಂಡರು. ಆದರೆ, ತೀರ ವೃದ್ಧ ನಾದ ಒಬ್ಬ ನಾಯಕನ ಕೈಕೆಳಗಿರುವ ಅಶಿಕ್ಷಿತರಾದ ತುಸು ಜನರು ದಾವುದ ಖಾನನ ದಂಡಾಳುಗಳಿಗೆ ಈಡಾಗುವುದುಂಟೆ? ಪುಣ್ಯಕ್ಕೆ ಅದೇ ದಿವಸವೇ ಅಕಬರನ ಸೇನಾಪತಿಗಳಾದ ರಾಜಾ ತೋಡರಮಲ್ಲನೂ, ಮುನಾಯುಮ್‍ ಖಾನನೂ ದಾವುದಖಾನನ ಪಾರಿಪತ್ಯಕ್ಕಾಗಿ ಹೊರಟು ಬಂದವರು ಅಕಸ್ಮಾತ್ತಾಗಿ ಬೀರನಗರಕ್ಕೆ ಬಂದರೆಂದೇ ಒಳಿತಾಯಿತು; ಇಲ್ಲದಿದ್ದರೆ ರಾಜನಿಷ್ಠನಾದ ಭೂಪೇಂದ್ರನಾಥನೂ ಅವನ ಅನುಯಾಯಿಗಳೂ ಅಫಗಾನರ ಕೈಗೆ ಸಿಕ್ಕು ಹೇಳಹೆಸರಿಲ್ಲದೆ ನುಚ್ಚುನುಚ್ಚಾಗಿ ಹೋಗುತ್ತಿದ್ದರು.

ಅಜಿಂಕ್ಯನೂ ಅರಿಭಯಂಕರನೂ ಆದ ತೋಡರಮಲ್ಲನು, ಪ್ರಚಂಡ ವಾದ ಸೇನೆಯನ್ನು ಕಟ್ಟಿಕೊಂಡು ತನ್ನ ರಾಜ್ಯದ ಸಮೀಪದಲ್ಲಿಯೇ ಬಂದು ಉಳುಕೊಂಡನೆಂಬ ವಾರ್ತೆಯನ್ನರಿತು ದಾವುದಖಾನನೂ, ಅವನ ಜೊತೆಯುವರಾದ ಬೇರೆ ಬಂಡುಗಾರರೂ ಹೆದರಿ ಬೀರನಗರದ ಉಸಾಬರಿ ಯನ್ನು ಬಿಟ್ಟುಕೊಟ್ಟು 'ಯಃಪಲಾಯತಿ ಸಜೀವತಿ' ಎಂದು ಆಖಮುಹಾ ಲಿನ ದಾರೀ ಹಿಡಿದು ಓಡಿಹೋದರು. ಈ ಸಮಾಚಾರವನ್ನರಿತು ರಾಜಾ ತೋಡರಮಲ್ಲನು ಆ ದಿವಸ ಬೀರನಗರದಲ್ಲಿಯೇ ಉಳುಕೊಂಡು ಭೂಪೇಂದ್ರ ನಾಥನ ಆತಿಥ್ಯವನ್ನು ಸ್ವೀಕರಿಸುವವನಾದನು. ಭೀಷ್ಮನಂತಿರುವ ವೃದ್ಧನಾದ ಭೂಪೇಂದ್ರನಾಥನ ಸಾಹಸವನ್ನೂ, ಅವನು ಮಾಡಿದ ಸ್ವಾಮಿಸೇವೆಯನ್ನೂ ಅರಿತು ತೋಡರಮಲ್ಲನು ಪರಮ ಸಂತುಷ್ಟನಾಗಿ ಬೀರನಗರದವರು ಸರಕಾರಕ್ಕೆ ಕೊಡತಕ್ಕ ಕಪ್ಪವನ್ನು ಇನ್ನುಮೇಲೆ ಬಾದಶಹರು ಉಚಿತವಾಗಿ ಬಿಟ್ಟುಕೊಡುವರೆಂದು ಆಶ್ವಾಸನವನ್ನು ಕೊಟ್ಟನು.

ಮರುದಿವಸವೇ ತೋಡರಮಲ್ಲನು ಅಫಗಾನರ ಬೆನ್ನಟ್ಟಿ ಆಖಮುಹಾ ಲಿನ ಕಡೆಗೆ ನಡೆದನು. ಇದಿನ್ನು ತನ್ನ ಸಮಾಪ್ತಿಯ ಕಾಲವೇ ಎಂದೆಣಿಸಿ

ದಾವುದಖಾನನು ತೋಡರಮಲ್ಲನಿಗೆ ಎದುರಾಗಿ ನಿಂತನು. ಅಟ್ಟಿದ ಬೆಕ್ಕು ತಿರುಗಿ ನಿಂತು ಕುತ್ತಿಗೆಗೆ ಹಾರುವಂತೆ ಆ ಅಫಗಾನ ವೀರನು ಜೀವದ ಹಂಗುದೊರೆದು ಒಳ್ಳೇ ಆವೇಶದಿಂದ ಯುದ್ಧ ಮಾಡುತ್ತಿರುವದನ್ನು ಕಂಡು ತೋಡರಮಲ್ಲನಂಥ ಆಹವಮಲ್ಲನಿಗೆ ಕೂಡ ವಿಸ್ಮಯವಾಯಿತು. ಆದರೂ ಪುಣ್ಯಪ್ರತಾಪಿಯಾದ ಅಕಬರಬಾದಶಹನ ಬಲಗೈಯಂತಿರುವ ಚಂಡ ವಿಕ್ರಮನಾದ ಸೇನಾಪತಿಯ ಮುಂದೆ ಬಂಡುಗಾರನ ಆಟವು ಎಲ್ಲಿಯವರೆಗೆ ಸಾಗುವದು ? ಆಖಮಹಾಲಿನ ಯುದ್ಧದಲ್ಲಿ ದಾವುದಖಾನನ ಸೈನ್ಯವೆಲ್ಲ ನಿಃಶೇಷವಾಗಿ ನಷ್ಟವಾಯಿತು. ಕ್ಷಮೆಗೆ ಅಯೋಗ್ಯನಾದ ದಾವುದಖಾನನನ್ನು ಹಿಡಿದು ತೋಡರಮಲ್ಲನು ಗಲ್ಲಿಗೆ ಹಾಕಿಸಿ ಬಂಗಾಲದಲ್ಲಿಯ ಬಂಡನ್ನು ಸಮೂಲವಾಗಿ ಮುರಿದನು.

ಬಾದಶಹನಿಗೆ ದ್ರೋಹಿಗಳಾಗಿ ವರ್ತಿಸಿ ದಾವುದಖಾನನ ಪಕ್ಷಕ್ಕೆ ಸೇರಿದ ಜಮಿಾನದಾರರ ವತನವೃತ್ತಿಗಳನ್ನು ತೋಡರಮಲ್ಲನು ಜಪ್ತಿಯಲ್ಲಿ ಇಡಿಸಿದನು. ದೇವೀಪುರದ ಜಮಿಾನದಾರನಾದ ನವಕುಮಾರನ ಆಸ್ತಿಯನ್ನು ಕೂಡ ಬಾದಶಹನ ಆಜ್ಞೆಯಾಗುವವರೆಗೆ ಬೀರನಗರದ ಭೂಪೇಂದ್ರನಾಥನು ತನ್ನ ಕೈಯಲ್ಲಿ ಇಟ್ಟುಕೊಂಡು ಅದರ ಉತ್ಪನ್ನವನ್ನು ಆವನೇ ತೆಗೆದುಕೊಳ್ಳಬೇಕೆಂದು ತೋಡರಮಲ್ಲರಾಜನು ವಿಧಿಸಿದನು. ನವಕುಮಾರನೂ ಉಳಿದ ಜಮಿಾನದಾರರೂ ತಾವು ಮಾಡಿದ ದ್ರೋಹಕ್ಕಾಗಿ ಕೂಳಿಲ್ಲದೆ ದೇಶ ದೇಶ ತಿರುಗಿದರು. ಕಡೆಗೆ ಲೋಕಸಂಗ್ರಹದಕ್ಷನಾದ ಅಕಬರಬಾದಶಹನು ಅವರೆಲ್ಲರಿಗೂ ಕ್ಷಮೆ ತೋರಿಸಿ ಕೆಲವು ದಿವಸ ಅವರು ಚನ್ನಾಗಿ ನಡಕೊಂಡರೆ ಅವರವರ ಜಮಿಾನದಾರಿಗಳನ್ನು ಅವರವರಿಗೆ ಬಿಟ್ಟುಕೊಡಬೇಕೆಂದು ತೋಡರಮಲ್ಲನಿಗೆ ಆಜ್ಞಾಪಿಸಿದನು.

ಆ ಸಮಯಕ್ಕೆ ಬೀರನಗರದ ಭೂಪೇಂದ್ರನಾಥನು ತೀರಿಕೊಂಡಿದ್ದನು. “ ನೀನು ಬೀರನಗರದ ಜಮಿಾನದಾರಿಯನ್ನೂ ಆದಕ್ಕೆ ಹೊಂದಿರುವ ದೇವೀಪುರದ ಜಮಿಾನದಾರಿಯನ್ನೂ ಒಳ್ಳೇ ವ್ಯವಸ್ಥೆಯಲ್ಲಿ ಇಟ್ಟು ಅಲ್ಪವಯಸ್ಕರಾದ ಭೂಪೇಂದ್ರನಾಥನ ಮೊಮ್ಮಕ್ಕಳ ಸಂರಕ್ಷಣೆಯನ್ನು ಅವರು ಪ್ರಬುದ್ಧರಾಗುವವರೆಗೆ ಚನ್ನಾಗಿ ಮಾಡಿದ್ದು ಬಾದಶಹರ ದಿವ್ಯಚಿತ್ತಕ್ಕೆ ವಿದಿತವಾದದ್ದಾದರೆ ದೇವೀಪುರದ ಆಸ್ತಿಯು ನಿನಗೆ ಮರಳಿ ದೊರಕುವದು ”

ಎಂದು ಹೇಳಿ ತೋಡರಮಲ್ಲನು ಭೂಪೇಂದ್ರನ ಮೊಮ್ಮಕ್ಕಳನ್ನೂ ಅವರ ಆಸ್ತಿಯನ್ನೂ ನವಕುಮಾರನ ಸ್ವಾಧೀನಮಾಡಿಸಿ ಹೊರಟು ಹೋದನು.

ಆ ಪ್ರಕಾರ ನವಕುಮಾರನು ಬೀರನಗರಕ್ಕೆ ಸಹಕುಟುಂಬನಾಗಿ ಬಂದು ಅಲ್ಲಿಯ ಅರಮನೆಯಲ್ಲಿ ನಿಂತುಕೊಂಡನು. ನವಕುಮಾರನಿಗೆ ಸುಶೀಲಾ ದೇವಿ ಎಂಬ ಹೆಂಡತಿಯೂ, ಹೇಮಲತಾ ಎಂಬ ಲಾವಣ್ಯವತಿಯಾದ ಮಗಳೂ ಇದ್ದರು. ನವಕುಮಾರನ ತಮ್ಮನ ಮಗನಾದ ಶ್ರೀಶಚಂದ್ರನೆಂಬ ಹುಡುಗನೂ ಅವನ ಬಳಿಯಲ್ಲಿಯೇ ಇದ್ದನು.

ಭೂಪೇಂದ್ರನ ಮೊಮ್ಮಕ್ಕಳೆಂದರೆ ನರೇಂದ್ರನಾಥನೆಂಬ ಚಿಕ್ಕ ಬಾಲಕನೂ, ಜಗತ್ಸುಂದರಿ ಎಂಬ ನರೇಂದ್ರನ ತಂಗಿಯೂ ಹೀಗೆ ಇಬ್ಬರೇ ಇದ್ದರು. ನವಕುಮಾರನು ಬೀರನಗರಕ್ಕೆ ಬಂದಂದಿನಿಂದ ಶ್ರೀಶನೂ, ನರೇಂದ್ರನೂ, ಹೇಮಲತೆಯೂ, ಜಗತ್ಸುಂದರಿಯೂ ಜೊತೆಜೊತೆಯಿಂದ ಒಂದೇ ಮನೆಯಲ್ಲಿ ಉಲ್ಲಾಸದಿಂದ ಆಡುತ್ತಿದ್ದರು.

## ಎರಡನೆಯ ಅಧ್ಯಾಯ

### ಬಾಲಲೀಲೆ

ಬೀರನಗರಗ್ರಾಮವು ರಾಜಮಹಾಲ ಪ್ರಾಂತದಲ್ಲಿದ್ದ ಅತಿ ರಮಣೀಯವಾದ ಒಂದು ಪ್ರದೇಶದಲ್ಲಿ ಇತ್ತು. ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತ ಬರುವ ಗಂಗಾನದಿಗೆ ರಾಜಮಹಾಲದ ಪರ್ವತವು ಅಡ್ಡಾಗಿ ನಿಂತದ್ದರಿಂದ ಆ ಮಹಾನದಿಯು ಅಲ್ಲಿಂದ ಝುರ್ರನೆ ದಕ್ಷಿಣಕ್ಕೆ ಇಳಿದು ಬೀರನಗರದ ಮುಂದೆ ಹಾಯ್ದು ರಭಸದಿಂದ ನಡೆದಿತ್ತು. ಆ ಗ್ರಾಮದ ಎದುರಿನಲ್ಲಿಯೇ ನದಿಯಾಚೆಗೆ ಕಾಣುವ ಉನ್ನತವಾದ ಆ ಪರ್ವತವು ವಿಧವಿಧವಾಗಿ ಸೀಳಿದ ಕೋಡುಗಲ್ಲುಗಳುಳ್ಳದ್ದಾಗಿ ಬಹು ಚಮತ್ಕಾರವಾಗಿ ತೋರುತ್ತಿತ್ತು. ಈಚೆಗೆ ಊರ ಹಿಂಭಾಗದಲ್ಲಿ ಬೆಳೆಗಳಿಂದ ನಲಿದಾಡುವ ಹೊಲಗಳೂ, ಮಧುರವಾದ ಫಲಗಳಿಂದ ಬಾಗಿದ ಕೊಂಬೆಗಳುಳ್ಳ ಮಾಮರಗಳ ತೋಪು

ಗಳೂ, ಮಕರಂದವನ್ನು ಬೀರುತ್ತಿರುವ ಪುಷ್ಪೋದ್ಯಾನಗಳೂ ಬಹು ಪ್ರೇಕ್ಷಣೀಯವಾಗಿ ಕಾಣುತ್ತಿದ್ದವು. ಮಧ್ಯದಲ್ಲಿ ಹರಿಯುತ್ತಿರುವ ಗಂಗಾನದಿಯ ವಿಸ್ತಾರವಾದ ಪಾತ್ರವು, ಭೂದೇವಿಯು ತನ್ನ ಹಸರು ಸೀರೆಯ ಮೇಲೆ ಒನಪಿನಿಂದ ಇಟ್ಟುಕೊಂಡ ಬೆಳ್ಳಿಯ ಡಾಬದಂತೆ ಕಂಗೊಳಿಸುತ್ತಿತ್ತು.

ಇಂಥ ಫಲಪ್ರದವಾಗಿರುವ ಪ್ರದೇಶದಲ್ಲಿದ್ದ ಬೀರನಗರ ಗ್ರಾಮವು ಸಂಪತ್ತಿನಿಂದ ತುಂಬಿತುಳುಕುತ್ತಿತ್ತೆಂದು ಹೇಳಲವಶ್ಯವಿಲ್ಲ. ಸಮಶೀತೋಷ್ಣ ಕಟಿಬಂಧದಲ್ಲಿರುವ ಆ ಪ್ರಾಂತದ ಜನರು ರೂಪವಂತರೂ, ದೃಢಾಂಗರೂ, ರುಚಿರವಾದ ಅಂಗಕಾಂತಿಯುಳ್ಳವರೂ ಆಗಿದ್ದರು. ಗರಡಿಯ ಸಾಧಕಮಾಡಿ ವಜ್ರಾಂಗಿಗಳಂತೆ ಮೆರೆಯುತ್ತಿರುವ ಒಕ್ಕಲಿಗರ ಹುಡುಗರು ಪ್ರೇಮಮಯವಾದ ಲಾವಣಿಗಳನ್ನು ಹಾಡುತ್ತ ಸೊಕ್ಕಿದ ಹೋರಿಗಳನ್ನು ಹಿಡುಕೊಂಡು ಹೊಲಕ್ಕೆ ಹೋಗುತ್ತಿದ್ದರು. ರೂಪವತಿಯರಾದ ತರುಣಿಯರು ರೇಶಿಮೆಯ ಸೀರೆಗಳನ್ನುಟ್ಟು ಬಂಗಾರದ ಆಭರಣಗಳನ್ನಿಟ್ಟು ಉಜ್ಜಿದ ಕೊಡಗಳನ್ನು ಬಗಲ್ಲಲ್ಲಿ ಇಟ್ಟುಕೊಂಡು ಪರಸ್ಪರರಿಗೆ ವಿನೋದಗೈಯುತ್ತ ಗಂಗೆಗೆ ಹೋಗಿಬರುತ್ತಿದ್ದರು.

ನಾವೆಗಳಲ್ಲಿ ಸರಕುಗಳನ್ನು ಹೇರಿ ಆರ್ಭಟೆಯಿಂದ ಹುಟ್ಟುಕಡೆಯುತ್ತ ಬರುತ್ತಿರುವ ನಾವಾಡಿಗರೂ, ತೆಪ್ಪಗಳಲ್ಲಿ ಕುಳಿತುಕೊಂಡು ಆನಂದದಿಂದ ತೇಲಾಡುತ್ತಿರುವ ಶ್ರೀಮಂತರೂ, ರಭಸದಿಂದ ಧಾವಿಸಿ ಬಂದು "ಜಯಗಂಗೆ" ಎಂದು ಕೂಗಿ ಟಣ್ಣನೆ ನದಿಯಲ್ಲಿ ಹಾರಿಕೊಂಡು ಈಸಾಡುತ್ತಿರುವ ತರುಣರೂ, ಟೊಂಕಮಟ ನೀರಲ್ಲಿಯೇ ನಿಂತು ಮಿಂದು, ತೊಯಿದ ಬಟ್ಟೆಗಳ ಮೂಲಕ ವ್ಯಕ್ತವಾಗಿರುವ ತಮ್ಮ ರಮ್ಯವಾದ ಅವಯವಗಳನ್ನು ಕಂಡು ನಾಚುತ್ತಿರುವ ಯುವತೀಜನರೂ ಜಗನ್ಮಾತೆಯಾದ ಗಂಗಾದೇವಿಗೆ ಪ್ರೇಮದಿಂದ ತೆಕ್ಕೆಬೀಳುತ್ತಿರುವ ಅರ್ಭಕರ ಸಮುದಾಯದಂತೆ ಕಾಣುತ್ತಿದ್ದರು. ಈ ಸುರನದಿಯ ತೀರದಲ್ಲಿರುವ ಸಣ್ಣಾದ ಉಸುಬು, ಹಿಡಿದರೆ ರೇಶಿಮೆಗಿಂತಲೂ ಮೆತ್ತಗಾಗಿ ಇರುವದರಿಂದ ಚಿಕ್ಕ ಬಾಲಕರೂ ಅಲ್ಲಿ ಉಲ್ಲಾಸದಿಂದ ಯಾವಾಗಲೂ ಆಡುತ್ತಿದ್ದರು.

ಒಂದು ದಿನ ಸಂಜೆಯಲ್ಲಿ ಶರತ್ಕಾಲದ ಶೋಭೆಯನ್ನು ನೋಡುತ್ತ ಇಬ್ಬರು ಬಾಲಕರೂ ಇಬ್ಬರು ಬಾಲಕಿಯರೂ ಜಾಹ್ನವಿಯ ರಮಣೀಯ

ವಾದ ಪುಲಿನದಲ್ಲಿ ಬಹು ಉಲ್ಲಾಸದಿಂದ ಚೆಲ್ಲಾಟವಾಡುತ್ತಿದ್ದರು. ಬಾಲಕಿಯರು ಒಬ್ಬರ ಕೈಗಳನ್ನು ಒಬ್ಬರು ಹಿಡಿದು ವಿಲಾಸದಿಂದ ಫುಗಡಿಯಾಡಿ ಆಡಿ ದಣಿದು ತೇಕುಹತ್ತಿ ಬಿದ್ದರೂ, ಬಿದ್ದ ಬಿದ್ದಲ್ಲಿಯೇ ಹೊಟ್ಟೆ ಹಿಡಿಸಲಾರದೆ ನಗುತ್ತಿದ್ದರು. ಬಾಲಕರು ಅನೇಕ ಜಾತಿಯ ಪುಷ್ಪಪಲ್ಲವಗಳನ್ನು ತಂದು ಅವುಗಳಲ್ಲಿ ಏನೇನೋ ರಚಿಸುತ್ತಿದ್ದರು.

"ಅಷ್ಟೇಕೆ ನಗುತ್ತಿರುವಿ ಜಗತ್‌ಸುಂದರಿ?" ಎಂದು ಅವಳ ಅಣ್ಣನಾದ ನರೇಂದ್ರನು ಪಲ್ಲವಮಂಜರಿಗಳಿಂದ ಒಂದು ಮುಕುಟವನ್ನು ಹೆಣಿಹೆಣಿಯುತ್ತ ಕೇಳಿದನು.

"ನಿನಗ್ಯಾಕೆ ಬೇಕು ಪಂಚಾಯತಿ?" ಎಂದು ಜಗತ್‌ಸುಂದರಿಯು ನಗುವದರಲ್ಲಿಯೇ ಅವಕಾಶ ಮಾಡಿಕೊಂಡು ಕೇಳಿದಳು.

"ನಾವು ಫುಗಡೀ ಆಡುತ್ತಿದ್ದೆವು; ಕೈಜಾರಿದ್ದರಿಂದ ಇಬ್ಬರೂ ಹಿಂದಕ್ಕೆ ಬಿದ್ದೆವಾದ್ದರಿಂದ ಜಗತ್‌ಸುಂದರಿಯು ನಗುತ್ತಾಳೆ" ಎಂದು ಹೇಮಲತೆಯು ವಿನೀತಳಾಗಿ ಹೇಳಿದಳು.

"ಪೆಟ್ಟು ತಗಲಲಿಲ್ಲವಷ್ಟೇ?" ಎಂದು ಶ್ರೀಶಚಂದ್ರನು ಪಲ್ಲವಗಳ ಹೆಣಿಕೆಯ ಮಧ್ಯಭಾಗದಲ್ಲಿ ಬಿಳಿ ಹೂಗಳ ಪಟ್ಟೆಯನ್ನು ಹಾಕಿ ಹಸುರುಮಯವಾದ ಪ್ರದೇಶದಲ್ಲಿ ಹರಿಯುತ್ತಿರುವ ಗಂಗಾನದಿಯ ನಕ್ಷೆಯನ್ನು ಮಾಡುತ್ತ ಮಮತೆಯಿಂದ ಕೇಳಿದನು.

ಜಗತ್‌ಸುಂದರಿಯು ತನ್ನ ಪುಟ್ಟದಾದ ಕೈ ನೋಡಿಕೊಂಡು "ಹೇಮಲತಾ, ನೋಡಿದಿಯಾ! ನನ್ನದೊಂದು ಸುಂದರವಾದ ಬಳೆ ಹೆಚ್ಚಿಹೋಯಿತು. ಅತ್ತೆಯವರು (ಸುಶೀಲಾದೇವಿ) ಏನೆಂದಾರು?" ಎಂದು ಚಿಂತಾಕ್ರಾಂತಳಾಗಿ ನುಡಿದಳು.

"ಹೆಚ್ಚಿದರೆ ಹೆಚ್ಚಿತು ಬಿಡು. ನಾನೂ ನನ್ನದೊಂದು ಬಳೆಯನ್ನು ಪಳ್ಳನೆ ಹೆಚ್ಚಿಕೊಂಡುಬಿಡುತ್ತೇನೆ. ಅವ್ವನು ನನಗೆ ಸಿಟ್ಟುಮಾಡಿದಾಗ ನಿನಗೆ ಮಾಡುವಳಷ್ಟೆ?" ಎಂದು ಹೇಮಲತೆಯು ಪ್ರೇಮದಿಂದ ಜಗತ್‌ಸುಂದರಿಯ ಕೈಹಿಡಿದು ನುಡಿದಳು.

ಅಷ್ಟರಲ್ಲಿ "ನನ್ನ ಕೃತಿ ಚೆನ್ನಾಗಿದೆ" "ನನ್ನ ಕೃತಿ ಚನ್ನಾಗಿದೆ" ಎಂದು ನರೇಂದ್ರನೂ ಶ್ರೀಶನೂ ಉದ್ರೇಕದಿಂದ ವಾಗ್ವಾದ ನಡೆಸಿದರು.

ಇಬ್ಬರೂ ತಮ್ಮ ತಮ್ಮ ಕೃತಿಗಳ ಸ್ತುತಿ ಮಾಡಿಕೊಳ್ಳುವವರೇ.\ ಅವರ ವಾದ ಮುಗಿಯುವದು ಹೇಗೆ? ಕಡೆಗೆ ಆ ವಾದವು ಹೇಮಲತಾ ಜಗತ್ ಸುಂದರಿಯರ ಪಂಚಾಯತಿಯ ಮುಂದೆ ಬಂದಿತು.

"ಹೇಮ್, ಈ ನನ್ನ ಮುಕುಟವನ್ನು ನೋಡು; ಶ್ರೀಶನ ಈ ಗಂಗಾ ನದಿಯ ಚಿತ್ರವನ್ನು ನೋಡು. ಯಾರದು ಚಂದಾಗಿದೆ ಹೇಳು. ಯಾರನ್ನೂ ಮೇಲು ಕಟ್ಟಗಿಟ್ಟ!" ಎಂದು ನರೇಂದ್ರನು ಅರ್ಥಿಯಾಗಿ ಕೇಳಿದನು.

ಜಗತ್‌ಸುಂದರಿಯು ತಾನು ಮುಂದಾಗಿ ಬಂದು ನರೇಂದ್ರನ ಮುಕುಟವನ್ನು ದಿಟ್ಟಿಸಿ ನೋಡಿ "ಪಿಸ್ಸ! ಏನು ಮುಕುಟವಿದು? ಕೆರಿಸೆಯಾಗಿದೆ. ಶ್ರೀಶನ ಚಿತ್ರ ನೋಡಬಾರದೆ? ಎಷ್ಟು ಚಂದಾಗಿದೆ!" ಎಂದು ನುಡಿದು ನಕ್ಕಳು.

"ಮರುಳೆ! ಹೋಗತ್ತ. ನಿನಗೆಲ್ಲಾ ತಿಳಿಯಬೇಕಾದರೆ ಹೀಗ್ಯಾಕೆ ಆಗುತ್ತಿತ್ತು!" ಎಂದು ನರೇಂದ್ರನು ಜಗತ್‌ಸುಂದರಿಯನ್ನು ಹಳಿದು ನುಡಿದನು.

"ಇಬ್ಬರ ಕೃತಿಗಳೂ ಚನ್ನಾಗಿ ಆಗಿವೆ. ಚಿತ್ರ ಬರೆಯುವದರಲ್ಲಿ ಜಾಣನಾದ ಶ್ರೀಶನು ಗಂಗಾತೀರದ ಶೋಭೆಯನ್ನು ಚನ್ನಾಗಿ ತೋರಿಸಿದ್ದಾನೆ. ನರೇಂದ್ರನು ಇತಿಹಾಸಪ್ರಿಯನೂ, ಸಾಹಸಿಯೂ ಆದ್ದರಿಂದ ಅವನು ಮುಕುಟದಂಥ ದೊಡ್ಡ ಕೆಲಸವನ್ನು ಕೈಕೊಂಡನು. ಅವನ ಕೃತಿಯಾದರೂ ನೋಡತಕ್ಕಂಥಾದ್ದಾಗಿದೆ. ನರೇಂದ್ರನು ಕೇದಗಿಯ ಮುಕುಟವನ್ನು ಮಾಡಿ ಅದರಲ್ಲಿ ಕೆಂಪು, ನೀಲ ಮುಂತಾದ ಬಣ್ಣದ ಹೂಗಳನ್ನು ಹಾಕಿದ್ದರೆ ಬಂಗಾರದ ಕಿರೀಟದಲ್ಲಿ ಮಾಣಿಕ, ಇಂದ್ರನೀಲ ಮುಂತಾದ ಮಣಿಗಳನ್ನು ಕೆತ್ತಿಸಿದಂತೆ ಕಾಣುತ್ತಿತ್ತು" ಎಂದು ಹೇಮಲತೆಯು ಬಹು ವಿಚಾರಮಾಡಿ ತನ್ನ ಅಭಿಪ್ರಾಯವನ್ನು ಕೊಟ್ಟಳು.

ತನ್ನ ಕೃತಿಗಿಂತಲೂ ಶ್ರೀಶನ ಕೃತಿಯು ಉತ್ಕೃಷ್ಟವಾದದ್ದೆಂದು ನರೇಂದ್ರನ ಮನಸ್ಸಿಗೇ ತಿಳದಿತ್ತು. ಇತ್ತ ಹೇಮಲತೆಯ ಅಭಿಪ್ರಾಯವಾದರೂ ಹಾಗೆಯೇ ಆದದ್ದು ಕಂಡು ಅವನಿಗೆ ತುಸು ಅಪ್ರತಿಷ್ಠೆಯಾಗಿ ಅಭಿಮಾನದ ಭರದಲ್ಲಿ ನರೇಂದ್ರನು ತನ್ನ ಮುಕುಟವನ್ನು ಪ್ರವಾಹದಲ್ಲಿ ಎಸೆದು ಅದು ತೇಲಿಹೋಗುತ್ತಿರುವದನ್ನು ನಿರೀಕ್ಷಿಸಿ ನೋಡುತ್ತ ನಿಂತನು.

" ನರೇಂದ್ರ, ಆ ಅಂದವಾದ ಮುಕುಟವನ್ನು ಹಾಗೇಕೆ ನೀರಲ್ಲಿ ಚಲ್ಲಿ ಕೊಟ್ಟೆ ? " ಎಂದು ಹೇಮಲತೆಯು ಕೇಳಿದಳು.

ನರೇಂದ್ರನು ತನ್ನ ಕ್ರುದ್ಧವಾದ ಮುಖವನ್ನು ಹೇಮಲತೆಯ ಕಡೆಗೆ ತಿರುವಿ " ಹೇಮ್, ಆ ಮುಕುಟವು ಚಂದವಾಗಿಲ್ಲೆಂದು ಮೊದಲು ಯಾಕೆ ಹೇಳಿದಿ? ನಾನು ಅದನ್ನು ನೀರಲ್ಲಿ ಹಾಕಿದ ಬಳಿಕ ಅದು ನಿನಗೆ ಚಂದವಾಗಿ ಕಂಡಿತಲ್ಲೆ ? " ಎಂದು ಅವಳ ಮುಖವನ್ನು ನೋಡದೆ ನುಡಿದನು.

" ನರೇಂದ್ರ, ಹಾಗೇಕೆ ಸಿಟ್ಟಾಗಿರುವಿ ? ನೋಡಿದಿಯಾ, ನಿನ್ನ ಮುಖವು ಹೇಗೆ ಕೆಂಜಗದಂತೆ ಕೆಂಪಾಗಿದೆ " ಎಂದು ಜಗತ್ಸುಂದರಿಯು ಕೇಳಿದಳು.

" ನರೇಂದ್ರನು ಪ್ರತ್ಯಕ್ಷ ಭೂಪೇಂದ್ರ ಮುತ್ತಾತರ ಮೊಮ್ಮಗನು. ಕೋಪವೆಂದರೆ ಅವನಲ್ಲಿ ಯಾವಾಗಲೂ ಸಿದ್ಧವೇ ಆಗಿರುವದು " ಎಂದು ಶ್ರೀಶನೆಂದನು.

ನರೇಂದ್ರನು ಭರ್‍ರನೆ ಶ್ರೀಶನ ಬಳಿಗೆ ಬಂದು ಅವನ ಕೈಹಿಡಿದು " ಶ್ರೀಶ, ನೀನು ಹೇಳುವಂತೆ ನನಗೆ ತುಸು ಕೋಪ ಬಂದಿತ್ತು ಸರಿ. ಯಾಕೆಂದು ಕೇಳಿದರೆ ಕಾರಣವೇ ಇಲ್ಲ. ಶ್ರೀಶ, ನೀವೆಲ್ಲರೂ ನನ್ನನ್ನು ಕ್ಷಮಿಸುವರಲ್ಲೆ ? " ಎಂದು ಮುಗುಳುನಗೆ ನಗುತ್ತ ಕೇಳಿದನು.

ನರೇಂದ್ರನ ಚಲುವಾದ ಮುಖದಲ್ಲಿ ಮುಗುಳುನಗೆ ಮಿನುಗುತ್ತಿರು ವದನ್ನು ಕಂಡು ಎಲ್ಲರಿಗೂ ಸಂತೋಷವಾಯಿತು. " ನರೇಂದ್ರ, ಒಂದು ನಿಮಿಷದಲ್ಲಿ ಕ್ರೋಧ ಮತ್ತೊಂದು ನಿಮಿಷದಲ್ಲಿ ಔದಾರ್ಯವನ್ನು ತಾಳು ವಂಥ ನಿನ್ನನ್ನು ಕ್ಷಮಿಸದಿರುವವರು ಯಾರು ? " ಎಂದು ಶ್ರೀಶನು ತಾನೂ ನಗುತ್ತ ನುಡಿದನು.

" ಶ್ರೀಶ, ಇದೇ ಮಾತು ಸತ್ಯವಾಗಿದ್ದರೆ ಕುಸ್ತೀ ಆಡೋಣ ಬಾ. ನಿನ್ನನ್ನು ಪ್ರೇಮದಿಂದ ಅಪ್ಪಿಕೊಂಡಂತೆಯೂ ಆಯಿತು, ವ್ಯಾಯಾಮವೂ ಆಯಿತು."

ಹದಿನೈದು ಹದಿನಾರು ವರ್ಷದ ವಯಸ್ಸಿನವರಾದ ಈ ಚಿಕ್ಕ ಜಟ್ಟಿ ಗಳು ತಮ್ಮ ಅಂಗಿಗಳನ್ನು ಕಳೆದು ಸಡ್ಡು ಹೊಡೆದು ಸಿಂಹಶಿಶುಗಳಂತೆ



ನಿಂತಿರಲು ಅವರ ಮನೋಹರವಾದ ಮೈಕಟ್ಟು ನೋಡಿ ಜಯಂತ ಕಾರ್ತಿಕೇಯರು ಕೂಡ ಮತ್ಸರಪಡಬಹುದಾಗಿತ್ತು. ತೆಳುವಾದ ಮೈಕಟ್ಟಿನವನಾದ ನರೇಂದ್ರನ ಅವಯವಗಳು ಹುರಿಕಟ್ಟಾಗಿದ್ದವು. ತುಸು ಉದ್ದವಾಗಿರುವ ಅವನ ಮುಖದಲ್ಲಿ ತೇಜಸ್ಸು ಉಕ್ಕುತ್ತಿತ್ತು. ವಿಶಾಲವಾದ ಕೆಂಗಣ್ಣಿನಲ್ಲಿ ಅವನು ಕಿಡಿಗಳನ್ನು ಕಾರುತ್ತಿರುವನೋ ಎಂಬಂತೆ ಭಾಸವಾಗುತ್ತಿತ್ತು. ಶ್ರೀಶನು ನರೇಂದ್ರನಿಗಿಂತಲೂ ತುಸು ಗಿಡ್ಡಾದ ಆಳು. ದುಂಡವಾಗಿರುವ ಅವನ ಮುಖಚಂದ್ರದಲ್ಲಿ ಯಾವಾಗಲೂ ಮೃದುಹಾಸವು ತೋರುತ್ತಿತ್ತು. ಶ್ರೀಶನ ದುಂಡಾದ ಅವಯವಗಳಲ್ಲಿ ಬಲವು ತುಂಬಿಕೊಂಡಿತ್ತು.

ಈರ್ವರೂ ಬಲ್ಲವರಾದ ಮಲ್ಲರಲ್ಲಿ ಕಲಿತವರಾದ್ದರಿಂದ ಅವರೊಂದು ಗಳಿಗೆಯವರೆಗೆ ಒಳ್ಳೇ ಉತ್ಸಾಹದಿಂದ ಕಾದಿದರು. ನರೇಂದ್ರನು ಯುಕ್ತಿಗಾರನಾದರೂ ದೃಢಾಂಗನಾದ ಶ್ರೀಶನ ಮುಂದೆ ಅವನಾಟ ಸಾಗಲೊಲ್ಲದು. ಶ್ರೀಶನ ಬಲವು ನರೇಂದ್ರನ ಯುಕ್ತಿಗಳ ಮುಂದೆ ವ್ಯರ್ಥವಾಯಿತು. ಕಡೆಗೆ ಸಮಕುಸ್ತಿಯಾಯಿತೆಂದು ಹೇಳಿ ಅವರು ಆಟವನ್ನು ಬಿಟ್ಟು ನದಿಯ ಘಾಟಿಗೆ ಹೋಗಿ ಮುಖ ತೊಳಕೊಂಡು ಬಂದು ಬಟ್ಟೆಗಳನ್ನು ತೊಟ್ಟುಕೊಂಡು ಕುಳಿತರು.

“ ಹೇಮಲತಾ, ನಮ್ಮ ಕುಸ್ತಿಯನ್ನು ನೀನು ನೋಡಿದಿಯಲ್ಲ? ಇನ್ನು ನೀನು ಹಾಡುವದನ್ನು ನಾವು ಕೇಳಬೇಕಾಗಿದೆ. “ ಕೃಷ್ಣ ಮುರಾರೀ ಬಿನತಿ ಕರತ ಕರ ಹಾರೀ ” ಎಂಬ ಪದವನ್ನು ಬಲು ಚೆನ್ನಾಗಿ ಹಾಡುವಿ. ಹಾಡಬಾರದೇ ? ” ಎಂದು ಶ್ರೀಶನು ಕೇಳಿದನು.

“ ಅಹುದು ಹೇಮಲತಾ, ಬಿಂದಾಪ್ರಸಾದನು ನಿನಗೆ ಹಾಡಲು ಬಹು ಸರಸವಾಗಿ ಕಲಿಸಿರುವನು ” ಎಂದು ನರೇಂದ್ರನು ತನ್ನ ಜರದ ಟೊಪ್ಪಿಗೆಯನ್ನು ಮುಗಿಲಿಗೆ ತೂರಿ ಹಿಡಿಯುತ್ತ ನುಡಿದನು.

“ ಜಗತ್‌ಸುಂದರಿಯು ನನ್ನ ಕೂಡ ಹಾಡಲೊಪ್ಪಿದರೆ ನಾನು ಹಾಡುವೆನು ” ಎಂದು ಹೇಮಲತೆಯು ತುಸು ಲಜ್ಜಿತಳಾಗಿ ನುಡಿದಳು.

“ ಆಗಲಿ ಇಬ್ಬರೂ ಕೂಡಿಯೇ ಹಾಡಿರಿ ” ಎಂದು ಶ್ರೀಶನು ತೀರ್ಪುಕೊಟ್ಟನು.

ಹನ್ನೆರಡು ಹದಿಮೂರು ವರುಷದವರಾದ ಆ ಮುದ್ದು ಬಾಲಕಿಯ ರೀರ್ವರೂ ಗಾಯಕನು ಕಲಿಸಿದಂತೆ ಮೆಟ್ಟಿನ ಮೇಲೆ ಬಹು ಸುಸ್ವರವಾಗಿ ಹಾಡಿದರು. ನರೇಂದ್ರನು ಚಪ್ಪಳೆ ಹೊಡೆದು ತಾಲ ಹಿಡಿದಿದ್ದನು. ಶ್ರೀಶನು ಬಾಯಿಯಿಂದೆ ಮದ್ದಲೆ ಬಾರಿಸಿದನು.

ಇಷ್ಟಾದ ಒಳಿಕ ಬಳಿಯಲ್ಲಿಯೇ ಕಾದುಕೊಂಡಿದ್ದ ಸೇವಕನು "ಧನಿಯರೆ, ನಡೆಯಿರಿನ್ನು, ಮನೆಗೆ ಹೋಗುವ ಹೊತ್ತಾಯಿತು." ಎಂದು ಹೇಳಿ ಅವರೆಲ್ಲರನ್ನು ಕರಕೊಂಡು ಹೋದನು.

## ಮೂರನೆಯ ಅಧ್ಯಾಯ

### ಕುಮತಿಯ ಕುಕಲ್ಪನೆಗಳು

ದೇವೀಪುರದ ಜಮಾನದಾರರಿಗೂ ಬೀರನಗರದವರಿಗೂ ತಲಾನುತಲೆ ವೈಮನಸ್ಸು. ಬೀರನಗರದ ಭೂಪೇಂದ್ರನಾಥನು ಬಹು ಪರಾಕ್ರಮಿಯೂ, ರಾಜಕಾರಣಗಳನ್ನು ಅರಿತವನೂ ಆಗಿದ್ದು ಅಫಗಾನರ ಆಳಿಕೆಯಲ್ಲಿ ಅಫಗಾನರಿಗೂ ಮೊಗಲರ ಆಳಿಕೆಯಲ್ಲಿ ಅಕಬರಬಾದಶಹನಿಗೂ ಮಾನ್ಯನಾಗಿದ್ದರಿಂದ ಅವನ ಬೆಳಕು ಯಾವಾಗಲೂ ಹೆಚ್ಚಾಗಿತ್ತು. ದೇವೀಪುರದ ನವಕುಮಾರನು ಸ್ವಾರ್ಥಪರಾಯಣನೂ, ಅಜ್ಞಾನಿಯೂ ಆದ್ದರಿಂದ ರಾಜ್ಯಕ್ರಾಂತಿಯ ಸಮಯದಲ್ಲಿ ಅವನು ಅನೇಕ ಅಚಾತುರ್ಯದ ಕೆಲಸಗಳನ್ನು ಮಾಡಿ ಕೇಡಿಗೆ ಈಡಾದನು. ಅವನು ಭೂಪೇಂದ್ರನ ಉಚ್ಛ್ರಾಯವನ್ನು ನೆನೆದು ಮತ್ಸರಪಟ್ಟು ಬೀರನಗರದವರೆಂದರೆ ಬೆಂಕೀ ಕಾರುತ್ತಿದ್ದನು. ಭೂಪೇಂದ್ರ ತೀರಿಕೊಂಡದ್ದರಿಂದ ಅವನು ಬೀರನಗರದ ವ್ಯವಸ್ಥಾಪಕನಾಗಿ ಬಂದಿದ್ದನು. ತೋಡರಮಲ್ಲನ ಅಂಜಿಕೆಗಾಗಿಯೂ, ಮುಂದೆ ತಾನು ಒಳ್ಳೇ ರೀತಿಯಿಂದ ನಡೆದರೆಯೇ ತನಗೆ ದೇವೀಪುರದ ಆಸ್ತಿಯು ಮರಳಿ ಸಿಕ್ಕುವದೆಂಬ ಆಶೆಗಾಗಿಯೂ ನವಕುಮಾರನು ನರೇಂದ್ರ ಜಗತ್‌ಸುಂದರಿಯರ ಸಂರಕ್ಷಣೆಯನ್ನು ಚನ್ನಾಗಿ ಮಾಡುತ್ತಿದ್ದನು.

ನವಕುಮಾರನ ಹೆಂಡತಿಯಾದ ಸುಶೀಲಾದೇವಿಯು ಬೀರನಗರದ ಮನೆತನದವಳಾದ್ದರಿಂದ ಅವಳಲ್ಲಿ ಬೀರನಗರದ ವಿಷಯವಾಗಿ ಅಭಿಮಾನ ವಿತ್ತು. ಸುಶೀಲಾದೇವಿಯು ದಯಾಳುವೂ, ಉದಾರಳೂ, ಸದಾಚಾರ ಸಂಪನ್ನೆಯೂ ಆದ್ದರಿಂದ ಅವಳ ಆರೈಕೆಯಲ್ಲಿ ನರೇಂದ್ರನೂ ಜಗತ್‌ಸುಂದರಿಯೂ ಸದ್ಗುಣಿಗಳೂ, ಸುಖಿಗಳೂ ಆಗಿ ಬೆಳೆದರು. ನವಕುಮಾರನು ಕೂಡ ಮಹಾತ್ಮಳಾದ ತನ್ನ ಹೆಂಡತಿಯೊಡನೆ ಆದರದಿಂದ ವರ್ತಿಸಿ ತಕ್ಕಮಟ್ಟಿಗೆ ಅವಳ ತಂತ್ರದಿಂದಲೇ ಎಲ್ಲ ಕೆಲಸಗಳನ್ನು ಮಾಡುತ್ತಿದ್ದನು.

ಬೀರನಗರ ದೇವೀಪುರದ ಮನೆತನಗಳಲ್ಲಿ ಮೊದಲು ಅನೇಕಾವರ್ತಿ ಶರೀರಸಂಬಂಧಗಳಾಗಿದ್ದರೂ ವೈಮನಸ್ಸು ಮುರಿಯದೆ ಇದ್ದ ಹಾಗೆಯೇ ಉಳಿದಿತ್ತು. ಇನ್ನು ದ್ವಿವಿಧವಾದ ಹೊಸ ಸಂಬಂಧಗಳನ್ನು ಮಾಡಿ ಪರಂಪರಾಗತವಾದ ಈ ದ್ವೇಷವನ್ನು ಮುರಿಯಬೇಕೆಂದೆಣಿಸಿ ಸುಶೀಲಾದೇವಿಯು ತನ್ನ ಮಗಳಾದ ಹೇಮಲತೆಯನ್ನು ನರೇಂದ್ರನಿಗೆ ಕೊಡಬೇಕೆಂತಲೂ, ನರೇಂದ್ರನ ತಂಗಿಯನ್ನು ಶ್ರೀಶನಿಗೆ ತೆಗೆದುಕೊಳ್ಳಬೇಕೆಂತಲೂ ಆಲೋಚಿಸಿದ್ದಳು. ಈ ಮಾತು ಬಾರಿಬಾರಿಗೆ ಅವಳು ತನ್ನ ಗಂಡನ ಮುಂದೆ ತೆಗೆಯುತ್ತಿದ್ದಳು. ಆದರೆ ನವಕುಮಾರನು ನರೇಂದ್ರನ ವಿಷಯವಾಗಿ ಮತ್ಸರವನ್ನು ತಳೆದವನೂ, ಶ್ರೀಶನ ವಿಷಯವಾಗಿ ಅಷ್ಟು ಪ್ರೀತಿಯಿಲ್ಲದವನೂ ಆಗಿರುವದರಿಂದ ಅವನಿಗೆ ತನ್ನ ಉದಾರಚರಿತೆಯಾದ ಹೆಂಡತಿಯ ಮಾತು ರುಚಿಸುತ್ತಿದ್ದಿಲ್ಲವಾದ್ದರಿಂದ ಅವನು ಅನಿವಾರ್ಯಕ್ಕಾಗಿ ಅವಳ ಮಾತಿಗೆ ಸುಮ್ಮನೆ ಹೂಂ ಹೂಂ ಎಂದು ಕಾಲಹರಣ ಮಾಡುತ್ತಿದ್ದನು.

ನವಕುಮಾರನ ಕೈಕೆಳಗೆ ಗೋಕುಲದಾಸನೆಂಬ ಗುಮಾಸ್ತನಿದ್ದನು. ಈ ಗೋಕುಲದಾಸನು ಕಪಟಿಯೂ, ವಂಚಕನೂ, ಸ್ವಾರ್ಥಪರಾಯಣನೂ, ಪರೋತ್ಕರ್ಷವನ್ನು ಸಹಿಸದವನೂ ಆಗಿದ್ದನು. ಇಬ್ಬರ ನ್ಯಾಯ ಒಬ್ಬರಿಗೆ ಆಯವೆಂಬಂತೆ ಗೋಕುಲದಾಸನು ಮನೆಮನೆಗಳಲ್ಲಿ ಕಲಹವನ್ನು ಬೀರಿ ತನ್ನ ಬೇಳೆ ಬೇಯಿಸಿಕೊಳ್ಳುತ್ತಿದ್ದನು. ಆದ್ದರಿಂದ ಇವನೊಬ್ಬನೇ ಜಾಣನೆಂದೂ, ಸರಕಾರ ದರಬಾರಗಳಲ್ಲಿ ಗೌರವವುಳ್ಳವನೆಂದೂ ಸಾಧಾರಣರಾದ ಜನರ ತಿಳುವಳಿಕೆಯಾಗಿತ್ತು. ಸರಕಾರದ ಅಧಿಕಾರಸ್ಥರ ಮುಖಸ್ತುತಿ ಮಾಡುವದರಲ್ಲಿ ಅವನು ನಿಷ್ಣಾತನೇ ಆಗಿದ್ದನು. ದೊಡ್ಡವರ ಮನೆಯಲ್ಲಿ

ಬಿದ್ದ ಕೆಲಸವನ್ನು ಮಾಡಲಿಕ್ಕೆ ಅವನು ಹಿಂದೆಮುಂದೆ ನೋಡುತ್ತಿದ್ದಿಲ್ಲ. ಪ್ರಸಂಗ ಬಂದಾಗ ತನ್ನ ಉಪಕಾರಕರ್ತನ ಗೋಣು ಮುರಿಯಲಿಕ್ಕೂ ಅವನು ಹೇಸುವವನಲ್ಲ. ಗೋಕುಲದಾಸನು ಅಕ್ಷರಸ್ಥನೂ ಲೆಕ್ಕಪತ್ರಗಳನ್ನು ಅರಿತವನೂ ಆದ್ದರಿಂದ ಅವನು ಕ್ರಮೇಣ ನವಕುಮಾರನ ಕಾರಭಾರಿಯಾದನು.

ತನ್ನ ಯಜಮಾನನಿಗೆ ಗಂಡುಮಕ್ಕಳಿಲ್ಲಾದ್ದರಿಂದ ಅವನ ಪಶ್ಚಾತ್ ದೇವೀಪುರದ ಆಸ್ತಿಯನ್ನು ಹೇಗಾದರೂ ಮಾಡಿ ಎತ್ತಿ ಹಾಕಬೇಕೆಂಬ ದುರಾಲೋಚನದಲ್ಲಿ ಗೋಕುಲದಾಸನು ನಿರತನಾಗಿದ್ದನು. ತನ್ನ ಮಗನಾದ ಘನಶ್ಯಾವನಿಗೆ ನವಕುಮಾರನ ಮಗಳಾದ ಹೇಮಲತೆಯನ್ನು ಕೊಡುವಂತೆ ಮಾಡಿದರೆ ದೇವೀಪುರದ ಆಸ್ತಿಯು ತನ್ನ ಕೈಸೇರಿದಂತೆ ಆಗುವದೆಂಬ ತೂಕವು ಅವನದಿತ್ತು. ಆದರೆ ಅವನ ಮಾರ್ಗದಲ್ಲಿ ಎರಡು ವಿಘ್ನಗಳು. ಮೊದಲನೆಯ ವಿಘ್ನವೆಂದರೆ ಶ್ರೀಶಚಂದ್ರನು. ಹೇಮಲತೆಯನ್ನು ಯಾರಿಗೆ ಕೊಟ್ಟರೂ ಮುಂದೆ ಶ್ರೀಶನೇ ದೇವೀಪುರದ ಜಮೀನದಾರನಾಗತಕ್ಕವನು. ಎರಡನೆಯ ವಿಘ್ನವೆಂದರೆ ನರೇಂದ್ರನಾಥನು. ಈ ನರೇಂದ್ರನಿಗೇ ಸುಶೀಲಾದೇವಿಯು ತನ್ನ ಮಗಳಾದ ಹೇಮಲತೆಯನ್ನು ಕೊಡಬೇಕೆಂದು ಯೋಚಿಸಿದ್ದಳು.

ನರೇಂದ್ರನ ಅಂಜಿಕೆಯು ಗೋಕುಲದಾಸನಿಗೆ ವಿಶೇಷವಾಗಿ ಇದ್ದಿಲ್ಲ. ಯಾಕೆಂದರೆ ದೇವೀಪುರದವರ ವೈರಿಯಾದ ನರೇಂದ್ರನಿಗೆ ನವಕುಮಾರನು ತನ್ನ ಮಗಳನ್ನು ಎಂದಿಗೂ ಕೊಡಲಿಕ್ಕಿಲ್ಲವೆಂದು ಅವನು ಗ್ರಹಿಸಿಕೊಂಡಿದ್ದನು. ಆದರೂ ಆ ಮಾರ್ಗವಾಗಿ ಅವನು ತನ್ನ ಪ್ರಯತ್ನವನ್ನು ಇಟ್ಟೇ ಇದ್ದನು.

ಎಲ್ಲಕ್ಕೂ ಮೂಲವಾಗಿರುವ ಶ್ರೀಶನ ವಿಷಯಕ್ಕೆ ಏನು ಮಾಡಬೇಕು? ನವಕುಮಾರನು ಅವನಲ್ಲಿ ವಿಶೇಷವಾದ ಆಸಕ್ತಿಯಿಲ್ಲದವನಾಗಿದ್ದರೂ ಸತಿದೇವಿಯಾದ ಸುಶೀಲಾದೇವಿಯು ಶ್ರೀಶಚಂದ್ರನನ್ನು ತನ್ನ ಹೊಟ್ಟೇಮಗನಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದಳು; ಮುಂದೆ ಅವನನ್ನೇ ದೇವೀಪುರದ ಸ್ವಾಮಿಯನ್ನಾಗಿ ಮಾಡುವದನ್ನು ಅವಳು ನಿಶ್ಚಯಿಸಿ ಇಟ್ಟಿದ್ದಳು. ಶ್ರೀಶನು ಮೂರ್ಖನಾಗಲಿ, ದುರ್ವ್ಯಸನಿಯಾಗಲಿ ಇದ್ದದ್ದಾಗಿದ್ದರೆ ಅವನನ್ನು ಗೋಕುಲದಾಸನು ಆಗಲೆ ನುಂಗಿ ನೀರು ಕುಡಿಯುತ್ತಿದ್ದನು. ಆದರೆ

ಬುದ್ಧಿವಂತನೂ, ಉದಾರನೂ, ಸದಾಚಾರಸಂಪನ್ನನೂ, ವಿನಯಶೀಲನೂ ಆಗಿರುವ ಆ ತರುಣನನ್ನು ಪ್ರತ್ಯಕ್ಷ ಅವನ ಕಕ್ಕನ ಮನೆ ಬಿಡಿಸಿ ಹೊರಗೆ ಹಾಕುವದು ಹೇಗೆ? ಆದರೂ ಆ ಕಪಟಿಯು ಎದೆಗುಂದದೆ ತನ್ನ ಕಪಟ ಜಾಲವನ್ನು ಕ್ರಮಕ್ರಮದಿಂದ ಒಡ್ಡಿ ನವಕುಮಾರನ ಮನಸ್ಸಿನಲ್ಲಿ ಶ್ರೀಶನ ವಿಷಯವಾಗಿ ಅಪ್ರೀತಿಯನ್ನು ಹುಟ್ಟಿಸುವ ಯತ್ನವನ್ನು ನಡಿಸಿದನು.

ಇತ್ತ ಸಾಧ್ವಿಯಾದ ನವಕುಮಾರನ ಪತ್ನಿಯು ಒಂದು ಆಲೋಚನ ವನ್ನು ಅವನಿಗೆ ಹೇಳುವಳು; ಇತ್ತ ಕಪಟಿಯಾದ ಅವನ ಗುಮಾಸ್ತನು ಬೇರೊಂದು ಆಲೋಚನವನ್ನು ಹೇಳುತ್ತಿರುವನು. ಹೀಗೆ ಸುನೀತಿ ದುರ್ನೀತಿ ಗಳ ನಡುವೆ ನಿಂತ ನವಕುಮಾರನು ತನ್ನ ಅತಿ ಮಂದವಾಗಿರುವ ಸ್ವಬುದ್ಧಿ ಯಿಂದ ಏನೂ ಸಹಾಯವನ್ನು ಹೊಂದದೆ ವಿಚಾರಮೂಢನಾಗಿದ್ದನು.

## ನಾಲ್ಕನೆಯ ಅಧ್ಯಾಯ

## ಅಮ್ಮನವರ ಅವತಾರವು

ಗೋಕುಲದಾಸನ ಮಗನಾದ ಘನಶ್ಯಾಮದಾಸನು ಹದಿನೆಂಟು ಹತ್ತೊಂಬತ್ತು ವರ್ಷದ ಪ್ರಾಯದವನಾಗಿದ್ದನು. ಮೈಬಣ್ಣ ನೋಡಲು ಅವನು ಅನ್ವರ್ಥವಾಗಿ ಘನಶ್ಯಾಮದಾಸನೇ. ಪ್ರತಿಚಂಡಿಯಾದ ತಾಯಿಯ ಅಚ್ಚಿದಲ್ಲಿ ಬೆಳೆದವನಾದ್ದರಿಂದ ಘನಶ್ಯಾಮನು ಅವಿನೀತನೂ ದುರಭಿಮಾ ನಿಯೂ, ಅವಿಚಾರಿಯೂ ಆಗಿದ್ದು ಅಕ್ಷರಾಭ್ಯಾಸದ ಗೋಜಿಗೆ ಕೂಡ ಅವನು ಹೋಗಿದ್ದಿಲ್ಲ. ತಾನು ದಿವಾನರ ಮಗನೆಂಬ ಹೆಮ್ಮೆಯಿಂದ ಘನಶ್ಯಾಮನು ಊರಲ್ಲಿ 'ಬೈದವರಿಗೆ ಬೈದ; ಬಡಿದವರಿಗೆ ಬಡಿದ' ಹೀಗೆ ಉತ್ಶೃಂಖಲನಾಗಿ ಅವನು ಊರಲ್ಲಿ ಜೋಕುಮಾರನಂತೆ ಮೆರೆಯುತ್ತಿದ್ದನು.

ಒಂದು ದಿನ ಸಂಜೇಹೊತ್ತಿನಲ್ಲಿ ಶ್ರೀಶಚಂದ್ರನೂ ಹೇಮಲತೆಯೂ ಗಂಗಾನದಿಯ ಸುಲಲಿತವಾದ ಪುಲಿನದಲ್ಲಿ ಕುಳಿತುಕೊಂಡು ಮಾತಾಡು ತ್ತಿರುವಾಗ ಯಾವಳೋ ಒಬ್ಬ ಯುವತಿಯು ಕೂಗಿಕೊಂಡು ಅಳುತ್ತಿರುವ ದನ್ನು ಅವರು ಕೇಳಿದರು.

ಕೈವರ್ತನ ಮಗಳೋರ್ವಳು ನೀರು ತುಂಬಿಕೊಂಡು ಮನೆಗೆ ನಡೆದಿರುವಾಗ, ನಿರ್ಲಜ್ಜನಾದ ಘನಶ್ಯಾಮನು ಅವಳ ಮೇಲೆ ಒಂದು ಹರಳೊಗೆದನು. ಆ ಹರಳು ಅವಳ ಮಣ್ಣಿನ ಕೊಡಕ್ಕೆ ತಾಕಿ ಕೊಡ ಒಡೆದು ಆ ತರುಣಿಯು ಮೈಯೆಲ್ಲ ತೊಯಿದು ಹಿಂಡಿಕೆಯಾಯಿತು. ತನಗಾದ ಅಪಮಾನಕ್ಕಾಗಿಯೂ, ಕೊಡ ಒಡೆದ ಹಾನಿಗಾಗಿಯೂ ಆ ಕೈವರ್ತ ಕನ್ನೆಯು ದೊಂಟ್ಟು ಅಳುತ್ತಲಿದ್ದಳು.

“ ಅಯ್ಯೋ! ಶ್ರೀಶ ಅಣ್ಣಾ, ಘನಶ್ಯಾಮನ ಉರವಣಿಗೆ ನೋಡಿದಿಯಾ ? ಆ ತರುಣಿಯ ಅವಸ್ಥೆಯನ್ನು ಏನು ಮಾಡಿದ್ದಾನೆ ” ಎಂದು ವ್ಯಸನಾಕುಲೆಯಾಗಿ ಹೇಮಲತೆಯು ಹೇಳಿಕೊಂಡಳು.

ಶ್ರೀಶನು ಕ್ರೋಧವಶನಾಗಿ ಭರದಿಂದೆದ್ದು ಘನಶ್ಯಾಮನ ಸಮಾಪಕ್ಕೆ ಹೋಗಿ “ ಘನಶ್ಯಾಮ, ಆ ಪ್ರಾಣಿಗೆ ಏನು ಮಾಡಿದಿ ? ನಾಚಿಕೆ ಬರಲಿಲ್ಲವೆ ಹಾಗೆ ಮಾಡಲಿಕ್ಕೆ ! ನೀನೀಗ ಬಹಳೇ ಉದ್ದಾಮನಾಗಿ ವರ್ತಿಸುವಿ” ಎಂದು ಗದ್ದರಿಸಿ ಕೇಳಿದನು.

“ ನಿಮ್ಮಪ್ಪನದೇನು ಹೋಯಿತು ? ಹೆಚ್ಚಿಗೆ ಮಾತಾಡಿದರೆ ಹಲ್ಲು ಮುರಿಸಿಕೊಳ್ಳುವಿ ಗೊತ್ತಿರಲಿ! ” ಎಂದು ಉದ್ದಾಮನಾದ ಘನಶ್ಯಾಮನು ಉತ್ತರಕೊಟ್ಟನು.

“ ಮೂರ್ಖಾ, ಯಾರೊಡನೆ ಮಾತಾಡುವಿ ಹೀಗೆ ನೀನು ? ಮಾನವಂತಿಯರಾದ ಹೆಣ್ಣುಮಕ್ಕಳ ಅಮರ್ಯಾದೆಯನ್ನು ರಾಜಮಾರ್ಗದಲ್ಲಿ ಮಾಡಿ ಮೇಲೆ ಹೀಗೆ ಸೊಕ್ಕಿನ ಮಾತಾಡುವಿಯಾ ? ”

“ ಬೋಡ್ಡೀಮಗನೆ, ನನಗೆ ಬುದ್ಧಿಯನ್ನು ಕಲಿಸಲಿಕ್ಕೆ ನೀನೆಷ್ಟರವನು?” ಎಂದು ನುಡಿದವನೇ ಘನಶ್ಯಾಮನು ಶ್ರೀಶನ ಕಪಾಳಕ್ಕೆ ಒಳಿತಾಗಿ ಹೊಡೆದನು.

ಇಂಥ ಅಪರಾಧವನ್ನು ಶ್ರೀಶನು ಸಹಿಸುವನೆ ! ಘನಶ್ಯಾಮನಿಗೆ ಮೀರಿದವನಾದ ಸಮರ್ಥನವನು. ಅವನು ಕಡುಕೋಪದಿಂದ ಆ ಕಿಡಿಗೇಡಿಯನ್ನು ಜಡೆದು ನೆಲಕ್ಕೆ ಕೆಡವಿ ಗುದ್ದಿ ಗುದ್ದಿ ಅವನನ್ನು ಹಣ್ಣು ಮಾಡಿದನು. ಹೆಂಗಸರೆಲ್ಲರೂ ಸುತ್ತಲೂ ನೆರೆದು ಘನಶ್ಯಾಮನನ್ನು

ಬಾಯಿಗೆ ಬಂದಂತೆ ಬೈದರು. ಬುದ್ಧಿವಂತರಾದ ಗಂಡಸರು ಅವನಿಗೆ “ ಛೀಃ ಹಳಿ ! ” ಹಾಕಿದರು. ಪೋರರು “ ಹುರ್ರ್ಯೋ ! ಹುಚ್ಯೋ ! ” ಮಾಡಿ ಘನಶ್ಯಾಮನಿಗೆ ಸಾಕು–ಬೇಕು ಮಾಡಿಕೊಟ್ಟರು. ಶ್ರೀಶನ ಹೊಡ ತಕ್ಕೆ ಉರುಳಿ ಬಿದ್ದ ಘನಶ್ಯಾಮನ ಮೂಗು ಬಿಚ್ಚಿ, ಬಟ್ಟೆಗಳೆಲ್ಲ ರಾಮಾರಕ್ತ ವಾದವು. ಬಾಯಿ ಕಿಸಿದು ದೊಡ್ಡ ಧ್ವನಿ ತೆಗೆದು ಅಳುತ್ತ ಮನೆಯ ಹಾದೀ ಹಿಡಿದು ನಡೆದ ಘನಶ್ಯಾಮನ ರೂಪವು ಅಕ್ರಾಳವಿಕ್ರಾಳವಾಗಿಯೂ, ಹಾಸ್ಯಾಸ್ಪದವಾಗಿಯೂ ಕಾಣುತ್ತಿತ್ತು.

ಹೇಮಲತೆಯು ಆ ಕೈವರ್ತಿಯ ಬಳಿಗೆ ಹೋಗಿ, ಸಮಾಧಾನದ ನುಡಿ ಗಳಿಂದ ಅವಳನ್ನು ಸಂತವಿಸಿ, ಅವಳಿಗೆ ಒಂದು ರೂಪಾಯಿ ಕೊಟ್ಟು 'ಇನ್ನೊಂದು ಕೊಡ ಕೊಂಡುಕೋ' ಎಂದು ಹೇಳಿ, ಅವಳನ್ನು ಮನೆಯ ಹಾದೀ ಹಚ್ಚಿದಳು.

ಊರವರೆಲ್ಲರೂ ತನ್ನ ತಪ್ಪು ಕಂಡಿರುವದನ್ನು ಅರಿತು ಘನಶ್ಯಾಮನು ಶ್ರೀಶನ ವಿರುದ್ಧವಾಗಿ ತನ್ನ ತಂದೆಯ ಮುಂದೆ ದೂರು ಹೇಳಿಕೊಳ್ಳಲರಿ ಯದೆ ಸುಮ್ಮನೆ ಮನೆಯಲ್ಲಿ ಸೇರಿಕೊಂಡು ಮುಖ ತೊಳೆದು ಬೇರೆ ಬಟ್ಟೆ ಗಳನ್ನು ಧರಿಸಿ ತನ್ನ ದುಃಖನಿವಾರಿಣಿಯಾದ ತಾಯಿಯ ಸನ್ನಿಧಾನಕ್ಕೆ ಹೋದನು. ತಾನು ಮಾಡಿದ ತಪ್ಪುಗಳನ್ನೆಲ್ಲ ಮುಚ್ಚಿಟ್ಟು ಶ್ರೀಶನೇ ತನ್ನನ್ನು ವಿನಾಕಾರಣವಾಗಿ ಬಡಿದನೆಂದು ಹೇಳಿ ಘನಶ್ಯಾಮನು ತಾಯಿಯ ಮುಂದೆ ಕುಳಿತು ಅತ್ತನು.

ಆ ಸಮಯದಲ್ಲಿ ಆ ಅಮ್ಮನವರು ತಾಳಿದ ಅವತಾರವನ್ನು ವರ್ಣಿಸ ಬಹುದೆ ? ಮೊದಲೇ ಗಡುತರವಾಗಿರುವ ಆ ಗಂಡರಾಮೆಯ ಮುಖವು ಆಕ್ರಸದ ಭರಕ್ಕೆ ಗಡಿಗೆಯಾಯಿತು. ಬಾಯಿಗೆ ಬಂದಂತೆ ಕೂಗಿ ಕೂಗಿ ಬೊಗಳಿ ಅವಳು ಶ್ರೀಶನ ಕುಲಕೋಟಿಯನ್ನು ಉದ್ಧಾರಮಾಡಿದಳು. “ ಅವರು (ಗಂಡನು) ಇನ್ನು ಮನೆಗೆ ಬಂದಾದರೂ ಬರಲಿ ನೋಡೋಣ ! ಶ್ರೀಶನ ಪಾರಿಪತ್ಯವನ್ನು ಮಾಡಿ ಬಂದಬಳಿಕೇ ಅವರಿಗೆ ಕೂಳು ! ” ಎಂದು ದುರ್ಗಾಮಾಯಿಯು (ಗೋಕುಲದಾಸನ ಹೆಂಡತಿಯ ಹೆಸರು) ಪ್ರತಿಜ್ಞಾ ಪೂರ್ವಕವಾಗಿ ನುಡಿದಳು.

ಆ ದಿವಸ ಗೋಕುಲದಾಸನು ಸಂಜೇವರೆಗೆ ಕೆಲಸ ಮಾಡಿ ದಣಿದು ಮನೆಗೆ ಬಂದು ನೋಡುತ್ತಾನೆ, ಹೆಂಡತಿಯು ಉಲುವೇ ಇಲ್ಲ! ಅಂಜುತ್ತ ಅಂಜುತ್ತ ಮೆಲ್ಲನೆ ಅವನು ಅಡಿಗೇಮನೆಯಲ್ಲಿ ಹಣಿಕಿಕ್ಕಿ ನೋಡಲು ಸೀರೆಯ ಮುಸುಗಿಟ್ಟು ಬಿಗಿದುಕೊಂಡು ಮಲಗಿರುವ ತನ್ನ ಅರ್ಧಾಂಗಿಯ ಮಾಯಾಲೀಲೆಯನ್ನು ಕಂಡನು. ಈ ವೇಷವು ಅನರ್ಥವನ್ನೇ ಸೂಚಿಸುವದೆಂದು ಗೋಕುಲದಾಸನು ಚಿರವಾದ ಪರಿಚಯದಿಂದ ಅರಿತವನಾಗಿ ಬಹು ಪರಿಯಾಗಿ ಹೆದರಿದನು. ಆದರೂ ಬಿಡದ ಕರ್ಮಕ್ಕಾಗಿ "ಅಡಿಗೆಯ ಉದ್ಯೋಗವೇ ಇಲ್ಲೇನು?" ಎಂದು ಕೈಯಲ್ಲಿ ಜೀವ ಹಿಡುಕೊಂಡು ಕೇಳಿದನು.

ಬೇಟೆಯ ಹಾದೀ ನೋಡುತ್ತ ಕುಳಿತಿರುವ ವ್ಯಾಘ್ರಿಣಿಯು ಅದನ್ನು ಕಂಡಕೂಡಲೆ ಆರ್ಭಟಿಯಿಂದ ಗುಡುಗಿಕ್ಕಿ ಹಾರುವಂತೆ ದುರ್ಗಾಮಾಯಿಯು ಪತಿರಾಯನ ನುಡಿ ಕೇಳಿದ ಕೂಡಲೆ ತನ್ನ ಮುಸುಕು ಹರಿದೊಗೆದು "ಮನೆಯಲ್ಲಿ ಅಡಿಗೆ ನೀರಿನವರನ್ನು ಇಟ್ಟು, ಬೊಕ್ಕಬೋರಲು ಬಿದ್ದಿರುವಿರಿ, ಅಡಿಗೆಯ ಉದ್ಯೋಗವಾಗದೇನು ಮಾಡೀತು!" ಎಂದು ಒಳ್ಳೇ ಅಕ್ಕಸದಿಂದ ಗರ್ಜಿಸಿದಳು.

ತನ್ನ ಪ್ರಿಯತಮೆಯು ಈ ಪರಿಯಾಗಿ ಮಾಡಿದ ಆದರ ಉಪಚಾರಗಳನ್ನು ಅನುಭವಿಸಿದ ಕೂಡಲೆ ಗೋಕುಲದಾಸನ ಶ್ರಮವೆಲ್ಲ ಪರಿಹಾರವಾದಂತಾಯಿತು. ಹೊಟ್ಟೆಯೊಳಗಿನ ಹಸಿವೆ ನೀರಡಿಕೆಗಳು ಎಲ್ಲಿಯೋ ಅಡಗಿಹೋದವು. ಮುನ್ನೊಂದು ಮಾತಾಡದೆ ಅವನು ತನ್ನ ಕೋಣೆಗೆ ಹೋಗಿ ಕತ್ತಲೆಯಲ್ಲಿ ದಿಂಬಕ್ಕೆ ಆತುಕೊಂಡು ಏನೂ ತಿಳಿಯದ ಮೂಢನ ಹಾಗೆ ಕುಳಿತುಕೊಂಡನು.

ತನ್ನ ವಾಗ್ದಂಡನದ ಪ್ರಹಾರಕ್ಕೆ ಪತಿಯು ಹಣ್ಣಿಗಿಂತಲೂ ಹಣ್ಣಾಗಿ ಹೋದದ್ದು ಕಂಡು ಜಯಶಾಲಿನಿಯಾದ ದುರ್ಗಾಮಾಯಿಗೆ ಸಮಾಧಾನವಾದಂತಾಗಿ ಅವಳು ಯಥಾವಕಾಶವಾಗಿ ಎದ್ದು ಅಡಿಗೆ ಮಾಡಿಕೊಂಡು ಮಗನನ್ನು ಕುರಿತು ''ಘನಶ್ಯಾಮ, ಯಾಕೆ ಕೋಣೆ ಸೇರಿದ್ದಾರೆ? ಕೂಳು ತಿಂದು ಹೋಗೆಂದು ಹೇಳು.'' ಎಂದು ಆಜ್ಞಾಪಿಸಿದಳು.

ಗೋಕುಲದಾಸನು ತಪ್ಪುಗಾರನಂತೆ ಅಂಜುತ್ತ ಕೈಕಾಲು ತೊಳೆದು

ಕೊಂಡು ಕಾಲುಸಪ್ಪಳ ಮಾಡದೆ ಮೆಲ್ಲನೆ ಎಡೆಯ ಮೇಲೆ ಬಂದು ಕುಳಿತನು. ಬೇಕು ಬೇಡೆನ್ನದೆ ಅರ್ಧ ಊಟವಾದ ಬಳಿಕ ಅವನು ತನ್ನ ಮಗನನ್ನು ಕುರಿತು "ಯಾಕೆ ಘನಶ್ಯಾಮ್, ನಿನ್ನ ಮೋರೆ ಇಷ್ಟ್ಯಾಕೆ ಸಣ್ಣದಾಗಿದೆ? ಮಾತಾಡಲೊಲ್ಲೇಕೆ?" ಎಂದು ಕೇಳಿದನು.

"ಅವನ ಸಮಾಚಾರವನ್ನು ಕೇಳುವವರು ಯಾರಿದ್ದಾರೆಂದು ಅವನು ಮಾತಾಡ್ಯಾನು? ಟೊಣಪನಾದ ಆ ಶ್ರೀಶನು ಇಂದು ನನ್ನ ಕಂದಮ್ಮನ ಪ್ರಾಣವನ್ನೇ ತೆಗೆದುಕೊಳ್ಳುತ್ತಿದ್ದನು. ದೊಡ್ಡವರ ಮನೆಯವನೆಂದು ಅವನು ಹೀಗೆ ಉಪ್ಪಿಲ್ಲದೆ ಉರಿಯುತ್ತಿರುವನೇನು? ಸಿಡಿಲು ಕಂಡಿದ್ದಾನೆ ಇತ್ತಲಾಗೆ; ಮತ್ತೇನು! ಯಾಕೆ ಬೆಂಕೀ ಹಚ್ಚಲಿಕ್ಕೆ ದಿವಾನಗಿರಿ ಮಾಡುತ್ತೀರಿ?" ಎಂದು ದುರ್ಗಾಮಾಯಿಯು ತನ್ನ ಕೈಯಲ್ಲಿದ್ದ ಊದಗೊಳವೆಯನ್ನು ಗಂಡನ ಮೋತಿಗೆ ಚಾಚಿ ನುಡಿದಳು.

ತನ್ನ ಪ್ರೀತಿಯ ಮಗನನ್ನು ಶ್ರೀಶನು ಹೊಡೆದನೆಂಬ ವರ್ತಮಾನ ವನ್ನು ಕೇಳಿ ಗೋಕುಲದಾಸನೂ ನೊಂದುಕೊಂಡನು. "ಘನಶ್ಯಾಮ್, ಹೊಡಿಸಿಕೊಂಡು ಬರಲಿಕ್ಕೆ ನಿನಗೇನು ಬೇನೆಯಾಗಿತ್ತು? ಹಲ್ಲು ಮುರಿಯುವ ಹಾಗೆ ಹೊಡೆಯಬಾರದಾಗಿತ್ತೇ ಆ ಕತ್ತೆಯನ್ನು?" ಎಂದು ಕೋಪದ ಆವೇಶದಲ್ಲಿ ಅವನು ತನ್ನ ಮಗನನ್ನು ಕುರಿತು ನುಡಿದನು.

"ಶ್ರೀಶನು ನಿಮ್ಮ ಯಜಮಾನರ ಮಗನೆಂದು ತಿಳಿದು ನಾನು ಸುಮ್ಮ ನಿದ್ದೆನು. ಇಲ್ಲದಿದ್ದರೆ ಆ ದುಷ್ಟನ ಮೂಳೆಗಳನ್ನೇ ಮುರಿದು ಪುಡಿಪುಡಿಯಾಗಿ ಮಾಡಿಬಿಡುತ್ತಿದ್ದೆನು." ಎಂದು ಘನಶ್ಯಾಮನು ಉತ್ತರಕುಮಾರನಂತೆ ಮಾತಾಡಿದನು.

"ಯಜಮಾನರಿಂದ ನಾವು ಮುಂದಾಗಲಿಲ್ಲ ಹಿಂದಾಗಲಿಲ್ಲ! ಬರಿ ಉರವಣಿಗೆ ಮಾತ್ರ ನಾವು ತಾಳಬೇಕಾಗಿದೆ!" ಎಂದು ನುಡಿದು ದುರ್ಗಾ ಮಾಯಿಯು ದೊಡ್ಡ ಧ್ವನಿ ತೆಗೆದು ಅತ್ತಳು.

ಎಲ್ಲ ಕಪಟಿಗಳೂ ಶಾಂತವಾದ ಮನಸ್ಸಿನವರಾಗಿರುವಂತೆ ಗೋಕುಲ ದಾಸನೂ ಇದ್ದನು. ಶ್ರೀಶನಲ್ಲಿ ಎಳ್ಳಷ್ಟಾದರೂ ತಪ್ಪು ಸಿಕ್ಕರೆ ಗೋಕುಲ ದಾಸನಿಗೆ ಸಾಕಾಗಿತ್ತು; ಕಾರಣವಿಲ್ಲದೆ ತನ್ನ ಮಗನನ್ನು ಬಡಿದನೆಂದು ನವಕುಮಾರನಿಗೆ ಹೇಳಿ, ಮೇಲೆ ಒಬ್ಬಿಬ್ಬರ ಸಾಕ್ಷಿ ಕೊಟ್ಟರೆ, ಆ ಮೂಢ

ನಾದ ಜವಾನದಾರನು ಶ್ರೀಶನ ಮೇಲೆ ಸಿಟ್ಟಾಗದೆ ಇರನು. ಇದು ಒಂದು ಕಂತ್ರದ ಮಾತಾಯಿತು. ಇನ್ನು ಬೇರೆ ಬೇರೆ ಕಂತಗಳಿಂದ ಬೇರೆ ಬೇರೆ ಸುಳ್ಳು ಸಟೆ ಹೇಳಿ ಶ್ರೀಶನ ಕಾಲು ಮನೆಯಿಂದ ಹೊರಗೆ ತೆಗಿಸಬಹುದೆಂದು ಆಲೋಚಿಸಿ ಗೋಕುಲದಾಸನು ತನ್ನ ಹೆಂಡತಿಯನ್ನು ಕುರಿತು "ಶ್ರೀಶನು ಇನ್ನೊಮ್ಮೆ ಘನಶ್ಯಾಮನ ಹೆಸರು ತೆಗಿಯದಂತೆ ಮಾಡಿದರೆ ಆಯಿತೋ ಇಲ್ಲವೋ ?" ಎಂದು ಹೇಳಿ ಆಶ್ವಾಸನವನ್ನು ಕೊಟ್ಟನು.

"ನೀವು ಹೋಗಿ ಅವನ ಕಾಲುಹಿಡುಕೊಂಡರೆ ಸುಮ್ಮನಿದ್ದಾನು ! ನಾಯಿಾ ಜನ್ಮ ಸುಟ್ಟು ಹೋಗಲಿ !! ಶ್ರೀಶನನ್ನು ಅರಮನೆ ಬಿಡಿಸಿ ಹೊರಗೆ ಹಾಕಿಸದಿದ್ದರೆ ನಾನು ಜೀವವನ್ನೇ ಇಡುವದಿಲ್ಲ."

"ನಾನಾದರೂ ಅದೇ ವಿಚಾರದಲ್ಲಿ ಇರುವೆನು. ತುಸು ಕೂತು ಮಲಗಿಕೋ."

ಕಪಟಪಟುವಾದ ತನ್ನ ಗಂಡನು ಆಲೋಚಿಸಿ ಒಂದು ಮಾತು ಹೇಳಿದನೆಂದರೆ ಅದರಂತೆಯೇ ಅವನು ಮಾಡದೆ ಬಿಡುವವನಲ್ಲವೆಂಬದು ದುರ್ಗಾಮಾಯಿಗೆ ತಿಳಿದ ಮಾತಾಗಿದ್ದರಿಂದ ಅವಳು ಸಂತೋಷದಿಂದ ನಕ್ಕಳು. ಕುಂಬಳಕಾಯಿಯ ಹೋಳಿಕೆಗಳಂತೆ ಶೋಭಿಸುತ್ತಿರುವ ತನ್ನ ಗಲ್ಲಗಳಲ್ಲಿ ಮೃದುಹಾಸವನ್ನು ತಳೆದು ಗಂಡನಿಗೆ ಹಾಲುತುಪ್ಪಗಳನ್ನು ಯಥೇಷ್ಟವಾಗಿ ಬಡಿಸಿದಳು. ತಂದೆಮಕ್ಕಳು ಸಂತೋಷದಿಂದ ಉಂಡು ಕೈದೊಳೆದರು.

## ಐದನೆಯ ಅಧ್ಯಾಯ

### ಕಪಟಜಾಲವು

ಮರುದಿವಸ ಬೆಳಿಗ್ಗೆ ಗೋಕುಲದಾಸನು ಅಂಗಿಮುಂಡಾಸಗಳನ್ನು ಹಾಕಿಕೊಂಡು ಲಗುಬಗೆಯಿಂದ ನವಕುಮಾರನ ಮನೆಗೆ ಬಂದನು. ಹೀಗೆ ಅವೇಳೆಯಲ್ಲಿ ತನ್ನ ಗುಮಾಸ್ತನು ಬಂದದ್ದು ಕಂಡು ನವಕುಮಾರನು

ಚಕಿತನಾಗಿ "ಯಾಕೆ ಗೋಕುಲದಾಸ, ಈಗೇನು ಕಾರಣ ಬಂದಿ?" ಎಂದು ಕೇಳಿದನು.

"ನಾನಿನ್ನು ನನ್ನ ಊರಿಗೆ ಹೊರಟಿದ್ದು ಹೋಗುತ್ತೇನೆ. ತಮ್ಮ ಸೇವೆ ಸಾಕಾಯಿತು. ಅಪ್ಪಣೆ ಕೊಡಿರಿ."

"ಅಂದರೆ?" ಎಂದು ವಿಸ್ಮಯಾಕುಲನಾಗಿ ನವಕುಮಾರನು ಕೇಳಿದನು.

"ಅಂದರೆ ಈ ಊರಲ್ಲಿ ನಾವು ಸುರಕ್ಷಿತವಾಗಿ ನಿಲ್ಲುವ ದಿವಸಗಳು ಬರಲಿಲ್ಲ."

"ಆದದ್ದಾದರೂ ಏನು ಗೋಕುಲದಾಸ?"

"ನಿನ್ನೆ ನಿಮ್ಮ ಶ್ರೀಶಚಂದ್ರರು ನನ್ನ ಮಗನನ್ನು ಹೆಣಬೀಳ ಬಡಿದರು. ಇದಕ್ಕೂ ಇನ್ನೇನಾಗಬೇಕು?"

"ಶ್ರೀಶನು ಘನಶ್ಯಾಮನನ್ನು ಬಡಿದನೆ? ಘನಶ್ಯಾಮನು ಶ್ರೀಶನಿಗೆ ಏನಾದರೂ ಮಾಡಿರಬಹುದು. ಶ್ರೀಶನು ಸುಮ್ಮಸುಮ್ಮನೆ ಹಾಗೆ ಒಬ್ಬರನ್ನು ಬಡಿಯುವವನಲ್ಲ."

"ಇದಕ್ಕಾಗಿಯೇ ನಾನು ಹೊರಟಿದ್ದು ಹೋಗಬೇನ್ನುವದು. ದೊಡ್ಡವರು ಬಡಿದರೆ ಬಡಿಸಿಕೊಳ್ಳುವದೂ ಕಷ್ಟ; ಅವರ ಮೇಲೆ ದೂರು ಹೇಳಿಕೊಳ್ಳ ಹೋದರೂ ನಿಷ್ಫಲವಾಗುವದು." ಎಂದು ಗೋಕುಲದಾಸನು ಈಗ ಅಳುವನೇನೋ ಎಂಬಂತೆ ಮೋರೆ ಮಾಡಿ ನುಡಿದನು.

ಗೋಕುಲದಾಸನ ಚಿಂತಾಕ್ರಾಂತವಾದ ಮುಖವನ್ನು ನೋಡಿ ನವಕುಮಾರನಿಗೂ ವಿಷಾದವೆನಿಸಿತು. ಗೋಕುಲದಾಸನ ಸಮಾಧಾನಕ್ಕಾಗಿ "ಗೋಕುಲದಾಸ, ನೀನು ಯೋಚಿಸಬೇಡ. ಶ್ರೀಶನು ನನ್ನ ಮಗನಾದರೆ ಏನಾಯಿತು. ತಪ್ಪುಗಾರರನ್ನು ನಾನು ದಂಡಿಸಲೇಬೇಕು. ಶ್ರೀಶನು ಇನ್ನು ಮುಂದೆ ಯಾರ ಹೆಸರು ಕೂಡ ತೆಗಿಯದಂತೆ ಮಾಡುವೆನು."

ಶ್ರೀಶನ ತಪ್ಪಿನ ವಿಚಾರ ಮಾಡುವದು ಗೋಕುಲದಾಸನಿಗೆ ಬೇಡಾಗಿತ್ತು. ಯಾಕಂದರೆ, ಆ ವಿಚಾರದಲ್ಲಿ ತನ್ನ ಮಗನೇ ತಪ್ಪುಗಾರನೆಂದು ಕಂಡುಬರುವ ಸಂಭವವಿತ್ತು. ಅದಕ್ಕಾಗಿ ಅವನಂದದ್ದು: "ದೇವರೂ,

ಶ್ರೀಶಚಂದ್ರರು ನಮ್ಮ ಚಿಕ್ಕ ಯಜಮಾನರು. ಅವರನ್ನು ತಾವು ದಂಡಿಸ ಬೇಕೆಂದು ನಾನು ಬಯಸುವದಿಲ್ಲ. ನಿನ್ನಿನ ಸಂಗತಿಯನ್ನು ತಮಗೆ ತಿಳಿಸ ಬೇಕೆಂದು ಹೇಳಿದೆನೇ ಹೊರತಾಗಿ ಮತ್ತೇನೂ ಇಲ್ಲ. ”

“ ಯಾಕೆ ಗೋಕುಲದಾಸ! ಶ್ರೀಶನು ಹೀಗೆ ಉದ್ದಾಮನಾಗಿ ವರ್ತಿಸಿದರೆ ಒಳ್ಳೇದಲ್ಲ. ನಾನು ಅವನ ಕಿವಿಯನ್ನು ಚನ್ನಾಗಿ ಹಿಂಡಿಯೇ ಬಿಡುವೆನು. ”

“ ಹಾಗಲ್ಲ ದೇವರೂ! ತಾವು ಶ್ರೀಶಚಂದ್ರರಿಗೆ ಈ ಸಂಬಂಧವಾಗಿ ಬುದ್ಧಿಮಾತು ಹೇಳಹೋದರೆ ನಾನೇ ತಮ್ಮ ಮುಂದೆ ಏನಾದರೂ ಹೇಳಿ ಹೀಗೆ ಮಾಡಿಸಿದೆನೆಂದು ಅವರು ಗ್ರಹಿಸುವ ಸಂಭವವದೆ. ಅವರ ತಪ್ಪಾದರೂ ಅಂಥ ಮಹತ್ವವಾದದ್ದಲ್ಲ. ಇಂದು ನಾನೇ ಅವರಿಗೆ ನಾಲ್ಕು ಮಾತು ಹೇಳಿ ನೋಡುತ್ತೇನೆ. ತಾವು ಈ ಮಾತು ಶ್ರೀಶಚಂದ್ರರ ಮುಂದೆ ತೆಗೆಯ ಕೂಡದು. ”

“ ಹಾಗೇ ಆಗಲಿ. ನೀನೇ ಅವನಿಗೆ ನಾಲ್ಕು ಮಾತು ಹೇಳಿದರೂ ಚಿಂತೆಯಿಲ್ಲ. ಶ್ರೀಶನು ದುರ್ನಡತೆಯವನಾಗದಿದ್ದರೆ ಸಾಕು. ”

“ ನಾನು ಬೇಡಿಕೊಳ್ಳುವದಾದರೂ ಅಷ್ಟೇ. ನಿಮ್ಮ ಪಶ್ಚಾತ್ ಅವರೇ ನಮ್ಮ ಯಜಮಾನರಾಗತಕ್ಕವರು. ಅವರನ್ನು ಸನ್ಮಾರ್ಗಕ್ಕೆ ತರುವದು ನನ್ನ ಹಿತದ ಮಾತೇ ಆಗಿರುವದು. ”

“ ಗೋಕುಲದಾಸ, ಈಗ ಅಷ್ಟು ದೂರಿನ ವಿಚಾರದ ಕಾರಣವಿಲ್ಲ. ಶ್ರೀಶನು ಸದ್ಗುಣಿಯೆಂದು ನಾನು ಮನಗಾಣದೆ ಅವನಿಗೆ ನಾನು ಯಜ ಮಾನತ್ವವನ್ನು ಕೊಡುವದೇ ಇಲ್ಲ. ಸದ್ಯಕ್ಕೆ ನನ್ನ ಮನೆಯಲ್ಲಿ ಇದ್ದು ಕೊಂಡಿರುವ ಹುಡುಗನಿಂದ ಜನರಿಗೆ ತ್ರಾಸವಾಯಿತೆಂಬ ಅಪವಾದ ನನಗೆ ಬರದಿದ್ದರೆ ಸಾಕು! ”

ನವಕುಮಾರನ ಅಭಿಪ್ರಾಯವನ್ನು ಕೇಳಿ ಗೋಕುಲದಾಸನಿಗೆ ಹಾಲು ಸಕ್ಕರೆ ಕೂಡಿದಂತಾಯಿತು. ಆದರೂ ಆ ವಂಚಕನು ನುಡಿದದ್ದೇನಂದರೆ: “ ಛೀಃ ಛೀಃ! ಶ್ರೀಶಚಂದ್ರರು ನಮ್ಮ ಯಜಮಾನರಾಗತಕ್ಕವರೇ. ಈಗೀಗ ಅವರು ನರೇಂದ್ರನಾಥನ ಸಂಗತಿಗೆ ಬಿದ್ದು ಆಟಿಗುಳಿಯಾಗಿ ತಿರುಗುತ್ತಿರು

ವದ್ದರಿಂದ ಅವರಿಂದ ಕೆಲವು ಅನುಚಿತವಾದ ಕೃತ್ಯಗಳು ಆಗಿರಬಹುದು. ನಾನು ಆದಷ್ಟು ಪ್ರಯತ್ನ ಮಾಡಿ ಅವರನ್ನು ಸನ್ಮಾರ್ಗಕ್ಕೆ ತರುವೆನು. ''

''ಗೋಕುಲದಾಸ, ನರೇಂದ್ರನ ಹೆಸರು ಕೇಳಿದರೆ ನನ್ನ ಮೈಯೆಲ್ಲ ಉರಿಯುತ್ತದೆ. ನಾವು ಬೀರನಗರದ ವ್ಯವಸ್ಥೆಯನ್ನು ಚನ್ನಾಗಿ ಇಡಬೇಕು; ಮೇಲೆ ದೇವೀಪುರದ ಉತ್ಪನ್ನವನ್ನೂ ಇದೇ ನರೇಂದ್ರನ ಹೆಣಕ್ಕೆ ಬಡಿಯಬೇಕು. ಇಷ್ಟು ಮಾರಿಯೂ ಆ ಹುಡುಗನು ನಮ್ಮ ಉಪಕಾರವನ್ನು ಎಳ್ಳಷ್ಟಾದರೂ ಸ್ಮರಿಸುವನೇನು ? '' ಎಂದು ನವಕುಮಾರನು ತಾನಿದೆಲ್ಲ ಕೇವಲ ಪರೋಪಕಾರ ಬುದ್ಧಿಯಿಂದಲೇ ಮಾಡುತ್ತಿರುವವನ ಆವಿರ್ಭಾವದಿಂದ ನುಡಿದನು.

ಈ ನುಡಿ ಕೇಳಿಯಂತೂ ಗೋಕುಲದಾಸನಿಗೆ ಸ್ವರ್ಗವು ಮೂರೇ ಬೊಟ್ಟು ಉಳಿದಂತೆ ಆಯಿತು. ತಾನಿಂದು ಎದ್ದ ಮುಹೂರ್ತವೇ ಅಂಥ ಉತ್ಕೃಷ್ಟವಾದದ್ದೆಂದು ಆಪನು ಎಣಿಸಿದನು. ನವಕುಮಾರನ ಅಭಿಪ್ರಾಯ ನೋಡಲು ತನ್ನ ಮಾರ್ಗದಲ್ಲಿ ಅಡ್ಡಾಗಿರುವ ಎರಡೂ ವಿಘ್ನಗಳು ತಾವೇ ದೂರಾಗುವ ಸಂಭವವಾಗಿತ್ತು. ಆದರೂ ಆತುರನಾಗಿ ಇನ್ನೂ ಪಕ್ವವಾಗದಿರುವ ಫಲವನ್ನು ಒತ್ತಿ ಹಣ್ಣಿಗೆ ತರುವದು ಸರಿಯಾದದ್ದಲ್ಲವೆಂದು ತಿಳಿದು, ಅವನು “ ನರೇಂದ್ರನ ವಿಷಯವಾಗಿ ಇನ್ನು ಧನಿಯರು ಆಲೋಚನೆ ಮಾಡುವ ಕಾರಣವಿಲ್ಲ. ” ರಾಜಾ ತೋಡರಮಲ್ಲನು ತೀರಿಕೊಂಡನೆಂಬ ವರ್ತಮಾನವು ಬಂದಿದೆ ! ” ಎಂದು ಹೇಳಿ ತನ್ನ ಜೇಡಹುಳದ ಜಾಲದಂತಿರುವ ಕಪಟಜಾಲವನ್ನು ಮೆಲ್ಲಗೆ ಒಡ್ಡಿದನು.

“ ಏನು ! ತೋಡರಮಲ್ಲರಾಜರು ತೀರಿಕೊಂಡರೇ ! ” ಎಂದು ಆಶ್ಚರ್ಯದಿಂದ ನವಕುಮಾರನು ನುಡಿದನು.

“ ಇಂದು ಬೆಳಗಾಗುವದರಲ್ಲಿಯೇ ರಾವುತನು ಈ ವರ್ತಮಾನವನ್ನು ತಂದಿರುವನು. ಇನ್ನೊಬ್ಬ ಪಠಾಣನಾಗಲಿ, ತುರ್ಕನಾಗಲಿ, ಮೊಗಲನಾಗಲಿ ಅಧಿಕಾರಿಯು ಬರುವನು. ಅವನಿಗೆ ನಾವು ಮಾಡುತ್ತಿರುವ ವ್ಯವಸ್ಥೆಯು ಏನೂ ತಿಳಿಯಲಿಕ್ಕಿಲ್ಲ. ಅರ್ಥಾತ್ ನಾವಿನ್ನು ದೇವೀಪುರದ ಉತ್ಪನ್ನವನ್ನು ದೇವೀಪುರದ ಏರ್ಪಾಡಿಗಾಗಿ ವೆಚ್ಚಮಾಡಿ, ಬೀರನಗರದ ಉತ್ಪನ್ನದ ಮೇಲಿಂದಲೇ ಎಲ್ಲ ವೆಚ್ಚಗಳನ್ನು ಸಾಗಿಸಿಕೊಂಡು ಹೋಗಬೇಕು. ಇನ್ನು ನರೇಂದ್ರನ ವಿದ್ಯಾಭ್ಯಾಸಗಳನ್ನು ನಿಲ್ಲಿಸಿ ಅವನ ಸದಾಚರಣದ ಕಡೆಗೆ

ಲಕ್ಷ್ಯಕೊಡುವದನ್ನು ಬಿಟ್ಟುಬಿಟ್ಟರೆ ನರೇಂದ್ರನು ತನ್ನಷ್ಟಕ್ಕೆ ತಾನೇ ಕೆಟ್ಟು ದರಬಾರದ ಅಪ್ರೀತಿಗೆ ಈಡಾಗುವನು."

"ಗೋಕುಲದಾಸ, ನರೇಂದ್ರನು ಈಗ ನಮ್ಮ ಸಂರಕ್ಷಣದಲ್ಲಿ ಇರುವನು. ಈ ಅವಧಿಯಲ್ಲಿ ಅವನು ದುರ್ಗುಣಿಯಾದರೆ ಸರಕಾರಕ್ಕೆ ನಾವೇ ಹೊಣೆಯಾಗಲಿಕ್ಕಿಲ್ಲವೆ ?"

"ನಾವೇಕೆ ಹೊಣೆಯಾಗುವೆವು ? ಇದುವರೆಗೆ ಅವನಿಗೆ ತಕ್ಕಮಟ್ಟಿಗೆ ವಿದ್ಯಾಭ್ಯಾಸ ಮಾಡಿಸಿದೆವು. ಮೊನ್ನಿನವರೆಗೆ ಅವರ ಆಚರಣವು ಚನ್ನಾಗಿತ್ತೆಂದು ರಾಜಾ ತೋಡರಮಲ್ಲರೇ ಮನಗಂಡು ಅಭಿಪ್ರಾಯವನ್ನು ಬರೆದಿಟ್ಟಿರುವರು. ಇನ್ನು ನರೇಂದ್ರನು ದೊಡ್ಡವನಾಗಿ ತಮ್ಮ ಮಾತು ಮೀರಿ ನಡೆಯುತ್ತಾನೆಂದು ತಾವು ಸುಭೇದಾರರಿಗೆ ತಿಳಿಸಿ ಸ್ವಸ್ಥವಾಗಿ ಕುಳಿತುಕೊಳ್ಳಿರಿ. ಬಂದದ್ದು ನಾನು ನೋಡಿಕೊಳ್ಳುತ್ತೇನೆ." ಎಂದು ಗೋಕುಲದಾಸನು ನುಡಿದು ತನ್ನ ಮನೆಗೆ ಹೋದನು.

ಅಂದಿನಿಂದ ನರೇಂದ್ರನ ಅಭ್ಯಾಸದ ಕ್ರಮವು ನಿಂತಿತು. ಅಂದಿನಿಂದ ನರೇಂದ್ರನ ಹಣದಿಂದ ದೇವೀಪುರದ ಜೀರ್ಣೋದ್ಧಾರವಾಗಲಾರಂಭಿಸಿತು. ಅಲ್ಲಿಯ ಅರಮನೆಯನ್ನು ಒಳ್ಳೇ ಶೃಂಗಾರದಿಂದ ಕಟ್ಟಿದರು. ದೇವೀಪುರದ ಕೆರೆಕಾಲವೆಗಳು ಹೊಸವಾದವು. ಬಲ್ಲವರು "ಹೀಗೇಕೆ ಹಣ ವೆಚ್ಚಮಾಡುವಿರಿ?" ಎಂದು ಗೋಕುಲದಾಸನನ್ನು ಕೇಳಿದರೆ "ಎರಡೂ ಜಮೀನದಾರಿಗಳು ನರೇಂದ್ರನಾಥರವೇ ಆಗತಕ್ಕವಲ್ಲೆ! ಎಲ್ಲಿ ಹಣ ವೆಚ್ಚಮಾಡಿದರೂ ಒಂದೇ." ಎಂದು ಆ ವಂಚಕನು ಹೇಳುವನು.

## ಆರನೆಯ ಅಧ್ಯಾಯ

## ಸಾಧ್ವಿಯಾದ ಸತಿಯು

ನರೇಂದ್ರನಾಥನೂ ಶ್ರೀಶಚಂದ್ರನೂ ಹದಿನೆಂಟು ಹತ್ತೊಂಬತ್ತು ವರುಷದ ಪ್ರಾಯದವರಾದರು. ನವಕುಮಾರನು ಅವರ ಅಭ್ಯಾಸದ ಕ್ರಮವನ್ನು ನಿಲ್ಲಿಸಿದರೂ ಅವರು ಪ್ರಚುರವಾದ ಬುದ್ಧಿಯುಳ್ಳವರಾದ್ದರಿಂದ ಆ ಮೊದಲೇ ತಮಗೆ ಸಾಕಷ್ಟು ವಿದ್ಯೆಯನ್ನು ಕಲಿತುಕೊಂಡುಬಿಟ್ಟಿದ್ದರು.

ಅವರಿಗೆ ಇನ್ನು ಗುರುಮುಖದ ಅವಶ್ಯಕತೆ ಉಳಿದಿದ್ದಿಲ್ಲವಾದ್ದರಿಂದ ಅವರಿಬ್ಬರೂ ಕೂಡಿ ಕಾವ್ಯೇತಿಹಾಸಗಳನ್ನು ಓದಿ ಆನಂದಪಡುವರು. ರಾಜನೀತಿಯ ಪುಸ್ತಕಗಳನ್ನು ಓದಿ ಚರ್ಚೆ ಮಾಡುವರು. ಗುರಿಯಿಕ್ಕಿ ಗುಂಡು ಒಗೆಯುವದನ್ನೂ, ಬರ್ಚಿ ಭಲ್ಲೆಗಳನ್ನು ಹೊಡೆಯುವದನ್ನೂ ಅವರು ನಿತ್ಯದಲ್ಲಿಯೂ ಅಭ್ಯಾಸಿಸುತ್ತಿದ್ದರು. ರಭಸದಿಂದ ಕುದುರೆಗಳನ್ನು ಓಡಿಸುತ್ತಿರುವಾಗಲೇ ಗುಂಡು ಹಾರಿಸಿ ಮೃಗಗಳನ್ನು ಕೊಲ್ಲುವದರಲ್ಲಿಯೂ, ಬಾಣ ಹೊಡೆದು ಆಕಾಶದಲ್ಲಿ ಹಾರುವ ಹಕ್ಕಿಗಳನ್ನು ಕೆಡವುವದರಲ್ಲಿಯೂ ಅವರಷ್ಟು ನಿಷ್ಣಾತರು ಸಿಕ್ಕುವಂತೆ ಇದ್ದಿಲ್ಲ.

ಚಂದ್ರಮನಂತೆ ಸಕಲ ಕಳೆಗಳಿಂದ ಯುಕ್ತರಾಗಿ ಬೆಳೆಯುತ್ತಿರುವ ಈ ಮಕ್ಕಳನ್ನು ಕಂಡು ಸುಶೀಲಾದೇವಿಗೆ ಆನಂದವಾಗುತ್ತಿತ್ತು. ಪತಿಗೆ ಪ್ರೇಮಾಸ್ಪದಳೂ ಆಪ್ತರಿಷ್ಟರಿಗೆ ಆದರೋಪಚಾರಗಳನ್ನು ಮಾಡುವವಳೂ, ಆಶ್ರಿತರಿಗೆ ಕೊಡಗೈಯಳೂ ಆದ ಸುಶೀಲಾದೇವಿಗೆ ತಾನು ಮಮತೆಯಿಂದ ಬೆಳಿಸಿದ ಮಕ್ಕಳು ದೊಡ್ಡವರಾಗಿ ಗುಣವಂತರೂ, ರೂಪವಂತರೂ ಆದದ್ದು ಕಂಡು ಅವಳಿಗೆ ಸಂತೋಷವೂ ಅಭಿಮಾನವೂ ಆಗದಿದ್ದೀತೆ? "ಶ್ರೀಶಚಂದ್ರ, ಹೇಮಲತೆಗೆ ನರೇಂದ್ರನು ತಕ್ಕವನಾದ ವರನಲ್ಲವೆ?" ಎಂದು ಅವಳು ಒಮ್ಮೆ ಮುಗುಳುನಗೆ ನಕ್ಕು ಶ್ರೀಶನನ್ನು ಕೇಳುವಳು. ಮತ್ತೊಮ್ಮೆ ಹೇಮಲತೆಯನ್ನು ಕುರಿತು "ಹೇಮಾ, ಜಗತ್‌ಸುಂದರಿಯು ನಿನ್ನ ಅತ್ತಿಗೆಯಾದರೆ ನೆಟ್ಟಗಾಗುವದಿಲ್ಲೆ?" ಎಂದು ಆಸ್ಥೆಯಿಂದ ಕೇಳುವಳು.

ಜಗತ್‌ಸುಂದರಿಯೂ ಹೇಮಲತೆಯೂ ಈಗ ಹದಿನೈದು ಹದಿನಾರು ವರುಷದ ನವವಧುಗಳಾಗಿ ಬಲು ಚಲುವೆಯರಾಗಿ ಕಾಣುತ್ತಿದ್ದರು. ಅವರೂ ತಕ್ಕಮಟ್ಟಿಗೆ ಓದುಬರಹ ಕಲಿತು, ಗಾನ, ಚಿತ್ರಕಲೆ, ಕಶೀದೆ ಮುಂತಾದವುಗಳಲ್ಲಿಯೂ ಪ್ರವೀಣರಾಗಿದ್ದರು. ಈಗೀಗ ಅವರು ಪ್ರಬುದ್ಧರಾದ ನರೇಂದ್ರ ಶ್ರೀಶಚಂದ್ರರೊಡನೆ ಕೂಡಿ ಆಡಲು ನಾಚಿಕೊಂಡು ಬಿಟ್ಟು ಬಿಟ್ಟಿದ್ದರು. ಸುಶೀಲಾದೇವಿಯು ವಿವಾಹದ ಮಾತುಗಳನ್ನಾಡುತ್ತಿರುವದನ್ನು ಕೇಳಿಯಂತೂ ಅವರು ಆ ತರುಣರನ್ನು ಕಂಡು ಅಷ್ಟು ದೂರ ಹಾಯುತ್ತಿದ್ದರು. ಆದರೆ ಈಗಲೇ ಅವರಲ್ಲಿ ಮನ್ಮಥನ ವಿಕಾರಗಳು ಸೇರಿಕೊಂಡಿದ್ದವೆಂದು ಮಾತ್ರ ಹೇಳಲಾಗದು.

ಶ್ರೀಶನ ವಿನಯುವನ್ನೂ, ಅವನ ಸದ್ಗುಣಗಳನ್ನೂ, ಅವನ ಶರೀರ ಸಂಪತ್ತನ್ನೂ ಕಂಡು ಸುಶೀಲಾದೇವಿಯು ಸಂತೋಷಪಡುತ್ತಿದ್ದಳೆಂದು ನಾವು ಹೇಳಿದ್ದೇವಷ್ಟೆ? ಇತ್ತಿತ್ತಲಾಗಿ ಅವಳು, ಶ್ರೀಶನು ತನ್ನ ಮಗನೇ ಎಂದು ಭಾವಿಸಿಕೊಂಡು ತನಗೆ ಗಂಡುಮಕ್ಕಳಾಗಲಿಲ್ಲವೆಂಬ ವ್ಯಸನವನ್ನೇ ಅವಳು ಮರೆತುಬಿಟ್ಟಳು. ಶ್ರೀಶನ ಬಯಕೆಗಳನ್ನು ಅವಳು ಪೂರೈಸಿ ಎರಡನೆಯ ಕೆಲಸ ಮಾಡುತ್ತಿದ್ದಳು. ಮನೆಯ ಯಜಮಾನನಿಗೆ ಸಲ್ಲತಕ್ಕ ಮರ್ಯಾದೆಯು ಶ್ರೀಶನಿಗೆ ಸಲ್ಲದಿದ್ದರೆ ಅವಳು ಯಾರನ್ನೂ ಕ್ಷಮಿಸುತ್ತಿದ್ದಿಲ್ಲ.

ಒಂದು ದಿವಸ ಸುಶೀಲಾದೇವಿಯೂ ನವಕುಮಾರನೂ ಶ್ರೀಶಚಂದ್ರನೂ ಮಾತಾಡುತ್ತ ಕುಳಿತಾಗ, ನವಯೌವನದ ವಿಕಾಸದಿಂದೊಪ್ಪುವ ಶ್ರೀಶನ ಮನೋಹರವಾದ ಮುಖವನ್ನು ಕಂಡು ಸುಶೀಲಾದೇವಿಯು ಆನಂದದಿಂದ ತನ್ನ ಪತಿಯನ್ನು ಕುರಿತು "ನೋಡಿದಿರಾ! ಶ್ರೀಶನು ದೊಡ್ಡವನಾಗಿದ್ದಾನೆ; ನನ್ನ ಬಂಗಾರದಂಥ ಮಗನಿಗೆ ತಕ್ಕವಳಾದ ಕನ್ನೆಯನ್ನು ನೀವು ಬೇಗನೆ ಹುಡುಕಿ ತರದಿದ್ದರೆ ನಾನು ಕೇಳುವವಳಲ್ಲ" ಎಂದು ಮಂದಹಾಸದಿಂದ ನುಡಿದಳು.

ಈ ಮಾತು ಕೇಳಿ ಶ್ರೀಶನು ನಾಚಿಕೊಂಡು ಮೆಲ್ಲನೆ ಅಲ್ಲಿಂದೆದ್ದು ನರೇಂದ್ರನ ಕೋಣೆಗೆ ಹೊರಟು ಹೋದನು.

"ನೋಡಿದಿರಾ! ಶ್ರೀಶನು ನಾಚಿಕೊಂಡು ಹೊರಟು ಹೋದನು. ಅವನು ಮದುವೆಗೆ ತಕ್ಕವನಾಗಿರುವನೆಂಬದಕ್ಕೆ ಸಂದೇಹವಿಲ್ಲ." ಎಂದು ಮತ್ತೆ ಸುಶೀಲಾದೇವಿಯು ಹೇಳಿದಳು.

ಗೋಕುಲದಾಸನ ದುರ್ಬೋಧನದಿಂದ ನವಕುಮಾರನ ಮನಸ್ಸಿನಲ್ಲಿ ಶ್ರೀಶನ ವಿಷಯವಾಗಿ ವಿಪರೀತವಾದ ಕಲ್ಪನೆಗಳು ಬರುತ್ತ ನಡೆದದ್ದರಿಂದ ನವಕುಮಾರನು ತನ್ನ ಹೆಂಡತಿಯ ಮೃದುಸ್ಮಿತವಾದ ಮುಖವನ್ನು ತುಸು ಹೊತ್ತು ನೋಡಿ, "ಪ್ರಿಯೇ ಈಗಲೇ ಶ್ರೀಶನ ವಿವಾಹ ಮಾಡಬೇಕಾದರೆ ಅನೇಕ ವಿಚಾರಗಳುಂಟು; ಅವನು ನಮ್ಮ ಮನೆತನದ ಅಭಿಮಾನವನ್ನು ಬಿಟ್ಟುಕೊಟ್ಟು ನಮಗೆ ವಿರೋಧಿಗಳಾದವರ ಮಗನಾದ ನರೇಂದ್ರನ ಸಂಗಡ ಮಾಡಕೂಡದಷ್ಟು ಸ್ನೇಹವನ್ನು ಮಾಡಿಕೊಂಡಿದ್ದಾನೆ. ಈಗೀಗಲಂತೂ ಅವನು ಗರ್ವಿಷ್ಟನಾಗಿ ಕಂಡ ಕಂಡವರ ಮರ್ಯಾದೆಯನ್ನು

ತೆಗೆದುಕೊಳ್ಳುತ್ತಿರುವ ವರ್ತಮಾನವನ್ನು ನಾನು ಕೇಳಿದ್ದೇನೆ. ಇಂಥವನು ನನ್ನ ಮಗನಾಗಿ ನನ್ನ ಮನೆಯಲ್ಲಿಯೇ ಇರಲಾಗದು.'' ಎಂದು ಹೇಳಿದನು.

ಈ ಮಾತು ಕೇಳಿ ಸುಶೀಲಾದೇವಿಗೆ ಪರಮಾವಧಿಯ ವಿಸ್ಮಯವಾಯಿತು.

" ಯಾರು ಹೇಳಿದರು ನಿಮಗೆ ? ಶ್ರೀಶನು ಗರ್ವಿಷ್ಟನೆ ! ಊರಲ್ಲಿಯ ಚಿಕ್ಕ ದೊಡ್ಡವರು ಕೂಡಿಯೇ ನನ್ನ ಮಗನ ಸದ್ಗುಣಗಳನ್ನು ಕಂಡು ಹಾಡಿ ಹರಿಸುತ್ತಿರಲು ನಿಮಗೆಲ್ಲಿಯ ಕರ್ಣಪಿಶಾಚವು ಗಂಟುಬಿದ್ದಿತು ಮತ್ತೆ ? ಊರಲ್ಲಿಯ ಒಬ್ಬರಾದರೂ ಬಂದು ಶ್ರೀಶನ ವಿರುದ್ಧವಾಗಿ ನಿಮ್ಮ ಮುಂದೆ ದೂರು ಹೇಳಿದ್ದು ಕೇಳಿದ್ದೀರಾ? ಸತ್ಯವಾಗಿ ಹೇಳಿರಿ.'' ಎಂದು ಆ ಮಾತೆಯು ಮಿಥ್ಯಾಪವಾದವನ್ನು ಸಹಿಸದೆ ನುಡಿದಳು.

ಈ ವಾದಕ್ಕೆ ನವಕುಮಾರನು ನಿರುತ್ತರನಾದನು. ಅವನು ತುಸು ಹೊತ್ತು ವಿಚಾರಮಾಡಿ " ಅವನು ವೆಚ್ಚಮಾಡುತ್ತಿರುವ ಹಣಕ್ಕೆ ಮಿತಿಯುಂಟೇನು ? ಮಿತವ್ಯಯವಂತೂ ಅವನಿಗೆ ಗೊತ್ತೇ ಇಲ್ಲ. " ಎಂದು ವಾದಿಸಿದನು.

" ಬಡಬಗ್ಗರ ದೀನವಾದ ಸ್ಥಿತಿಯನ್ನು ಕಂಡು ಕನಿಕರಪಟ್ಟು ರೂಪಾಯಿ ಎರಡು ರೂಪಾಯಿಗಳನ್ನಾಗಲಿ, ಬರಿಮೈಯವರಿಗೆ ಹೊದ್ದುಕೊಳ್ಳಲಿಕ್ಕೆ ಚಿಕ್ಕ ಬೆಲೆಯ ಬಟ್ಟೆಗಳನ್ನಾಗಲಿ ಅವನು ಯಾವಾಗಾದರೂ ಕೊಡುವದುಂಟು. ಹೀಗೆ ಅಲ್ಪ ಸ್ವಲ್ಪ ಹಣವನ್ನು ವೆಚ್ಚಮಾಡಿದ್ದು ಹಾಳೆ? ಹಣ ಹಾಳುಮಾಡಲಿಕ್ಕೆ ಅವನೇನು ದುಂದುಗಾರನೆ? ಹುಡುಗನಲ್ಲಿಯ ಉದಾರತನವು ನಿಮಗೆ ಕೆಟ್ಟದಾಗಿ ಕಂಡಿತಲ್ಲೆ ? ''

'' ಶ್ರೀಶನು ತನ್ನ ತಂದೆಯ ಮನೆಯ ಹಣವನ್ನು ವೆಚ್ಚಮಾಡಿ ಉದಾರನೆನಿಸಿಕೊಂಡರೆ ಚಿಂತೆಯಿಲ್ಲ. ''

'' ಇದು ಯಾರ ಮನೆ? ನನ್ನ ಮಗನಾದ ಶ್ರೀಶನು ಈ ಮನೆಯ ಯಜಮಾನನಲ್ಲೆ ? ಅವನಲ್ಲದೆ ದೇವೀಪುರಕ್ಕೆ ಯಾರು ಒಡೆಯರಾಗುತ್ತಾರೋ ನೋಡುವೆನು." ಎಂದು ಸಥಿಯಿಂದ ಆ ಮಹಾಸತಿಯು ನುಡಿದಳು.

'' ಇನ್ನೊಂದು ವರುಷಾರುತಿಂಗಳು ಹೋದ ಬಳಿಕ ಶ್ರೀಶನೆಂಥವ

ನೆಂಬುದನ್ನು ನೀನು ಮನಗಾಣುವಿ. ಸುಳ್ಳೇ ಯಾಕೆ ಮೋಲುಕಟ್ಟಿ ಮಾತಾಡುವಿ ? ”

“ ಚೊಕ್ಕ ಚಿನ್ನವು ಸಾವಿರ ವರ್ಷವಿಟ್ಟರೂ ಕೆಡದು.”

ನವಕುಮಾರನು ವಿಚಾರಗ್ರಸ್ತನಾಗಿ ಏನೂ ಮಾತಾಡದೆ ಸುಮ್ಮನೆ ಕುಳಿತನು. ಸಾಧ್ವಿಯಾದ ತನ್ನ ಹೆಂಡತಿಯ ಮಾತು ಕೇಳಲಾಗಿ, ಶ್ರೀಶನು ಉತ್ತಮನಾದ ಹುಡುಗನಾಗಿ ತೋರಿದನು. ಗೋಕುಲದಾಸನ ಮಾತು ಕೇಳಿದಾಗ ಅವನ ಮುಖಾವಲೋಕನವನ್ನು ಕೂಡ ಮಾಡಬಾರದೆಂಬ ಮನಸ್ಸಾಗುತ್ತಿತ್ತು. ಇಬ್ಬರೂ ಸುಳ್ಳಾಡಲಿಕ್ಕೆ ಕಾರಣವಿಲ್ಲ. ಶ್ರೀಶನು ಅರೆವಾಸಿಯಾಗಿ ಸದ್ಗುಣಿಯೂ, ಅರೆವಾಸಿಯಾಗಿ ದುರ್ಜನನೂ ಆಗಿರಬಹುದೇನು ? ಎಂದು ಅವನು ಯೋಚಿಸುತ್ತಿದ್ದನು.

“ ನಾನು ಕೇಳಿಕೊಂಡದ್ದಕ್ಕೆ ಏನು ಹೇಳೋಣಾಯಿತು ? ” ಎಂದು ಸುಶೀಲಾದೇವಿಯು ತನ್ನ ಗಂಡನು ಸುಮ್ಮನೆ ಕುಳಿತದ್ದು ನೋಡಿ ಕೇಳಿದಳು.

“ ಏನು ಕೇಳಿಕೊಂಡಿರಿ ನೀವು ? ” ಎಂದು ನವಕುಮಾರನು ನಿದೆಯಿಂದ ಎಚ್ಚತ್ತವನಂತೆ ಕೇಳಿದನು.

“ ಏನು ಕೇಳಿಕೊಂಡೆನೆ ! ಶ್ರೀಶನ ವಿವಾಹದ ವಿಷಯವಾಗಿ ಏನು ಆಲೋಚನೆ ? ”

“ ಅಷ್ಟೇನು ಅವಸರವೀಗ ? ಅವನ ಮದುವೆಯ ವಯಸ್ಸು ಮೀರುತ್ತ ಬಂದಿಲ್ಲವಷ್ಟೆ ? ” ಎಂದು ನವಕುಮಾರನು ಕಾಲುಚಾಚಿ ಮಲಗಿಕೊಂಡು ನುಡಿದನು.

“ ಕಾಲುಚಾಚಿ ಹಾಗೆ ಮಲಗಿಕೊಂಡಿದ್ದರ ಮೇಲಿಂದ ಈ ವಿಷಯದಲ್ಲಿ ನೀವು ಉದಾಸೀನರಾಗಿರುವಂತೆ ಕಾಣುತ್ತದೆ. ”

“ ಹಾಗಲ್ಲ. ಶ್ರೀಶನು ನರೇಂದ್ರನ ಸಂಗತಿಯನ್ನು ಬಿಟ್ಟು ದೇವೀಪುರದ ಅಭಿಮಾನಿಯಾದನೆಂದು ತಿಳಿದ ಹೊರತು ನಾನು ಆತನ ಸುದ್ದಿಗೆ ಹೋಗುವದಿಲ್ಲ. ”

“ ತಿರುಗಿಮುರಿಗಿ ಅದೇ ಪಲ್ಲಾನೇ ಹಾಡಿದರೆ ಏನು ಹೇಳಬೇಕು ! ನಮ್ಮ ಮನೆತನದ ಅಭಿಮಾನವು ಶ್ರೀಶನಲ್ಲಿ ಇಲ್ಲವೆ ? ನಮ್ಮ ಮಾವಂದಿರೂ

ಅವರ ಪೂರ್ವಜರೂ ಮಾಡಿದ ಪರಾಕ್ರಮ ಕಥೆಗಳನ್ನೂ, ಅವರ ಔದಾರ್ಯದ ಉದಾಹರಣಗಳನ್ನೂ ಅವನು ನಮ್ಮೆಲ್ಲರ ಮುಂದೆ ಹೇಳಿ ವರ್ಣಿಸುವಾಗ ಶ್ರೀಶನ ಮುಖದಲ್ಲಿಯ ಆವೇಶವನ್ನೂ, ಅವನಲ್ಲಿ ಕಂಡುಬರುವ ಸ್ಫೂರ್ತಿಯನ್ನೂ ನೋಡಲಾಗಿ ಪ್ರತ್ಯಕ್ಷ ಮಾವನವರನ್ನೇ ಕಂಡಂತೆ ಭಾಸವಾಗುತ್ತದೆ. ದೇವೀಪುರದ ವ್ಯವಸ್ಥೆಯು ತನ್ನ ಕೈಯಲ್ಲಿ ಬಂದಿತೆಂದರೆ ಅದರ ವೈಭವವನ್ನು ಬೆಳಿಸಿ ಬೀರನಗರವು ನಾಚುವಂತೆ ಮಾಡುವೆನೆಂದು ಶ್ರೀಶನು ಹೇಳಿದ್ದು ಕೇಳಿ ನನಗೆ ಕೌತುಕವಾದದ್ದು ಒತ್ತಟ್ಟಿಗಿರಲಿ, ನೀವೂ ಕೂಡ ಅವನನ್ನು ಸಂತೋಷದಿಂದ ಅಪ್ಪಿಕೊಳ್ಳುವಿರಿ. ''

ಈ ಮಾತು ಕೇಳಿ ನವಕುಮಾರನು ಮಲಗಿದವನು ಎದ್ದು ಕುಳಿತು, '' ಇಷ್ಟು ಅಭಿಮಾನವುಳ್ಳವನಾದ ನಿನ್ನ ಮಗನು ನಮಗೆ ವೈರಿಯಾದ ನರೇಂದ್ರನ ಸ್ನೇಹವನ್ನೇಕೆ ಬೆಳೆಸುತ್ತಿರುವನು ? '' ಎಂದು ತುಸು ನಕ್ಕಂತೆ ಮಾಡಿ ಕೇಳಿದನು.

" ಇದರಲ್ಲಿ ಕೆಟ್ಟದ್ದೇನಾಯಿತು ? ನಮ್ಮ ವಿರೋಧಿಗಳನ್ನು ನಮ್ಮವರನ್ನಾಗಿ ಮಾಡಿಕೊಳ್ಳುವದಕ್ಕಿಂತಲೂ ಹೆಚ್ಚಿನ ಪುರುಷಾರ್ಥವೇನಿರುವದು ? ಶ್ರೀಶನು ಹೇಡಿಯಾಗಿ ತನ್ನ ವಿರೋಧಿಗಳಿಗೆ ನಮೋ ನಮೋ ಎಂದು ನಡಕೊಂಡರೆ ದೇವೀಪುರದ ಅಭಿಮಾನಕ್ಕೆ ಹಾನಿ ತಟ್ಟಿತೆಂದು ಹೇಳಬಹುದು. ಇನ್ನು ನರೇಂದ್ರನೇ ವಿಚಾರಿಯಾದ ಶ್ರೀಶಚಂದ್ರನ ಮತಾನುವರ್ತಿಯಾಗಿ ನಡಕೊಳ್ಳುವನೆಂದು ನಾನು ನಂಬಿದ್ದೇನೆ.'' ಎಂದು ಸುಶಿಲಾದೇವಿಯು ಉತ್ಸಾಹದಿಂದ ನುಡಿದಳು.

" ಇಷ್ಟು ದಿವಸ ನಾವು ವಿರೋಧಿಗಳಾಗಿದ್ದು ಇನ್ನು ನಾವು ಬೀರನಗರದವರೊಡನೆ ಸ್ನೇಹದಿಂದಿದ್ದರೆ ನಮಗೆ ಜನರು ಏನೆನ್ನುವರು ? ''

'' ಹುಚ್ಚುತನದ ಮಾತಿದು. ನಮ್ಮ ಪೂರ್ವಜರು ಅಸಾಧಾರಣರಾದ ಪ್ರತಾಪಶಾಲಿಗಳು. ಅವರಲ್ಲಿ ಕಿಂಚಿತ್ ವೃಥಾಭಿಮಾನವಿದ್ದರೂ ಅದು ಭೂಷಣವೇ ಆಗಿ ಕಾಣುತಿತ್ತು. ರಾಜಕಾರಣಕ್ಕಾಗಿ ಅವರೂ ಬೀರನಗರದವರೂ ವಿರೋಧಿಗಳಾಗಿರಬಹುದು. ಈಗೇನು ಅಂಥ ರಾಜಕಾರಣವಿರುದೆಂದು ನನಗೆ ತೋರುವದಿಲ್ಲ.''

"ಸಾಕು ! ಸಾಕು !! ತವರಮನೆಯನ್ನು ಮೇಲುಕಟ್ಟಿ ಬರಬೇಡಿರಿ. ನಿಮ್ಮ ಭೂಪೇಂದ್ರನು ನಮ್ಮನ್ನು ಮುರಿದು ಮೂಲೆಗುಂಪಿ!ಮಾಡಿದ್ದು ನಾನು ಮರೆಯುವಂತೆ ಇಲ್ಲ!" ಎಂದು ನವಕುಮಾರನು ಕಿಂಚಿತ್ ಕ್ರುದ್ಧನಾಗಿ ನುಡಿದನು.

" ಭೂಪೇಂದ್ರನಾಥರು ನಿಮಗೇನು ಮಾಡದರೋ, ನಾವು ಯಾಕೆ ದೇಶಭ್ರಷ್ಟರಾದೆವೋ ಜಗತ್ತಿಗೆ ಗೊತ್ತಾದ ಮಾತಾಗಿದೆ. ಅದು ಹೇಗೇ ಇರಲಿ. ಅವರಂತೂ ತೀರಿಕೊಂಡು ಸ್ವರ್ಗವಾಸಿಗಳಾದರು. ಎರಡೂ ಅರಿಯದ ಬಾಲಕನಾದ ನರೇಂದ್ರನು ನಿಮಗೇನು ಕೆಡಕು ಮಾಡಿದ್ದಾನೆ? ನೀವೇ ಅವನ ತಂದೆಗಳಾಗಿ ಸಣ್ಣವನಿಂದ ದೊಡ್ಡವನನ್ನಾಗಿ ಮಾಡಿದಿರಿ. ನರೇಂದ್ರನಂತೂ ನೀವು ಅಡ್ಡಿಟ್ಟ ಕಡ್ಡೀ ದಾಟಿಲ್ಲ. ಇನ್ನು ಇಂಥ ವಿಚಾರ ಗಳಿಗೆ ಈಡಾಗಬೇಡಿರಿ. ನೀವು ನಿರ್ಮಲಾಂತಃಕರಣದವರೆಂದು ನಾನು ಕಂಡೇ ಈ ಚರಣಗಳಿಗೆ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ." ಎಂದು ಸುಶೀಲಾದೇವಿಯು ಪಾತಿವ್ರತ್ಯದಿಂದ ಜಾಜ್ವಲವಾಗಿರುವ ತನ್ನ ಮುಖದಲ್ಲಿ ಮಂದಹಾಸವನ್ನು ತಳೆದು ನುಡಿದಳು.

ಸುಶೀಲಾದೇವಿಯ ಆ ಪವಿತ್ರವಾದ ಮಂದಹಾಸದ ಮುಂದೆ ನವ ಕುಮಾರನ ಷಡ್ವೈರಿಗಳೆಲ್ಲ ನಿಲ್ಲದೆ ಓಡಿದವು. ಅವನು ತನ್ನ ಹೆಂಡತಿಯ ಆಲ್ಹಾದಕರವಾದ ಮುಖವನ್ನು ನೋಡಿ ನಗುತ್ತ " ಈಗೇನು ಮಾಡಬೇ ಕೆನ್ನುವಿರಿ ? '' ಎಂದು ಕೇಳಿದನು.

" ನಾನೆಲ್ಲಾ ಹೇಳುವೆನು, ಕೇಳಿದರೆ ಚಿಂತಿಲ್ಲ." ಎಂದು ಆ ಸಾಧ್ವಿಯು ಅವನತಮುಖಿಯಾಗಿ ಕೇಳಿದಳು.

" ಹೇಳಿರಿ. ಕೇಳೇ ಕೇಳುತ್ತೇನೆ. ಈ ಮನೆಯಲ್ಲಿ ಕಡೆತನಕ ನಿಮ್ಮ ಮಾತುಗಳೇ ಸಾಗುತ್ತಲಿವೆ. ನನ್ನ ಮಾತು ಸಾಗಿದ್ದು ಎಂದು ? " ಎಂದು ನುಡಿದು ನವಕುಮಾರನು ಗಹಗಹಿಸಿ ನಕ್ಕನು.

" ಜಗತ್‌ಸುಂದರಿಯು ಈಗ ಹದಿನಾಲ್ಕು ಹದಿನೈದು ವರ್ಷದಾಕೆ ಆಗಿದ್ದಾಳೆ; ರೂಪದಲ್ಲಿಯಂತೂ ಅವಳನ್ನು ತೆಗೆಯುವ ಹಾಗೆಯೇ ಇಲ್ಲ. ಅವಳನ್ನು ನಮ್ಮ ಶ್ರೀಶನಿಗೆ ತೆಗೆದುಕೊಂಡರೆ ಕಬ್ಬಿನ ಮೇಲೆ ಜೇನು ಇಟ್ಟಂತೆ

ಆಗುವದು. ಬೀರನಗರದ ವ್ಯವಸ್ಥೆಯು ನಿಮ್ಮ ಕೈಯಲ್ಲಿ ಇರುವದರ ಒಳಗಾಗಿಯೇ ಇದೊಂದು ಕಾರ್ಯವನ್ನು ಮಾಡಿಬಿಡತಕ್ಕದ್ದು."

"ನೀವು ಹೇಳುವದೆಲ್ಲ ಸರಿ. ಆದರೆ ಜಗತ್‌ಸುಂದರಿಯನ್ನು ನಮ್ಮ ಮಗನಿಗೆ ಕೊಡಿರೆಂದು ನಾವೇ ಕೇಳಬೇಕೋ? ನರೇಂದ್ರನು ಬಂದು ಜಗತ್‌ಸುಂದರಿಯನ್ನು ತೆಗೆದುಕೊಳ್ಳಿರೆಂದು ಕೇಳಿದಾಗ ನಾವು ವಿಚಾರ ಮಾಡುವೆವು."

"ಗಟ್ಟಿಯೇ ಈ ಮಾತು?" ಎಂದು ನವಕುಮಾರನ ಸಹಧರ್ಮಚಾರಿಣಿಯು ಸಂತೋಷದಿಂದ ನಗುತ್ತ ಕೇಳಿದಳು.

"ನಿಮಗೆ ಸುಳ್ಳು ಹೇಳುತ್ತೇನೇನು ನಾನು?" ಎಂದು ನವಕುಮಾರನು ತನ್ನ ಹೆಂಡತಿಯ ಕೈ ಹಿಡಿದು ಮಾತಾಡಿ ನಕ್ಕನು.

ಒಂದು ಕೆಲಸವಂತೂ ಪಾರಾಯಿತು, ಇನ್ನೊಂದು ಕೆಲಸದ ಬಗ್ಗೆ ಮತ್ತೆ ಅನುಕೂಲವಾದ ಸಮಯದಲ್ಲಿ ಆಲೋಚನೆ ಮಾಡೋಣ, ಎಂದು ಸುಶೀಲಾದೇವಿಯು ಹೇಮಲತಾ ನರೇಂದ್ರರ ವಿವಾಹದ ವಿಚಾರವನ್ನು ಕುರಿತು ಆಲೋಚಿಸುತ್ತ ಪತಿಯ ಸನ್ನಿಧಾನದಿಂದೆದ್ದು ತನ್ನ ಸ್ಥಳಕ್ಕೆ ಹೊರಟು ಬಂದಳು.

## ಏಳನೆಯ ಅಧ್ಯಾಯ

## ರಾಜಾ ಮಾನಸಿಂಹ

ರಣಧೀರನೂ, ರಾಜಕಾರಣ ಧುರಂಧರನೂ, ವ್ಯವಹಾರಚತುರನೂ ಆದ ರಾಜಾ ತೋಡರಮಲ್ಲನು ತೀರಿಕೊಂಡ ಬಳಿಕ ಅವನ ಸ್ಥಳದಲ್ಲಿ ರಾಜಾ ಮಾನಸಿಂಹನು ಬಂಗಾಲದ ಸುಭೇದಾರನಾದನು.

ಪ್ರತ್ಯಕ್ಷ ಅಕಬರಬಾದಶಹನ ಆಪ್ತನೂ, ಅಂಬರದ ಸಂಸ್ಥಾನಾಧಿಪತಿಯೂ, ಅತುಲ ಪರಾಕ್ರಮಿಯೂ ಆದ ಮಾನಸಿಂಹ ರಾಜನು ಬಂಗಾಲದ

ಸುಭೇದಾರನಾದನೆಂದರೆ ಅವನು ಬಂಗಾಲದ ರಾಜನೇ ಸರಿ ಎಂದು ಅನೇಕರು ಮಾತಾಡಲಾರಂಭಿಸಿದರು. ತೋಡರಮಲ್ಲನ ಜಾಣ್ಮೆಯೂ, ದೂರದರ್ಶಿತ್ವವೂ, ಕ್ಷಮೆಯೂ ಮಾನಸಿಂಹನಲ್ಲಿ ಇದ್ದಿಲ್ಲ; ಆದರೆ ಗೆದ್ದ ಪ್ರಾಂತಗಳನ್ನು ಚಾಚಿಕೊಂಡು ಸಿಂಹನಂತೆ ಗುರ್ರೆಂದು ಕುಳಿತ ಮಾನ ಸಿಂಹನನ್ನು ಕಂಡು ಶತ್ರುಗಳಿಗೆ ಮಿಸುಕಲು ಕೂಡ ಅವಕಾಶವಿರುತ್ತಿದ್ದಿಲ್ಲ. ಇಂಥ ದರ್ಪಶಾಲಿಯಾದ ಸುಭೇದಾರನನ್ನು, ಹೊಸದಾಗಿ ಗೆದ್ದ ಬಂಗಾಲ ಪ್ರಾಂತಕ್ಕೆ ಅಕಬರಬಾದಶಹನು ಆರಿಸಿ ಕಳಿಸಿದ್ದನು. ಆದ್ದರಿಂದ ಮಾನ ಸಿಂಹನು ಹೇಳಿದ್ದೇ ಪ್ರಮಾಣವೆಂದೂ, ಅವನು ತೋರಿಸಿದ್ದೇ ಪೂರ್ವ ದಿಶೆಯೆಂದೂ ಎಲ್ಲ ಜಮೀನದಾರರು ತಿಳಿಯಬೇಕಾಗಿ ಬಾದಶಹರ ಶಾಸನ ವಿತ್ತು. ಮಾನಸಿಂಹರಾಜನು ಬಂಗಾಲಕ್ಕೆ ಬಂದ ಬಳಿಕ ಆಖಮಹಾಲಿನ ರಮಣೀಯತೆಯನ್ನು ಕಂಡು ಅಲ್ಲಿ ತನ್ನ ಅರಮನೆಯನ್ನು ಕಟ್ಟಿ ಆ ಊರನ್ನು ಬೆಳಸಿ ಆದಕ್ಕೆ ರಾಜಮಹಾಲವೆಂಬ ಗೌರವದ ಹೆಸರಿಟ್ಟನು.

ತನ್ನ ಸುಭೆಯಲ್ಲಿ ಸುವ್ಯವಸ್ಥೆಯನ್ನು ಉಂಟುಮಾಡುವದಕ್ಕಾಗಿ ಮಾನಸಿಂಹರಾಜನು ನಿರಲಸನಾಗಿ ಎಲ್ಲ ಕಡೆಯಲ್ಲಿಯೂ ಸಂಚಾರ ಮಾಡುತ್ತಿದ್ದನು. ಅಲ್ಲಲ್ಲಿಯ ಜಮೀನದಾರರೊಡನೆ ಆಪ್ತಾಲೋಚನೆಗೈದು ಪರಿಸ್ಥಿತಿಯನ್ನು ಅರಿತುಕೊಳ್ಳುತ್ತಿದ್ದನು. ದ್ರೋಹಿಗಳ ಅಂತಸ್ಥ ಕೃತ್ಯಗಳ ತುಬ್ಬುಹಚ್ಚಿ ಅವರನ್ನು ಅಲ್ಲಿಯೇ ದಂಡಿಸುತ್ತಿದ್ದನು. ಇಂಥ ವಿಚಾರಣೆ ಗಾಗಿ ಮಾನಸಿಂಹರಾಜನು ಬೇಗನೆ ಬೀರನಗರಕ್ಕೆ ಬರುವವನಾಗಿದ್ದನು.

ಮಾನಸಿಂಹರಾಜನು ಬೀರನಗರಕ್ಕೆ ಬಂದರೆ ಅವನ ಸ್ವಾಗತಕ್ಕಾಗಿ ಏನೇನು ಮಾಡತಕ್ಕದ್ದೆಂದೂ, ಅವನು ಬಂದಾಗ ದೇವೀಪುರವನ್ನು ಬಿಡಿಸಿ ಕೊಳ್ಳಲಿಕ್ಕೆ ಏನೇನು ಹಂಚಿಕೆಮಾಡಬೇಕೆಂದೂ ಆಲೋಚಿಸುವದಕ್ಕಾಗಿ ನವಕುಮಾರನು ಗೋಕುಲದಾಸನನ್ನು ಕರಿಸಿಕೊಂಡು ಆವನೊಡನೆ ಆಪ್ತಾಲೋಚನೆಗೈಯುತ್ತ ಕುಳಿತನು.

"ಯಜಮಾನರೇ, ತೋಡರಮಲ್ಲರಾಜನ ಪೂರ್ವಾಪರ ವಿಚಾರವೂ, ಅವನಚಾಣಾಕ್ಷತನವೂ ಮಾನಸಿಂಹರಾಜನಿಗೆ ಬಾರದು. ತೋಡರಮಲ್ಲನನ್ನು ಸಂತೋಷಗೊಳಿಸುವ ರೀತಿ ಬೇರೆಯಾಗಿತ್ತು. ಖಡ್ಗಧಾರಿಯಾದ ಮಾನಸಿಂಹ ರಾಜನನ್ನು ಸಂತೋಷಗೊಳಿಸಬೇಕಾದರೆ ಸ್ವಾಗತದ ಮಹೋತ್ಸವಗಳೂ,

ಅತ್ಯಾದರವೂ, ಬಹಿರಂಗದ ಆಡಂಬರವೂ ಯಥೇಷ್ಟವಾಗಿ ಇದ್ದರೆ ಸಾಕಾಗು ವವು. ಈ ಸಮಯದಲ್ಲಿ ನೀವು ಹೇರಳವಾಗಿ ಹಣ ವೆಚ್ಚಮಾಡಿರಿ. ಹಿಂದೆ ಮುಂದೆ ನೋಡಿದರೆ ಆಗದು. ಬೀರನಗರದ ಹಣ ವೆಚ್ಚವಾಗಿ, ಆಯತ್ತ ವಾಗಿ ಯಜಮಾನರ ಕಾರ್ಯಸಿದ್ಧಿಯಾಗುತ್ತಿರಲು ಆಲೋಚಿಸುವದೇನು ?" ಎಂದು ಗೋಕುಲದಾಸನು ಉಪಕ್ರಮಿಸಿದನು.

"ನೀನು ಹೇಳಿದಂತೆ ಹಣ ವೆಚ್ಚಮಾಡತಕ್ಕದ್ದು ಸರಿ. ಆದರೆ ಕೇವಲ ನಮ್ಮ ಹಿತಕ್ಕಾಗಿ ನಾವು ಬೀರನಗರದ ಹಣ ವೆಚ್ಚಮಾಡಿದರೆ ನಾವು ಸರಕಾರಕ್ಕೆ ಲೆಕ್ಕ ಒಪ್ಪಿಸುವದು ಹೇಗೆ ?"

"ಬೀರನಗರದ ಯಜಮಾನರು ಸ್ವತಂತ್ರರಾಗಿದ್ದರೆ ಮಾನಸಿಂಹ ರಾಜನಂಥ ಮಹಾತ್ಮರ ಸ್ವಾಗತಕ್ಕಾಗಿ ಅವರು ತಮ್ಮ ಬೊಕ್ಕಸದಲ್ಲಿಯ ಹಣ ವೆಚ್ಚಮಾಡುತ್ತಿದ್ದರಷ್ಟೆ ? ರಾಜರು ಈ ಸಮಯದಲ್ಲಿ ಬೀರನಗರಕ್ಕೇ ಬರುವವರಾಗಿದ್ದಾರೆ; ಇಲ್ಲಿಯ ಹಣವನ್ನು ವೆಚ್ಚಮಾಡದೆ ನಾವಿನ್ನೆಲ್ಲಿಯದು ವೆಚ್ಚಮಾಡಬೇಕು ?"

ಲೋಭಿಯಾದ ನವಕುಮಾರನಿಗೆ ಗೋಕುಲದಾಸನ ವಿಚಾರವು ಸರಿ ಯಾಗಿ ತೋರಿದ್ದರಿಂದ ಅವನು ಮುಗುಳುನಗೆ ನಕ್ಕು "ಗೋಕುಲದಾಸ, ನಿನ್ನ ಮನಸ್ಸಿಗೆ ಬಂದಂತೆ ಮಾಡು. ನಿನ್ನ ಕುಟಿಲವಾದ ಮಂತ್ರಾಲೋಚ ನದ ಪರೀಕ್ಷೆಯ ಕಾಲ ಬಂದಿದೆ. ಏನಾದರೂ ಮಾಡಿ ದೇವೀಪುರವು ನಮ್ಮ ಸ್ವಾಧೀನಕ್ಕೆ ಬಂದರೆ ಸಾಕಾಗಿದೆ."

ಜಂಬುಕನಂತಿರುವ ತನ್ನ ಸೀರುಮೋರೆಯಲ್ಲಿ ಕಪಟವ್ಯಂಜಕವಾದ ನಗೆದೋರಿ ಗೋಕುಲದಾಸನು ನುಡಿದನು : "ಯಜಮಾನರ ಸೇವೆಯನ್ನು ಈ ದಾಸನು ಇದು ವರೆಗೆ ಏಕನಿಷ್ಠೆಯಿಂದ ಮಾಡಿದ್ದು ಯಜಮಾನರು ಮನಗಂಡಿರುವರು. ನಾನು ನನ್ನ ಬಾಯಿಲೆ ಹೇಳಬೇಕಾಗಿಲ್ಲ. ನನಗೆ ತಾವು ಕುಟಿಲನೆಂದಿರಿ. ಕುಟಿಲನೂ, ಕಪಟಿಯೂ, ಧೂರ್ತನೂ, ಚತುರನೂ ಮುಂತಾದ ಶಬ್ದಗಳು ಒಂದೇ ಅರ್ಥವನ್ನು ಸೂಚಿಸುತ್ತವೆ. ಅದಕ್ಕಾಗಿ ನಾನು ಎಳ್ಳಷ್ಟಾದರೂ ವಿಷಾದಪಡುವದಿಲ್ಲ."

"ಕ್ಷಮಿಸು, ಗೋಕುಲದಾಸ. ನಾನು ನಿನ್ನನ್ನು ಹೀಯಾಳಿಸಬೇಕೆಂದು

ಹಾಗೆ ಮಾತಾಡಲಿಲ್ಲ. ಈ ಜಗತ್ತಿನಲ್ಲಿ ಕುಟಿಲಮಂತ್ರಗಳೇ ನಡೆಯುತ್ತವಲ್ಲದೆ ಇನ್ನುಳಿದ ಮಂತ್ರಗಳಿಗೆ ಯಾರೂ ಉಪ್ಪುಹಾಕುವದಿಲ್ಲ. ಈ ಮಾತು ಹಾಗಿರಲಿ, ಮಾನಸಿಂಹರಾಜರ ಮುಂದೆ ನಾನು ಏನೇನು ಹೇಳತಕ್ಕದ್ದು ?"

"ರಾಜರು ಬಂದಾಗ ನೀವು ದೇವರು ಕುಳಿತ ಹಾಗೆ ಸುಮ್ಮನೆ ಕುಳಿತು ಕೊಳ್ಳಿರಿ. ಉಳಿದದ್ದೆಲ್ಲ ನಾನು ನೋಡಿಕೊಳ್ಳುತ್ತೇನೆ. ಮಾನಸಿಂಹರ ಮುಂದೆ ನಾನು ಸಾವಿರಾರು ಸುಳ್ಳು ಹೇಳಿದರೂ ಮಧ್ಯದಲ್ಲಿ ನೀವು ಅಡ್ಡ ಬಾಯಿ ಹಾಕಬೇಡಿರಿ. ಇಷ್ಟುಮಾತ್ರ ದಯಮಾಡಿ ಮಾಡಿರಿ."

"ಮಣ್ಣು ಹೊಯ್ದುಕೋ ! ನಮ್ಮ ಕೆಲಸವಾದರಾಯಿತು."

ಮಾನರಸಿಂಹರಾಜನ ಸ್ವಾಗತಕ್ಕಾಗಿ ಬೀರನಗರವು ಪರಿಪರಿಯಾಗಿ ಶೃಂಗರಿಸಲ್ಪಟ್ಟಿತು. ಮನೆಗಳೆಲ್ಲ ಹೊಸದಾಗಿ ಹಚ್ಚಿದ ಸುಣ್ಣ ಕೆಮ್ಮಣ್ಣು ಗಳಿಂದ ಬಹು ಸೊಗಸಾಗಿ ಕಂಡವು. ನೆಲಗಟ್ಟಿನಂತೆ ನುಣುಪಾಗಿ ಮಾಡಿದ ಬೀದಿಗಳೆಲ್ಲ ರಂಗವಲ್ಲಿಗಳಿಂದ ಸುಶೋಭಿತವಾಗಿ ತೋರಿದವು. ಅಲ್ಲಲ್ಲಿ ತೋರಣಗಳನ್ನು ಕಟ್ಟಿ ಹಂದರಗಳನ್ನು ನಿಂದಿರಿಸಿದ್ದರು. ಅರಮನೆಯ ಉನ್ನತವಾದ ಸ್ಥಳದಲ್ಲಿ ಕಟ್ಟಿದ ಬಾದಶಹನ ಧ್ವಜವು "ನನ್ನನ್ನು ಆಶ್ರಯಿಸ ಬನ್ನಿರಿ. ನಾನು ನಿಮಗೆ ಅಖಂಡವಾದ ಸುಖಶಾಂತಿಗಳನ್ನು ಕೊಡುವೆನು" ಎಂದು ಹೇಳಿ ಕೈಬೀಸಿ ಎಲ್ಲರನ್ನು ಕರೆಯುತ್ತಲಿರುವದೋ ಎಂಬಂತೆ ಗಾಳಿಗೆ ಅಲ್ಲಾಡಿ ಕಂಗೊಳಿಸುತ್ತಿತ್ತು.

ಮಾತಂಗ ತುರಂಗಗಳೂ, ರಥಿಕರು ಪಥಿಕರೂ, ಕಾಲುಮಾರ್ಗದಿಂದ ಸಾಲುಸಾಲಾಗಿ ಬೀರನಗರದ ದಾರಿ ಹಿಡಿದು ಬರಲಾರಂಭಿಸಿದರು. ಸ್ವತಃ ಮ್ಹಾನಸಿಂಹರಾಜನು ನಿಯಮಿತವಾದ ಪರಿವಾರದೊಂದಿಗೆ ನಾವೆಗಳಲ್ಲಿ ಕುಳಿತುಕೊಂಡು ಗಂಗಾನದಿಯ ಪ್ರವಾಹದ ಗುಂಟ ಬರುವವನಾದನು. ಮಾನಸಿಂಹನ ನೌಕಾಪುಂಜದ ಶೋಭೆಯು ಅವರ್ಣನೀಯವಾಗಿತ್ತು. ಕೆಲವು ನಾವೆಗಳು ರಾಜಹಂಸದ ಮಾಟದವು; ಕೆಲವು ಬಾತುಕೋಳಿಯ ಆಕಾರ ದವು; ಇನ್ನುಳಿದವು ಬಕರಾಜನ ಸ್ವರೂಪದವು. ಚಿತ್ರಮಯವಾಗಿ ರಂಜಿತ ವಾದ ನಾವೆಗಳಿಗೆ ಅನೇಕ ತರದ ಬೆಳ್ಳಿ ಬಂಗಾರದ ಹೂಗಳನ್ನು ಬಡಿದದ್ದ ರಿಂದ ಇಳಿಬಿಸಲಿಗೆ ತಳತಳಿಸುವ ಆ ನೌಕಾಪುಂಜವು ತೇಲಿಬರುವ ಹೇಮ ಕೂಟ ಪರ್ವತದಂತೆ ಬಹು ಪ್ರೇಕ್ಷಣೀಯವಾಗಿ ಕಂಡಿತು.

ಕತ್ತಲಾಗುತ್ತ ಬರಲು ನದಿಯ ದಂಡೆಯಗುಂಟ ಸಾಲುಸಾಲಾಗಿ ನಿಂತ ನೂರಾರು ಜನ ದೀವಟಿಗೆಯವರು ಸುಭೇದಾರರ ನಾವೆಗಳಿಗೆ ಬೆಳಕು ತೋರಿದರು. ನಾವೆಗಳ ಸುತ್ತಲೂ ನೀರಲ್ಲಿ ಬಿಟ್ಟ ಲಕ್ಷಾವಧಿ ತೆಪ್ಪದ ದೀಪಗಳ ಝಗಝಗಿಸುವ ಪ್ರಕಾಶವು ನೀರಲ್ಲಿ ಪ್ರತಿಬಿಂಬಿಸುತ್ತಿರುವ ಆ ಶೋಭೆಯನ್ನು ನೋಡಿ ಎಲ್ಲರಿಗೂ ಸೋಜಿಗವಾಯಿತು. ವೀರಾಗ್ರೇಸರನಾದ ಅಂಬರದ ರಾಜನಿಗೆ ಘರ್ಮಕ್ಲೇಶವಾಗಕೂಡದೆಂದು ನೆನಿಸಿ – ಸುರನದಿಯ ತೆರೆತೆರೆಯ ನಡುನಡುವೆ ಬಿದ್ದೆದ್ದು ಬರಲಾರದಿದೊರ್ಡಂ.... ಮಂದಮಾರುತನು ಶ್ರಮವನ್ನು ಲೆಕ್ಕಿಸದೆ ಚಂಪಕ, ಬಕುಲ, ಮದನಮಂಜರೀ ಮುಂತಾದ ಪುಷ್ಪಗಳ ಸುಗಂಧವನ್ನು ತಳೆದು ಬಂದು ಆ ರಾಜನ ಖೇದಗಳನ್ನೆಲ್ಲ ಪರಿಹಾರಮಾಡಿದನು. ರಾಜನ ನಾವೆಗೆ ಸಮೀಪದಲ್ಲಿದ್ದ ನಾವೆಯಲ್ಲಿ ಅಪ್ಸರೆಯರಿಗೆ ಸಮಾನರಾದ ವಾರಯುವತಿಯರು ಬಹು ಮಂಜುಲವಾಗಿ ಹಾಡುತ್ತಿದ್ದರು. ಹೀಗೆ ಸಕಲೇಂದ್ರಿಯಗಳಿಗೂ ಸುಖವಾಗುತ್ತಿರುವ ಸಮಯದಲ್ಲಿ ಮಾನಸಿಂಹನ ಗಂಭೀರವಾದ ಮುಖಮುದ್ರೆಯಲ್ಲಿ ಕೂಡಾ ಕಿಂಚಿತ್ ಮಂದಹಾಸವು ತೋರಿದ್ದು ಕಂಡು ಆ ಯಮಸ್ವರೂಪಿಯಾದ ರಣಧೀರನ ಪರಿವಾರದವರೆಲ್ಲರೂ ಯಥೇಷ್ಟವಾಗಿ ಗಹಗಹಿಸಿ ನಗುತ್ತಿದ್ದರು.

ಆ ವೈಭವದ ನೌಕಾಸಮುದಾಯವು ವಿಲಾಸದಿಂದ ಮೆರೆಯುತ್ತ ಬೀರನಗರದ ಘಾಟಿಗೆ ಬಂದು ತಗಲಿದ ಕೂಡಲೆ, ಸ್ವಾಗತಕ್ಕಾಗಿ ಘಾಟಿನಲ್ಲಿ ನೆರೆದಿದ್ದ ಪ್ರಮುಖರೆಲ್ಲರೂ ಎದ್ದುನಿಂತು ಮಾನಸಿಂಹಪ್ರಭುವಿಗೆ ನಮಸ್ಕಾರ ಮಾಡಿದರು. ನವಕುಮಾರನು ರಾಜನ ನಾವೆಯ ಸಮೀಪಕ್ಕೆ ಬಂದು ಮಹಾರಾಜರು ಬಿಜಯಮಾಡಬೇಕೆಂದು ಬೇಡಿಕೊಂಡನು. ನರೇಂದ್ರನಾಥನೂ, ಶ್ರೀಶಚಂದ್ರನೂ ರಾಜನ ಎಡಬಲಕ್ಕೆ ನಿಂತು ಅವನಿಗೆ ಹಸ್ತಾವಲಂಬನವನ್ನಿತ್ತು ಕೆಳಗೆ ಇಳಿಸಿಕೊಂಡರು.

ಘಾಟಿನ ಮೇಲೆ ಬಹು ಪರಿಷ್ಕಾರವಾಗಿ ರಚಿಸಿ ಇಟ್ಟ ಆಸನದ ಮೇಲೆ ಅಂಬರಾಧೀಶ್ವರನು ವಿರಾಜಮಾನನಾದ ಬಳಿಕ ಗಂಧ ತಾಂಬೂಲಗಳ ಶಿಷ್ಟಾಚಾರವಾಯಿತು. ಕೂಡಲೆ ತೆಪ್ಪಗಳ ಮೇಲಿಟ್ಟ ಸಾವಿರಾರು ಬಿರುಸಿನ ಕುಳ್ಳಿಗಳು ಹಾರಿ ನದಿಯೊಳಗಿಂದೆದ್ದ ಬಂಗಾರದ ಸುರವರ ವೃಕ್ಷಗಳಂತೆ

ಬಹು ಚಮತ್ಕಾರವಾಗಿ ಕಂಡವು. ಅನೇಕ ವರ್ಣದ ಹಗಲುಪಂಜುಗಳ ಘನವಾದ ಪ್ರಕಾಶಕ್ಕೆ ರಜನಿಯು ರಂಜನಿಯಾದಳು. ನಾವೆಗಳಲ್ಲಿ ಕುಳಿತ ಮದ್ದಿನವರು ನೀರ ಮೇಲೆ ಬಿಟ್ಟ ಚಕ್ರಬಾಣಗಳು ಫೂತ್ಕರಿಸುತ್ತಿರುವ ಮಣಿ ಮಯವಾದ ಪನ್ನಗಗಳಂತೆ ಕಂಡವು. ಸರರರರ ಎಂದು ರಭಸದಿಂದ ಹೊರಟ ಆಕಾಶಬಾಣಗಳು ಗಗನಮಂಡಲವನ್ನು ಹೊಕ್ಕು ಧಡಲ್ಲೆಂದು ಹಾರಲು ಅವುಗಳೊಳಗಿಂದ ಉದುರುತ್ತಿರುವ ತಾರಾಮಂಡಲವು, ಬಾಣಗಳ ಹೊಡತಕ್ಕೆ ನಿಜವಾದ ತಾರಾಮಂಡಲವೇ ಉದುರುತ್ತಿರುವದೋ ಎಂಬಂತೆ ಭಾಸವಾಯಿತು.

ಇಷ್ಟೆಲ್ಲ ಉತ್ಸವವನ್ನು ನೋಡಿ ಸಂತುಷ್ಟನಾಗಿ ಮಾನಸಿಂಹರಾಜನು ನವಕುಮಾರನ ಕೈಹಿಡಿದುಕೊಂಡು ತನಗೋಸ್ಕರವಾಗಿ ಸಿದ್ಧವಾಗಿರುವ ರಥದ ಕಡೆಗೆ ನಡೆದನು. ಯಾವ ಮಾನಸಿಂಹನ ಹಸ್ತವನ್ನು ಪ್ರತ್ಯಕ್ಷ ಬಾದಶಹನೇ ಅಭಿಮಾನದಿಂದ ಹಿಡಿಯುವನೋ ಅದೇ ಹಸ್ತದಿಂದ ತನ್ನ ಕರವು ಪುನೀತವಾದದ್ದು ಕಂಡು ನವಕುಮಾರನಿಗೆ ಐಹಿಕವಾದ ಸಕಲ ಸೌಖ್ಯಗಳ ಸಾರವು ಪ್ರಾಪ್ತವಾದಷ್ಟು ಆನಂದವಾಯಿತು.

ಸಾಯಂಕಾಲದ ಭೋಜನಸಮಾರಂಭವಾದ ಬಳಿಕ ಮಾನಸಿಂಹ ರಾಜನು ನವಕುಮಾರ ಗೋಕುಲದಾಸರನ್ನು ಕುಳ್ಳಿರಿಸಿಕೊಂಡು ಬೀರನಗರದ ವ್ಯವಸ್ಥೆಯು ಹೇಗಿರುವದೆಂಬದನ್ನೂ, ನರೇಂದ್ರನಾಥನು ಹೇಗಿರುವನೆಂಬ ದನ್ನೂ ಕೇಳಿಕೊಂಡನು. ಅವರ ಸಂವಾದದಲ್ಲಿ ಯಾವ ಯಾವ ಮಾತುಗಳ ಚರ್ಚೆಯಾಯಿತೋ ನಮಗೆ ತಿಳಿಯಲಿಲ್ಲ. ಮುಂದೆ ಸಂಭವಿಸಿದ ಸಂಗತಿಗಳ ಮೇಲಿಂದ ಅಲ್ಲಿ ಏನೇನು ನಡೆಯಿತೆಂಬದನ್ನು ವಾಚಕರು ಕೂಡ ಊಹಿಸ್ಯ ವಂತೆ ಇದೆ.

## ಎಂಟನೆಯ ಅಧ್ಯಾಯ

### ವಸಂತೋತ್ಸವ

सर्वं प्रिये चारुतरं वसंते

—ಋತುಸಂಹಾರ.

ಮರುದಿವಸ ರಂಗಪಂಚಮಿಯಾದ್ದರಿಂದ ಊರಲ್ಲೆಲ್ಲ ಬಹು ಉತ್ಸಾಹದ ಉತ್ಸವಗಳು ನಡೆದಿದ್ದುವು. ನಾಲ್ಕೂ ಕಡೆಯಲ್ಲಿ ನಗಾರಿ ನೌಬತ್ತು, ತುತೂರಿ, ಕಹಳೆ, ಕೊಳಲು ಮೊದಲಾದ ವಾದ್ಯಗಳ ಘನವಾದ ನಿನಾದವೆಸಗಿತ್ತು. ಕಟ್ಟೆಕಟ್ಟೆಗಳ ಮೇಲೆ ಓಕಳಿಯಿಂದ ತುಂಬಿದ ದೊಡ್ಡ ದೊಡ್ಡ ಪಾತ್ರೆಗಳನ್ನು ಇಟ್ಟಿದ್ದರು. ವೃದ್ಧರೂ, ತರುಣರೂ, ಬಾಲಕರೂ ಗಂಜಿಯ ಬಟ್ಟೆಗಳನ್ನು ಧರಿಸಿಕೊಂಡು ಮೇಳಿಮೇಳಿಯಾಗಿ ಕೋಲಾಡುತ್ತ ಶ್ರೀಕೃಷ್ಣನ ಲೀಲಾವಿಲಾಸಗಳನ್ನು ಕೊಂಡಾಡಿ ಹಾಡುತ್ತ ಓಕಳಿಯ ಕಟ್ಟೆಗಳ ಕಡೆಗೆ ನಡೆದಿದ್ದರು. ಅಲ್ಲಲ್ಲಿ ವಾರಯುವತಿಯರು ರಾಧೆಯ ಮನೋನುರಾಗದ ವರ್ಣನಾಪರವಾದ ಹಾಡುಗಳನ್ನು ಹಾಡಿ ಒಳ್ಳೇ ಒನಪಿನಿಂದ ನೃತ್ಯಗೈಯುತ್ತಿದ್ದರು.

" ರಾಧಾ ಕಿಸನ್ ಕೀ ಜಯ್ " " ರಾಧಾ ಕಿಸನ್ ಕೀ ಜಯ್ " ಎಂಬ ಸೂಚನಾಪರವಾದ ಜಯಘೋಷವಾದ ಕೂಡಲೆ ಊರಲ್ಲೆಲ್ಲ ಓಕಳಿಯ ಪ್ರಳಯವಾದಂತಾಯಿತು. ಕೆಲವರು ಜೀಕಳಿಗಳಲ್ಲಿಯೂ, ಕೆಲವರು ತಂಬಿಗೆಗಳಲ್ಲಿಯೂ, ಅನೇಕ ವರ್ಣದ ಓಕಳಿಯನ್ನು ತುಂಬಿಕೊಂಡು ಹೋಗಿ, ಇವರು ಉಚ್ಚರು ಇವರು ನೀಚರೆಂಬ ಭೇದವನ್ನು ಲೆಕ್ಕಿಸದೆ ಒಬ್ಬರ ಮೇಲೊಬ್ಬರು ಭರದಿಂದ ಬಣ್ಣಗಳನ್ನು ಉಗ್ಗಿದರು.

ಮನೆಗಳ ಗೋಡೆಗಳೆಲ್ಲ ಬಣ್ಣಗಳಿಂದ ತೊಳೆಯಲ್ಪಟ್ಟವು. ಬೀದಿಗಳಲ್ಲೆಲ್ಲ ಗುಲಾಲು ಓಕಳಿಯ ಕೆಸರಾಯಿತು. ವೃದ್ಧರ ಗಡ್ಡಮೀಸೆಗಳೆಲ್ಲ ಬಣ್ಣ ಮುಳುಗಿ ವಿಲಕ್ಷಣವಾಗಿ ಕಂಡವು. ವಾರನಾರಿಯರು ವಿಲಾಸದಿಂದ ನಗುತ್ತ ತಮ್ಮ ವಿಟರ ಮೇಲೆ ಓಕಳಿಯ ಜೀಕಳಿಗಳನ್ನು ಬಿಡುತ್ತಿದ್ದರು. 'मत मारो पिचकारी' ಎಂದು ಹಾಡಿ ನರ್ತಿಸುತ್ತಿರುವ ವಾರಾಂಗನೆಯರನ್ನು

ಉದ್ರಿಕ್ತರಾದ ತರುಣರು ಪ್ರೇಮಾನುರಾಗದಿಂದಲೋ ಎಂಬಂತೆ ರಾಗ ರಂಜಿತವಾದ ರಸದಿಂದೆ ತೊಯಿಸಿಬಿಟ್ಟರು.

ಇದೆಲ್ಲ ಹುಚ್ಚುತನವೆಂದು ನೋಡಿ ವೈರಾಗ್ಯಯುತರಾದ ತತ್ವಜ್ಞಾನಿಗಳು ನಗಲೊಲ್ಲರೇಕೆ! ಆದರೆ ಇಂಥ ಉತ್ಸವಗಳಿಂದೆ ಸಮಾಜದ ಹಿತವು ಎಷ್ಟುಮಾತ್ರವು ಇಲ್ಲೆಂದು ಹೇಳಲಾಗದು. ನಾಗರಿಕರು ರಂಗಪಂಚಮಿಯ ಉತ್ಸವದ ಕಾಲಕ್ಕೆ ನಾನು ಇಂಥವನು, ನಾನು ಅಂಥವನೆಂಬ ಭೇದವನ್ನು ಇಟ್ಟುಕೊಳ್ಳುವದಿಲ್ಲ. ಶ್ರೀಮಂತರು, ಬಡವರು, ಬ್ರಾಹ್ಮಣರು, ಶೂದ್ರರು, ವೃದ್ಧರು, ತರುಣರು ಎಲ್ಲರೂ ತಮ್ಮ ತಮ್ಮ ಭೇದಗಳನ್ನು ಮರೆತು ಎಗ್ಗಿಲ್ಲದೆ ಒಬ್ಬರ ಮೇಲೊಬ್ಬರು ಓಕಳಿ ಹಾಕುತ್ತಾರೆ. ಪ್ರತ್ಯಕ್ಷ ರಾಜಾ ಮಾನಸಿಂಹನು ಈ ಉತ್ಸವವನ್ನು ನೋಡಬೇಕೆಂದು ಪೇಟೆಯ ಮಧ್ಯದಲ್ಲಿ ಬಂದ ಕೂಡಲೆ ಗೋಪಾಲರ ಪೋರರು ಅವನ ಸುತ್ತಲೂ ಮುಗಿಬಿದ್ದು ಓಕಳಿಯಿಂದ ಅವನಿಗೆ ಸಚ್ಚೈಲ ಸ್ನಾನಮಾಡಿಸಿದರು. ಮೃಗರಾಜನಂಥ ದರ್ಪಶಾಲಿಯಾದ ಆ ವೃದ್ಧ ರಜಪೂತ ರಾಜನು ಎಳ್ಳಷ್ಟಾದರೂ ಕೋಪಿಸಿಕೊಳ್ಳದೆ ಪೋರರ ದಿಟ್ಟತನಕ್ಕೆ ಮೆಚ್ಚಿ "ಭಲೆ ಬಾಹದ್ದರ" ಎಂದು ಅವರನ್ನು ಕೊಂಡಾಡಿದನು. ಭಗವಧ್ಯಾನದಲ್ಲಿ ಒಂದು ಗಳಿಗೆಯನ್ನಾದರೂ ಕಳೆದರೆ ಸಾಕೆಂದು ಧರ್ಮಪರಾಯಣರು ಹೇಳುವದುಂಟು. ಹಾಗೆಯೇ ಎಲ್ಲ ಜನರು ತಮ್ಮ ಉಚ್ಚನೀಚವಾದ ಭಾವವನ್ನು ಮರೆತು ಒಂದು ದಿವಸವಾದರೂ ಏಕತ್ರರಾಗಿ ಕಲೆತರೆ ಎಷ್ಟೋ ಸಮಾಜದ ಹಿತವಾದೀತೆಂದು ಜನೈಕ್ಯವಾದಿಗಳು ಹೇಳುವದುಂಟು. ರಂಗಪಂಚಮಿಯಂಥ ಉತ್ಸವಗಳು ಭೇದಭಾವಗಳನ್ನು ಮುರಿದು ಹಾಕಲಿಕ್ಕೆ ಸಾಧನೀಭೂತವಾದವುಗಳೆಂದು ನಾವು ನಂಬುತ್ತೇವೆ.

ಉತ್ತರ ಹಿಂದುಸ್ಥಾನದಲ್ಲಿಯ ಕುಲಸ್ತ್ರೀಯರು ಕೂಡ ತಮ್ಮತಮ್ಮ ಮನೆಗಳಲ್ಲಿ ರಂಗಪಂಚಮಿಯ ದಿವಸ ಓಕಳಿ ಆಡುತ್ತಾರೆ. ಇಂಥ ವಿನೋದಕ್ಕೆ ಅಮರ್ಯಾದೆಯೆಂದು ಅಲ್ಲಿಯ ಜನರು ತಿಳಿದುಕೊಳ್ಳುವದಿಲ್ಲ. ನವವಧುಗಳು ಹಿರಿಯರು ಸಮಕ್ಷಮದಲ್ಲಿ ತಮ್ಮ ಪತಿಗಳ ಮೇಲೆ ಉಲ್ಲಾಸದಿಂದ ಓಕಳಿ ಹಾಕಿದರೆ ಅದು ವ್ಯತ್ಯಾಸವಲ್ಲ. ಪ್ರೌಢರಾದ ದಂಪತಿಗಳಂತೂ ಪ್ರೇಮೋದ್ರೇಕದಿಂದ ಪರಸ್ಪರರನ್ನು ಬಣ್ಣದಲ್ಲಿ ಮುಚ್ಚಿಹಾಕುತ್ತಾರೆ.

ಬೇರೆ ಸ್ತ್ರೀಪುರುಷರು ತಮ್ಮ ತಮ್ಮ ಆಪ್ತತ್ವದ ಮರ್ಯಾದೆಯ ಮೇರೆಗೆ ಓಕಳೀ ಆಡುವದುಂಟು.

ಶ್ರೀಶಚಂದ್ರನು ಮನೆಗೆ ಬಂದನೆಂದರೆ ಅವನ ಮೇಲೆ ಹೇರಳವಾಗಿ ಓಕಳೀಹಾಕುವೆನೆಂಬ ಉಬ್ಬಿನಿಂದ ಜಗತ್‌ಸುಂದರಿಯು ಘಮಘಮಿಸುವ ಕೇಶರದ ಓಕಳಿಯನ್ನು ಮಾಡಿ ಜೀಕಳಿಯಲ್ಲಿ ತುಂಬಿಟ್ಟುಕೊಂಡು ಸಿದ್ಧಳಾಗಿ ನಿಂತಿದ್ದಳು. ಹೇಮಲತೆಯಾದರೂ ತನ್ನ ವ್ಯವಸ್ಥೆಯನ್ನು ಮಾಡಿಟ್ಟು ಕೊಂಡು ನರೇಂದ್ರನ ಹಾದೀ ನೋಡುತ್ತಿದ್ದಳು. ಊರಲ್ಲಿ ಓಕಳಿಯಾಡಿ ಮಾನಸಿಂಹರಾಜನೂ, ನವಕುಮಾರನೂ, ಶ್ರೀಶನರೇಂದ್ರರೊಡನೆ ಊದಿ ಸುತ್ತ ಬಾರಿಸುತ್ತ ಮಧ್ಯಾಹ್ನದ ಸಮಯಕ್ಕೆ ಮನೆಗೆ ಬಂದರು.

ಶ್ರೀಶನು ಉಲ್ಹಾಸದಿಂದ ತನ್ನ ಕೋಣೆಗೆ ನಡೆದಿರುವಾಗ ಜಗತ್ಸುಂದರಿಯು ಮಂದಹಾಸಗೈಯುತ್ತ ಅವನೆದುರಿನಲ್ಲಿ ನಿಂತು ಗುರಿಯಿಟ್ಟು ಅವನ ಮೇಲೆ ಜೀಕಳೀ ಹೊಡೆದಳು. ಈ ವಿನೋದಮಯವಾದ ಪ್ರಯೋಗವನ್ನು ಅನುಭವಿಸಿ ಶ್ರೀಶನು ತನ್ನ ಮೇಲೆ ಪ್ರೇಮರಸದ ಮಳೆಯೇ ಆಯಿತೆಂದು ತಿಳುಕೊಂಡನು. ಉದ್ರೇಕದಿಂದ ಅವನು ಜಗತ್ಸುಂದರಿಯ ಕೈಯಲ್ಲಿದ್ದ ಜಲಯಂತ್ರವನ್ನು ಸೆಳಕೊಂಡು ಅದರಲ್ಲಿ ಉಳಿದಿರುವಷ್ಟು ಬಣ್ಣದಿಂದ ಆ ಸ್ವರ್ಣಗೌರಿಯ ಪೂರ್ಣೇಂದುಮುಖವನ್ನು ವರ್ಣಿಸಿ ಓಡಿ ಹೋದನು.

ಹೇಮಲತೆಯು ನರೇಂದ್ರನನ್ನು ಹುಡುಕುತ್ತ ಅವನನ್ನು ಹೊರಗೆ ಎಲ್ಲಿಯೂ ಕಾಣದೆ ನೆಟ್ಟಗೆ ಅವನ ಕೋಣೆಯ ಬಾಗಿಲಕ್ಕೆ ಬಂದಳು. ಒಳಗೆ ನರೇಂದ್ರನು ಬೆನ್ನುತಿರುವಿಕೊಂಡು ನಿಂತು ತನ್ನ ಓಕಳಿಯ ಬಟ್ಟೆಗಳನ್ನು ಕಳೆಯುತ್ತಿದ್ದನು. ಹೇಮಲತೆಯು ಮೆಲ್ಲಗೆ ಕೋಣೆಯಲ್ಲಿ ಕಾಲಿಟ್ಟು ಬೆಳ್ಳಿಯ ಚಾಂಬಿನಲ್ಲಿ ತಂದಿದ್ದ ಓಕಳಿಯನ್ನು ಮೆಲ್ಲಗೆ ಅವನ ಬೆನ್ನಿಗೆ ಉಗ್ಗಿದಳು. ಇವನ್ನು ಅರಿತು ಆ ಅಸಮೀಕ್ಷ್ಯಕಾರಿಯಾದ ತರುಣನು ಟಣ್ಣನೆ ಹಾರಿ ಆ ಒಯ್ಯಾರೆಯ ಮುಖಕಮಲವನ್ನು ರಭಸದಿಂದ ಚುಂಬಿಸಿದನು.

- ಅನನುಭೂತವಾದ ಆ ಚಮತ್ಕಾರವಾದ ಪ್ರಯೋಗವನ್ನು ಹೀಗೆ ಅಕಸ್ಮಾತ್ತಾಗಿ ಅನುಭವಿಸಿದವಳಾಗಿ ಹೇಮಲತೆಯು ವಿಭ್ರಮಗೊಂಡಳು. ಒಂದು ಪ್ರಕಾರದ ಉದ್ವೇಗದಿಂದ ರುಧಿರಾಭಿಸರಣವು ತೀವ್ರವಾಗಿ ಅವಳ

ಮೈ ಕಾಯ್ದು ಕೆಂಡದಂತಾಯಿತು. ಲಜ್ಜೆಯ ಭರಕ್ಕೆ ಅವಳ ಗೌರವರ್ಣದ ಮುಖವು ಕೆನ್ನೈದಿಲೆಯಂತೆ ಕೆಂಪಾಯಿತು. ಬೆದರಿದೆರಳೆಯಂತೆ ಅವಳು ನರೇಂದ್ರನ ಮುಖವನ್ನು ನೋಡಿದವಳೇ ಓಡುತ್ತೋಡುತ್ತ ಹೋಗಿ ತನ್ನ ಕೋಣೆಯಲ್ಲಿ ಸೇರಿಕೊಂಡಳು.

ಪರಾಕ್ರಮಿಯೂ, ಉದಾರನೂ, ಸುಂದರನೂ ಆದ ನರೇಂದ್ರನನ್ನು ಕಂಡು ಹೇಮಲತೆಯು ಆಗಾಗ್ಗೆ ಕೌತುಕಪಡುತ್ತಿದ್ದಳು. ಅವಳ ತಾಯಿಯು ಅವಳನ್ನು ನರೇಂದ್ರನಿಗೇ ಕೊಡುವ ವಿಚಾರದಲ್ಲಿರುವದನ್ನು ಅರಿತಂದಿನಿಂದ ಅವಳು ಅವನನ್ನು ಕಂಡು ನಾಚುವಳು. ಆದರೆ ಇದಕ್ಕೆಲ್ಲ ಮದನನೇ ಕಾರಣನೆಂದು ಹೇಳಲಾಗದು.

ಆ ಚಮತ್ಕಾರವಾದ ಭಾವನೆಯನ್ನು ತಳೆದು ಹೇಮಲತೆಯು ತನ್ನ ಮಂಚದಲ್ಲಿ ಕುಳಿತು "ನಾನೇನು ಮಾಡಲಿಕ್ಕೆ ಹೋದೆನು! ಅದಾಯಿತೇನು! ನರೇಂದ್ರನು ಮಾಡಿದ ಉದ್ದಾಮತನದ ಕೃತಿಗೆ ನನ್ನಲ್ಲಿ ಕೋಪವು ತುಂಬಿಕೊಳ್ಳಬೇಕಾಗಿತ್ತು, ನಾನೆಷ್ಟು ಹಾದೀ ನೋಡಿದರೂ ಆ ಕೋಪವು ಬರಲೇ ಒಲ್ಲದು. ಅವನ ಕೃತಿಯು ನನಗೆ ರುಚಿಸಿತೇ? ಅದನ್ನೂ ನಾನು ಹೇಳಲಾರೆನು. ಆ ಸಮಯದಲ್ಲಿ ನಮ್ಮನ್ನು ಯಾರಾದರೂ ನೋಡಿದರೇನು ಮತ್ತೆ! ನೋಡಿರಲಿಕ್ಕಿಲ್ಲ. ಆದದ್ದು ಆಗಿ ಹೋಯಿತು; ಇನ್ನು ಮೇಲೆ ನಾನು ಆ ನರೇಂದ್ರನ ಕಣ್ಣಿಗಾದರೂ ಹೇಗೆ ಬೀಳಲಿ? ಅಡಗಿಕೊಂಡಾದರೂ ನಾನೆಷ್ಟೆಂದು ಕುಳ್ಳಿರಲಿ? ಹೊರಗೆ ಜನರು ನನ್ನ ವಿಷಯವಾಗಿ ಗುಜುಗುಜು ಮಾತಾಡುತ್ತಿರುವರಾದೀತೇನು? ನಾನು ಹೊರಬಿದ್ದ ಕೂಡಲೆ ಅವರು ನನ್ನನ್ನು ಕಂಡು ಅಪಹಾಸ ಮಾಡುವರೇನು ಮತ್ತೆ?" ಎಂದು ಆಲೋಚಿಸುತ್ತ ಅವಳು ಕಳ್ಳೆಯಂತೆ ಅಂಜಿ ಹೊರಗೆ ಬರಲಾರದಾದಳು.

ಹೇಮಲತೆಯ ಸುಕುಮಾರವಾದ ತನುವಿನ ಚಮತ್ಕಾರವಾದ ಸ್ಪರ್ಶವನ್ನು ಅನುಭವಿಸಿದ್ದರಿಂದ ನರೇಂದ್ರನ ಮೈಯಲ್ಲಿ ವಿದ್ಯುತ್ಸಂಚಾರವಾದಂತಾಗಿ ಅವನ ಹೃದಯವು ತಲ್ಲಣಗೊಂಡಿತು. ಅವನು ವಿಕಾರವಶನಾಗಿ ಆ ಪ್ರೇಮಲತೆಯನ್ನು ಚುಂಬಿಸಿದನಷ್ಟೇ ಸರಿ, ಸಂಗಡಲೇ ಅವನು ವಿಷಾದಕ್ಕೆ ಈಡಾದನು. "ನಾನೆಂಥ ಅನುಚಿತವಾದ ಕೆಲಸ ಮಾಡಿದೆನು! ಹೇಮಲತೆಯು ಕೋಪಿಸಿಕೊಂಡಳೇನು ಮತ್ತೆ? ಕೋಪಿಸಿಕೊಳ್ಳದೇನು!

ಆವಳು ಹೋಗಿ ಸುಶೀಲಾದೇವಿಯ ಮುಂದೆ ಏನಾದರೂ ಹೇಳಿದರೆ ನನ್ನ ಗತಿ ಏನು ? ಹೇಮಲತೆ, ನೀನಿಷ್ಟು ರೂಪಸಂಪನ್ನೆಯೂ, ಗುಣವತಿಯೂ ಯಾಕೆ ಆದಿ ? ಈ ದಿವಸ ಅಷ್ಟು ಒಯ್ಯಾರದಿಂದ ನನ್ನ ಮೇಲೆ ಓಕಳಿಯನ್ನು ಹಾಕಲಿಕ್ಕಾದರೂ ಯಾಕೆ ಬಂದಿ ?

"ಏನಿಲ್ಲದೆ ನವಕುಮಾರನು ನನ್ನ ಮೇಲಿಷ್ಟು ಬೆಂಕೀ ಕಾರುತ್ತಾನೆ. ಈ ಸಂಗತಿಯು ಅವನಿಗೆ ತಿಳಿದರಂತೂ ಏನನರ್ಥವಾಗುವದೋ ತಿಳಿಯದು. ಕುಡುಗೋಲು ನುಂಗಿದ ಮೇಲೆ ಹೊಟ್ಟೆ ಹರಿಯುವ ಚಿಂತೆ ಮಾಡಿ ಫಲ ವೇನು ? ಬಂದದ್ದು ಬರಲಿ."

ಹೀಗೆ ನರೇಂದ್ರನು ಚಿಂತೆಗೀಡಾಗಿ ತನ್ನ ಹಾಸಿಗೆಯ ಮೇಲೆ ತುಸು ಹೊತ್ತು ಬಿದ್ದುಕೊಂಡ ಬಳಿಕ ಅವನ ವಿಚಾರಗಳು ಮತ್ತೊಂದು ಹಾದೀ ಹಿಡಿದು ನಡೆದವು.

"ಈ ಸುಂದರಿಯನ್ನು ಕಂಡು ನನ್ನ ಮನಸ್ಸಿನಲ್ಲಿ ಮೋಹ ಉಂಟಾಗ ಲಿಕ್ಕೆ ಹತ್ತಿ ಏಳೆಂಟು ತಿಂಗಳಾಗುತ್ತ ಬಂದಿತು. ಸುಶೀಲಾದೇವಿಯವರು ಅವಳನ್ನು ನನಗೆ ಕೊಡುವ ವಿಚಾರವನ್ನು ಮಾಡಿದ ವರ್ತಮಾನವನ್ನು ಶ್ರೀಶನು ನನಗೆ ಹೇಳಿದ್ದರಿಂದ ನನ್ನ ಮನಸ್ಸಿನ ಸ್ಥಿತಿಯು ಹೀಗಾಗಿರುವ ದೇನು ? ನವಕುಮಾರನ ಮನಸ್ಸಿನಲ್ಲಿ ಅವಳನ್ನು ನನಗೆ ಕೊಡುವದು ಇಲ್ಲ. ಹೀಗಿದ್ದರೂ ನನ್ನಲ್ಲಿ ಅಭಿಲಾಷೆ ಹೇಗೆ ಹುಟ್ಟಿತು ? ನಿಜವಾದ ಪ್ರೇಮದ ಅಂಕುರವೇ ಬೇರುಬಿಟ್ಟು ನನ್ನ ಎದೆಯನ್ನು ಭೇದಿಸಿತೇನು ? ಮರಗಳು ಬೇರುಬಿಟ್ಟು ಭದ್ರವಾದ ಕೋಟೆಯ ಗೋಡೆಯನ್ನು ಬಿರಿದು ಹಾಕಿದ್ದು ನಾನು ನೋಡಿದ್ದೇನೆ. ಅದಿರಲಿ, ಉದ್ದಾಮವಾದ ಹೊಸ ಕುದುರೆಯು ಬೆದರಿ ಅರಿಯದವನಾದ ರಾವುತನನ್ನು ಕೆಡವಿ ಎದಿರಿಗೆ ಬಂದವರನ್ನು ಘಾತಿಸುವಂತೆ, ಪ್ರೇಮವು ಈ ದಿವಸ ನನ್ನ ಸ್ವಾಧೀನವನ್ನು ಮೀರಿ, ಪಾಪ, ವಿನೀತೆಯಾದ ಹೇಮಲತೆಯ ಮನಸ್ಸನ್ನು ನೋಯಿಸಿತು! ಒಳ್ಳೇದು, ಹೇಮಲತೆಯು ಈ ಪ್ರಸಂಗದಲ್ಲಿ ನನ್ನನ್ನು ಕ್ಷಮಿಸಿದ್ದಾದರೆ ? ಕೇಳುತ್ತೀ ರೇನು ! ಹೇಮಲತೆಯ ಪತಿಯಾಗಬೇಕೆಂಬ ನನ್ನ ಮನೋರಥಕ್ಕೆ ಇದೊಂದು ಸುಲಭವಾದ ಸೋಪಾನವೇ ಅಲ್ಲವೇ ?"

ಹೀಗೆ ನರೇಂದ್ರನು ವಿಚಾರದಲ್ಲಿ ಮುಳುಗಿರುವಾಗ "ನರೇಂದ್ರನಾಥ,

ಸ್ನಾನಕ್ಕೆ ಏಳುವದಿಲ್ಲೇನು ಅಣ್ಣಯ್ಯಾ ? '' ಎಂದು ಸುಶೀಲಾದೇವಿಯು ಅವನನ್ನು ಮಮತೆಯಿಂದ ಎಬ್ಬಿಸಿದಳು.

ಇದುವರೆಗಂತೂ ಸುದ್ದಿಯಾಗಿಲ್ಲವೆಂದು ನೆನಿಸಿ ಧೈರ್ಯ ತಾಳಿ ನರೇಂದ್ರನು ಎದ್ದು ನಡುಮನೆಗೆ ಬಂದನು. ಸುಶೀಲಾದೇವಿಯು ಬಂಗಾರದ ಬಟ್ಟಲದಲ್ಲಿ ಸಂಪಿಗೆಯ ಎಣ್ಣೆಯನ್ನು ಹಾಕಿ ಅದನ್ನು ಹೇಮಲತೆಯ ಕೈಯಲ್ಲಿ ಕೊಟ್ಟು ನರೇಂದ್ರನಿಗೆ ಎಣ್ಣೀ ಹಚ್ಚೆಂದು ಹೇಳಿದಳು. ಹೇಮಲತೆಯು ಸುಶೀಲಾದೇವಿಯ ಬಳಿಗೆ ಬಂದ ಮೇಲೆಯೂ ಆ ಮಾತು ಒಡೆದಿಲ್ಲವೆಂಬದನ್ನು ಅರಿತು ನರೇಂದ್ರನ ಮನಸ್ಸಿನಲ್ಲಿಯ ಭೀತಿಯೆಲ್ಲ ಹೊರಟು ಹೋಗಿತ್ತು.

ನರೇಂದ್ರನಿಗೆ ಎಣ್ಣೆ ಹಚ್ಚೆಂದು ಸುಶೀಲಾದೇವಿಯು ಹೇಮಲತೆಗೆ ಹೇಳಿದ ಕೂಡಲೆ, ವ್ರೀಡಾನತಮುಖಿಯ ಎದೆ ಝಲ್ಲೆಂದು ನೀರಾಯಿತು. ಅವಳ ಕೈಬೆರಳುಗಳು ನಡುಗಲಾರಂಭಿಸಿದ್ದರಿಂದ ಹೇಮಲತೆಯು ಬಟ್ಟಲವನ್ನು ಅಂಗ್ಸಿಯಲ್ಲಿ ತೆಗೆದುಕೊಂಡು ಹೋಗಿ ಮೆಲ್ಲನೆ ಜಗತ್ಸುಂದರಿಯ ಮುಂದಿರಿಸಿ " ಜಗತ್ಸುಂದರೀ, ಅವರಿಗೆ ಎಣ್ಣೆ ಹಚ್ಚಬಾರದೇ ? '' ಎಂದು ನರೇಂದ್ರನ ಕಡೆಗೆ ಕೈಮಾಡಿ ತೋರಿಸಿದಳು.

" ಹೂಮಾಲೆಯನ್ನು ಕಟ್ಟುತ್ತೇನೆ ಕಾಣುವದಿಲ್ಲವೇ ? ನಾಯಿಗೆ ಹೇಳಿದರೆ ನಾಯಿ ತನ್ನ ಬಾಲಕ್ಕೆ ಹೇಳಿತಂತೆ ! " ಎಂದು ಜಗತ್ಸುಂದರಿಯು ಹೇಮಲತೆಯ ಅಂತರ್ಗತವನ್ನು ಅರಿಯದೆ ವಸಕ್ಕನೆ ಅವಳ ಮೈಮೇಲೆ ಹೋದಳು.

" ನೀನೇ ಹಚ್ಚಬಾರದೇ ಹೇಮಾ. ಎಂದೂ ಇಲ್ಲದ ನಾಚಿಕೆ ಇಂದೆಲ್ಲಿ ಬಂದಿತು ? " ಎಂದು ಸುಶೀಲಾದೇವಿಯು ಆಜ್ಞಾಪಿಸಿದ ಕೂಡಲೆ ಹೇಮಲತೆಯು ಅನಿರ್ವಾಹಕ್ಕಾಗಿ ನರೇಂದ್ರನ ಬಳಿಗೆ ಬಂದಳು.

ನರೇಂದ್ರನ ಮುಖವನ್ನು ನೋಡಿದ ಕೂಡಲೆ ಹೇಮಲತೆಯ ಮುಖದಲ್ಲಿ ತನ್ನಿಂದ ತಾನೇ ನಗೆ ತೋರಿತು. ಹೀಗಾಗಕೂಡದೆಂದು ಅವಳು ಎಷ್ಟೊಂದು ನಿಶ್ಚಯಿಸಿಕೊಂಡಿದ್ದಳು. ಹಾಗೂ ಹೀಗೂ ನರೇಂದ್ರನ ಅಭ್ಯಂಗದ ಸ್ನಾನಾದಿಗಳು ಒಂದಾವರ್ತಿ ಮುಗಿದವು.

## ಒಂಬತ್ತನೆಯ ಅಧ್ಯಾಯ

## ರಾಜಕಾರಣದ ಮುಸುಕು

ರಂಗಪಂಚಮಿಯ ದಿವಸ ಸಾಯಂಕಾಲಕ್ಕೆ ರಾಜಾ ಮಾನಸಿಂಹನು ನರೇಂದ್ರನಾಥನನ್ನು ತನ್ನ ಬಳಿಗೆ ಕರೆಸಿಕೊಂಡು, ಅಂದದ್ದು: "ನರೇಂದ್ರ ನಾಥರಾಯ, ನವಕುಮಾರನು ನಿಮ್ಮ ಆಸ್ತಿಯ ವ್ಯವಸ್ಥೆಯನ್ನು ಚನ್ನಾಗಿ ಇಟ್ಟಿದ್ದಾನೆ. ನಿನ್ನ ಯೋಗ್ಯತೆಗೆ ತಕ್ಕದ್ದಾದ ವಿದ್ಯಾಸಂಸ್ಕಾರವು ನಿನಗೆ ಆಗಿದೆಂದು ನಿನ್ನ ಅಧ್ಯಾಪಕರು ಹೇಳಿದ್ದು ಕೇಳಿ ನಾವು ತುಂಬಾ ಸಂತುಷ್ಟ ರಾಗಿದ್ದೇವೆ. ಇನ್ನು ರಾಜಾ ತೋಡರಮಲ್ಲನು ಕೊಟ್ಟ ವಚನದ ಪ್ರಕಾರ ದೇವೀಪುರದ ಆಸ್ತಿಯನ್ನು ನವಕುಮಾರನಿಗೆ ಬಿಟ್ಟುಬಿಡಲಿಕ್ಕೆ ಅಡ್ಡಿ ಇಲ್ಲ. ನಮ್ಮ ಅಭಿಪ್ರಾಯವು ನಿನಗಾದರೂ ಸಮ್ಮತವಾಗಿರುವದೆಂದು ನಂಬಿದ್ದೇವೆ."

"ಪ್ರಭೋ, ದೇವೀಪುರದ ಆಸ್ತಿಯು ಯಾರದು? ಅವರಿಗೆ ಕೊಟ್ಟರೆ ಅಡ್ಡಿ ಏನು? ನವಕುಮಾರ ಮಾವಂದಿರೂ ಸುಶೀಲಾದೇವಿಯವರೂ ತಂದೆತಾಯಿಗಳಿಗಿಂತಲೂ ಹೆಚ್ಚಾಗಿ ನಮ್ಮ ಮೇಲೆ ಮಮತೆ ಮಾಡುತ್ತಾರೆ. ನಾನೂ, ನನ್ನ ತಂಗಿಯೂ ಅವರ ಉಪಕಾರವನ್ನು ಸ್ಮರಿಸುತ್ತಲೇ ಇದ್ದೇವೆ. ನವಕುಮಾರರವರು ಯಥೇಷ್ಟವಾಗಿ ತಮ್ಮ ಊರಿಗೆ ಹೋಗಿ ಸುಖದಿಂದ ಇರಲಿ."

ಈ ಮಾತಿಗೆ ಮಾನಸಿಂಹನು ನಕ್ಕು: "ನವಕುಮಾರನು ತನ್ನ ಆಸ್ತಿಯನ್ನು ಸ್ವತಂತ್ರವಾಗಿ ತನ್ನ ಸ್ವಾಧೀನಕ್ಕೆ ತೆಗೆದುಕೊಂಡರೂ ಅವನು ಈಗಲೇ ಬೀರನಗರವನ್ನು ಬಿಟ್ಟು ಹೋಗುವದಿಲ್ಲ. ನರೇಂದ್ರ, ನೀನಿನ್ನೂ ಚಿಕ್ಕವನು. ವೀರಶ್ರೀಯ ದರ್ಪವೂ, ಯೌವನದ ಮದವೂ, ಸ್ವಕುಲಾಭಿಮಾನದ ಉದ್ರೇಕವೂ ನಿನ್ನಲ್ಲಿ ತುಂಬಿರುವದರಿಂದ ನಿನಗೆ ಈಗಲೇ ಸ್ವಾತಂತ್ರ್ಯವನ್ನು ಕೊಡುವದು ನಮಗೆ ಸರಿಯಾಗಿ ತೋರುವದಿಲ್ಲ. ನೀನು ಮನಸ್ಸಿನಲ್ಲಿ ಮತ್ತೇನಾದರೂ ವಿಕಲ್ಪವನ್ನು ತಂದುಕೊಳ್ಳಬೇಡ. ನಾವು ನಿನ್ನ ಹಿತವನ್ನೇ ಅನುಲಕ್ಷಿಸಿ ಹೀಗೆ ವಿಚಾರಮಾಡಿದ್ದೇವೆ. ನಿನ್ನನ್ನು ಮೊದಲಿಗೆ ಕಂಡಾಕ್ಷಣದಿಂದಲೇ ನೀನೊಬ್ಬ ಪರಾಕ್ರಮಿಯಾದ

ಸೈನ್ಯಾಧಿಕಾರಿಯಾಗುವಿ, ಎಂದು ನಾವು ಗ್ರಹಿಸಿಕೊಂಡೆವು. ಇಂಥ ತಾರುಣ್ಯದ ಭರದಲ್ಲಿ ನೀನು ಸೋಮಾರಿಯಂತೆ ಮನೆಯಲ್ಲಿ ಕುಳಿತು ಕೊಳ್ಳುವದು ಉಚಿತವಲ್ಲ. ಪರ್ಷೆರಡು ವರ್ಷ ನೀನು ಬಾದಶಹರ ಸೈನ್ಯದಲ್ಲಿ ಅಧಿಕಾರಿಯಾಗಿ ಕೆಲಸಮಾಡತಕ್ಕದ್ದೆಂದು ನಮ್ಮ ಅಭಿಪ್ರಾಯವಾಗಿದೆ. ನಿನ್ನನ್ನು ಸೈನ್ಯದಲ್ಲಿ ತೆಗೆದುಕೊಳ್ಳದೆ ನಾವು ಬಿಡುವದಿಲ್ಲ."

"ವೀರಾಗ್ರೇಸರರೇ, ಬಾದಶಹರ ದಳದಲ್ಲಿ ಅಧಿಕಾರಿಯಾಗಿ ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಿ ಅಕಬರಸಾರ್ವಭೌಮನಿಂದ ಬಹುಮಾನವನ್ನು ಹೊಂದಿದವನೇ ಭಾಗ್ಯಶಾಲಿಯು. ಪ್ರಭುಗಳಾದ ತಾವು ನನಗೆ ಹತ್ತು ಜಹಗೀರುಗಳನ್ನು ಕೊಟ್ಟು ಮನೆಯಲ್ಲಿ ಉಂಡುಕೊಂಡು ಇರೆಂದು ಹೇಳಿದರೂ ನಾನು ಇರುವವನಲ್ಲ. ಆದರೆ, ತಾವು ಈಗಲೇ ಆಡಿ ತೋರಿಸಿದ ಮಾತು ಗಳಿಂದ ನನ್ನ ವರ್ತನವು ತಮಗೆ ಸಮಾಧಾನಕರವಾಗಿ ಇಲ್ಲವೆಂದು ತಮಗೆ ತಿಳಿದಂತೆ ನನಗೆ ಭಾಸವಾಗುತ್ತದೆ. ನವಕುಮಾರರು ಬೇಡ, ಅವರ ಗುಮಾಸ್ತನಾದ ಗೋಕುಲದಾಸನು ನನ್ನ ವಿಷಯಕ್ಕೆ ಇಲ್ಲದ್ದೊಂದು ತಮ್ಮ ಮುಂದೆ ಹೇಳಿರಲಿಕ್ಕೆ ಸಾಕು ಪ್ರಥಮಗ್ರಾಸದಲ್ಲಿಯೇ ಮಕ್ಷಿಕಾಪಾತವೆಂಬಂತೆ ಸಕಲವೀರರಿಗೆ ಗುರುಗಳಾದ ತಮ್ಮ ಮುಂದೆ ನಿಲ್ಲುವದಕ್ಕೆ ಮುಂಚಿತ ವಾಗಿಯೇ ನಾನು ಅವಿನೀತನೆಂಬ ಅಪವಾದವು ತಟ್ಟಿತು. ಈ ಮಿಥ್ಯಾಪ ವಾದವು ನನ್ನಿಂದ ದೂರಾಗದಿದ್ದರೆ ನನಗೆ ಈ ಜಮೀನುದಾರಿಯೂ ಬೇಡ, ಬಾದಶಹರ ಸೈನ್ಯದಲ್ಲಿಯ ಅಧಿಕಾರವೂ ಬೇಡ!'' ಎಂದು ಸೆಡವಿನಿಂದ ನುಡಿದು ನರೇಂದ್ರನು ಗಂಭೀರವಾದ ಮುದ್ರೆಯನ್ನು ತಾಳಿ ಸೆಟೆಯಿಂದ ನಿಂತುಕೊಂಡನು.

ವೀರರಲ್ಲಿಯ ಸರಲಭಾವವೂ, ಅವರಲ್ಲಿ ವ್ಯಕ್ತವಾಗುವ ಮಿಥ್ಯಾಪ ವಾದದ ಅಸಹಿಷ್ಣುತೆಯೂ ನರೇಂದ್ರನಲ್ಲಿ ಸಂಪೂರ್ಣವಾಗಿರುವದನ್ನು ಕಂಡು ಮಾನಸಿಂಹರಾಜನು ಸಂತುಷ್ಟನಾಗಿ ಸೆಡವಿನಿಂದ ನಿಂತಿರುವ ಆ ತರುಣನ ಕೈಹಿಡಿದು, ''ಚಿಕ್ಕವೀರನೇ, ಅನ್ಯರ ಹೇಳಿಕೆಯ ಮೇಲಿಂದ ಮಾನಸಿಂಹನು ಸಹಸಾ ಯಾರನ್ನೂ ದೋಷಿಯೆಂದು ನಿರ್ಣಯಿಸುವವನಲ್ಲ. ನಿನ್ನಂಥ ತೇಜಃಪುಂಜನಾದ ನವತರುಣನಲ್ಲಿ ದುರ್ಗುಣಗಳೆಂದಿಗೂ ವಾಸಮಾಡಿರಲಾರವು. ನೀನು ಅವಿನೀತನೆಂದು ನಾವು ತಿಳಿಯುವದಿಲ್ಲ,

ಆಯಿತೇ ?" ಎಂದು ನುಡಿದ ಆ ವೃದ್ಧವೀರನ ಮುಖದಲ್ಲಿ ಸಂತೋಷದ ನಗೆ ತೋರಿತು.

ನರೇಂದ್ರನಿಗೆ ಪರಮಾವಧಿಯ ಆನಂದವಾಯಿತು. ಸಂಗಡಲೇ ಅವನು ತನ್ನ ಖಡ್ಗವನ್ನೂ ಹಿರಿದು ಮೊಣಕಾಲೂರಿ ಅದನ್ನು ವಿನಯದಿಂದ ಮಾನಸಿಂಹರಾಜನ ಸ್ವಾಧೀನ ಮಾಡಿ ನೆಲಮುಟ್ಟಿ ಪ್ರಣಾಮಮಾಡಿದನು. ಮಾನಸಿಂಹರಾಜನಾದರೂ ಆದರದಿಂದ ಎದ್ದುನಿಂತು, ತನ್ನದೊಂದು ಖಡ್ಗವನ್ನು ತೆಗೆದು ಅದನ್ನು ನರೇಂದ್ರನ ಸ್ವಾಧೀನವಮಾಡಿ "ನರೇಂದ್ರನಾಥರಾಯ, ಇಕೋ ಈ ಖಡ್ಗವನ್ನು ಸ್ವೀಕರಿಸು. ಅನೇಕ ಯುದ್ಧಗಳಲ್ಲಿ ವಿಜಯಿಯಾದ ಮಾನಸಿಂಹ ಸೇನಾಪತಿಯ ಕೈಯೊಳಗಿನ ಖಡ್ಗವಿದು ! ವೀರಾಗ್ರೇಸರರು ತಲೆದೂಗುವಂತೆ ನೀನು ಇದನ್ನು ಉಪಯೋಗಿಸುವಿ ಎಂದು ನಂಬಿ ನಾನು ಇದನ್ನು ನಿನಗೆ ಕೊಟ್ಟಿದ್ದೇನೆ. ತಿಳಿಯಿತೇ ? " ಎಂದು ಹೇಳಿ ನರೇಂದ್ರನ ಭುಜವನ್ನು ಚಪ್ಪರಿಸಿದನು.

ಜಗದೇಕಮಲ್ಲನೂ, ದಿಲ್ಲಿಯ ಚಕ್ರವರ್ತಿಯ ಮುಖ್ಯ ಸೇನಾಪತಿಯೂ ಆದ ಮಾನಸಿಂಹರಾಜನು ತನಗೆ ತೋರಿಸಿದ ಬಹುಮಾನವನ್ನು ಅನುಭವಿಸಿ ನರೇಂದ್ರನು ಆನಂದಾಶ್ರುಗಳನ್ನು ಸುರಿಸಿದನು. ನರೇಂದ್ರನಲ್ಲಿ ಹೀಗೆ ವ್ಯಕ್ತವಾದ ಕ್ಷಾತ್ರಸ್ಫೂರ್ತಿಯನ್ನು ಕಂಡು ಮಾನಸಿಂಹನ ಮನಸ್ಸಿನಲ್ಲಿಯೂ ಅವನ ವಿಷಯವಾಗಿ ಒಂದು ಪ್ರಕಾರದ ಪ್ರೇಮವು ಉದ್ಭವಿಸಿದಂತಾಗಿ ಆ ಸಮರಕೇಸರಿಯು ಗದ್ಗದಕಂಠನಾಗಿ " ನರೇಂದ್ರಬಹದ್ದರ, ನೀನು ವಿಖ್ಯಾತನಾದ ವೀರನೆನಿಸಿಕೊಳ್ಳುವಿ. " ಎಂದು ನುಡಿದು ನರೇಂದ್ರನಿಗೆ ಅಪ್ಪಣೆಕೊಟ್ಟು ಕಳುಹಿಸಿದನು.

ಮಾನಸಿಂಹರಾಜನೊಡನೆ ಅವನ ರಾಣಿಯೂ ಮಗಳಾದ ತಾರಾದೇವಿ ಎಂಬ ಹದಿನಾರು ವರುಷದ ಯುವತಿಯೂ ಬೀರನಗರಕ್ಕೆ ಬಂದಿದ್ದರು. ಇವರಿಗೆ ಬಂಗಾಲೀ ಭಾಷೆ ಬರುತ್ತಿದ್ದಿಲ್ಲಾದ್ದರಿಂದ ಇವರೊಡನೆ ಮಾತಾಡಲು ಹೇಮಲತೆಯೊಬ್ಬಳೇ ಯೋಗ್ಯಳಾಗಿದ್ದಳು. ಹೇಮಲತೆಯನ್ನು ಎತ್ತಿ ಆಡಿಸಿದ ದಾಸಿಯು ಆಗ್ರಾ ಪಟ್ಟಣದ ಓರ್ವ ಮುಸಲ್ಮಾನಳಾಗಿದ್ದರಿಂದ ಹೇಮಲತೆಗೆ ಚಿಕ್ಕಂದಿನಿಂದಲೇ ಅಲ್ಪಸ್ವಲ್ಪ ಹಿಂದುಸ್ಥಾನೀ ಭಾಷೆ ಬರುತ್ತಿತ್ತು. ದೊಡ್ಡವಳಾದ ಬಳಿಕಂತೂ ಅವಳು ಆ ಭಾಷೆಯನ್ನು ಚನ್ನಾಗಿ

ಕಲಿತುಕೊಂಡಿದ್ದಳು. ತಾರಾದೇವಿಯು ಎರಡು ದಿವಸ ಹೇಮಲತೆಯ ಜೊತೆಯಲ್ಲಿ ಒಳ್ಳೇ ಆನಂದದಿಂದಿದ್ದಳು. ಹಿಂದುಸ್ಥಾನದ ಸ್ತ್ರೀಯರ ನಡಾವಳಿಗಳನ್ನೂ, ಆಗ್ರಾ ಪಟ್ಟಣದಲ್ಲಿದ್ದ ಬಾದಶಹನ ಅಂತಃಪುರದ ಸ್ಥಿತಿಯನ್ನೂ ಕುರಿತು ತಾರಾದೇವಿಯು ಅನೇಕ ಸಂಗತಿಗಳನ್ನು ಹೇಳಿ ಹೇಮಲತೆಯ ಮನೋರಂಜನಗೈದಳು. ಬಾದಶಹನ ರಾಣಿಯಾದ ಅಂಬಬಾದಶಾಹಿಣಿಯು ಮಾನಸಿಂಹನ ಸೋದರತ್ತೆಯಾದ್ದರಿಂದ ತಾರಾ ದೇವಿಗೆ ಅಕಬರನ ಅಂತಃಪುರದ ಸ್ಥಿತಿಯೆಲ್ಲ ಚನ್ನಾಗಿ ಗೊತ್ತಾಗುತ್ತಿತ್ತು.

ಸುಶೀಲಾದೇವಿಯ ಸದಾಚರಣಗಳನ್ನೂ, ಅವಳು ತನಗೆ ತೋರಿದ ಆದರ ಸತ್ಕಾರಗಳನ್ನೂ ಕಂಡು ಮಾನಸಿಂಹನ ರಾಣಿಯು ಸುಶೀಲಾದೇವಿಯ ಗೆಳೆತನವನ್ನು ಬಯಸಿದಳು. ಅವಳು ರಾಜಮಹಾಲಿಗೆ ಹೊರಟ ದಿವಸ ಸುಶೀಲಾದೇವಿಯನ್ನು ಕುರಿತು "ದೇವೀ, ಹೇಮಲತೆಯನ್ನು ರಾಜ ಮಹಾಲಿಗೆ ನಾಲ್ಕು ದಿವಸ ಕರಕೊಂಡು ಹೋಗಬೇಕೆಂದು ತಾರೆಯು ಆಗ್ರಹ ತೊಟ್ಟಿದ್ದಾಳೆ. ಹೇಗಾದರೂ ಮಾಡಿ ನಾಲ್ಕು ದಿವಸ ಅವಳನ್ನು ನಮ್ಮ ಸಂಗಡ ಕಳಿಸಿಕೊಡಿರಿ. ನಾವು ಪರಕೀಯರೆಂದು ತಿಳಿಯಲಾಗದು." ಎಂದು ಆಗ್ರಹದಿಂದ ಕೇಳಿದಳು.

"ಕಳಿಸಲಿಕ್ಕೆ ಏನು ಬಂದಿದೆ. ಆದರೆ ಬೆಳಗಾದರೆ ಚೈತ್ರಮಾಸ ಬಂದಿತು. ನಮ್ಮ ತವರಮನೆಯಲ್ಲಿ ರಾಮನವಮಿಯ ಉತ್ಸವವಾಗತಕ್ಕ ಸಾಂಪ್ರದಾಯ ಉಂಟು. ಹೇಮಲತೆಯನ್ನು ನರೇಂದ್ರನಿಗೆ ಕೊಡಬೇಕೆಂದು ನಾನು ಮನಸಾ ವಿಚಾರಮಾಡಿದ್ದು ತಮಗೆ ಹೇಳಿರುವೆನಲ್ಲ! ಆದಕ್ಕಾಗಿ ನಾನು ಕೇಳಿಕೊಳ್ಳುವದೇನೆಂದರೆ, ರಾಮನವಮಿಯಾದ ಬಳಿಕ ನೀವು ಬೇಕಾದಾಗ ಹೇಮಲತೆಯನ್ನು ಕರಕೊಂಡು ಹೋಗಬಹುದು."

"ಹಾಗಾದರೆ ರಾಮನವಮಿಯಾದ ಬಳಿಕ ಕಳಿಸುವದು ಗಟ್ಟಿಯೋ?" ಎಂದು ತಾರಾದೇವಿಯು ಕೇಳಿದಳು.

"ಅಗತ್ಯ ಕರಕೊಂಡು ಹೋಗಿರಿ."

"ಸುಶೀಲಾದೇವಿ, ರಾಜಮಹಾಲಿನ ಅರಮನೆ ನಿಮ್ಮದೇ ಎಂದು ತಿಳುಕೊಳ್ಳಿರಿ. ನಿಮ್ಮಂಥ ಸತ್ಕುಲಜರಾದ ಸತಿಯರ ಸ್ನೇಹವು ದುರ್ಲಭ ವಾದದ್ದು. ನೀವು ರಾಜಮಹಾಲಿಗೆ ಬೇಕಾದಾಗ ಬರಬೇಕು. ನಾನು

ಬೀರನಗರಕ್ಕೆ ಬೇಕಾದಾಗ ಬಂದೇಬರುತ್ತೇನೆ. ಹೀಗೆ ನಾವು ಅಕ್ಕ ತಂಗೆಂದಿರಾಗಿ ನಡಕೊಳ್ಳೋಣ. ಹೆಚ್ಚಿಗೆ ಇನ್ನೇನು ಹೇಳಲಿ ?" ಎಂದು ಅಂಬರದ ರಾಣಿಯು ಆದರದಿಂದ ನುಡಿದಳು.

"ರಾಣಿಯವರೇ, ಹೀಗೆ ಪ್ರೀತಿಯಿಂದ ನಮ್ಮನ್ನು ಆದರಿಸುವಂಥವರ ಮಾತು ಕೇಳದೆ ಮತ್ತಿನ್ನಾರ ಮಾತು ಕೇಳಬೇಕು. ನಾವಂತೂ ನಿಮ್ಮ ಆಶ್ರಯದಲ್ಲಿ ಇರತಕ್ಕವರು, ನಿಮ್ಮ ಆಜ್ಞೆಯಂತೆ ನಡಕೊಳ್ಳಲೇಬೇಕು."

"ಆಜ್ಞೆಯ ಮಾತಾಡಬೇಡಿರಿ. ಪ್ರೀತಿಯಿಂದಲೇ ನಾವು ಅಕ್ಕ ತಂಗೆಂದಿರಾಗೋಣ" ಎಂದು ರಾಣಿಯು ಸುಶೀಲಾದೇವಿಯ ಅಪ್ಪಣೆ ತಕ್ಕೊಂಡು ಅಂದಣವನ್ನೇರಿದಳು.

## ಹತ್ತನೆಯ ಅಧ್ಯಾಯ

## ಮತ್ತೆ ಕಪಟಿಯ ಕಾರಸ್ಥಾನವು

ते5मी मानवराक्षसाः परहितं स्वार्थाय निघ्नन्ति ये
—ಭರ್ತೃಹರಿ.

ದೇವೀಪುರದ ಆಸ್ತಿಯು ನವಕುಮಾರನ ಸ್ವಾಧೀನಕ್ಕೆ ಬಂದದ್ದಲ್ಲದೆ ಅವನು ನರೇಂದ್ರನ ಆಸ್ತಿಯ ವ್ಯವಸ್ಥಾಪಕನಾಗಿ ಬೀರನಗರದಲ್ಲಿಯೇ ಇರತಕ್ಕವನಾದನು. ತನ್ನ ಸಂಸಾರದ ವೆಚ್ಚವೆಲ್ಲ ಬೀರನಗರದ ಉತ್ಪನ್ನದ ಮೇಲಿಂದ ಸಾಗಿ ದೇವೀಪುರದ ಉತ್ಪನ್ನವೆಲ್ಲ ಅವಿಚ್ಛಿನ್ನವಾಗಿ ತನ್ನ ಬೊಕ್ಕಸಕ್ಕೆ ಸೇರಿದ್ದು ನವಕುಮಾರನಿಗೆ ಹಿತವೇ ಆಯಿತು. ಮೊದಲು ತೋಡರಮಲ್ಲನ ಆಜ್ಞೆಯ ಮೇರೆಗೆ ದೇವೀಪುರವು ಬೀರನಗರದ ಕೈಕೆಳಗೆ ಆಗಿತ್ತು. ಈಗ ಬೀರನಗರವೇ ಮಾನಸಿಂಹರಾಜನ ಆಜ್ಞಾನುಸಾರವಾಗಿ ದೇವೀಪುರದ ಕೈಕೆಳಗೆ ಆದಂತೆ ಆಗಿದ್ದು ಕಂಡು ಮುಯ್ಯಿಗೆ ಮುಯ್ಯಿ ತೀರಿತೆಂದು ತಿಳಿದುಕೊಂಡು ನವಕುಮಾರನು ಒಳ್ಳೇ ಅಭಿಮಾನವನ್ನು ತಳೆದಿದ್ದನು.

ಹೀಗೆ ತನಗಾದ ಉಚ್ಛ್ರಾಯವೆಲ್ಲ ಕೇವಲ ಗೋಕುಲದಾಸನ ತಂತ್ರಾನುಸಾರವಾಗಿ ಸಾಧಿಸಿತೆಂದು ನಂಬಿ ನವಕುಮಾರನು ಆ ವಂಚಕನ ಇಚ್ಛಾನುವರ್ತಿಯಾಗಿ ನಡಕೊಳ್ಳಲಾರಂಭಿಸಿದನು. ಬೀರನಗರದಲ್ಲಿ ಯಾಗಲಿ, ದೇವೀಪುರದಲ್ಲಿಯಾಗಲಿ ಗೋಕುಲದಾಸನೇ ಪ್ರಧಾನಪುರುಷ ನಾಗಿ ಮೆರೆಯಲಾರಂಭಿಸಿದನು. ಇಷ್ಟು ದಿವಸ ನವಕುಮಾರನಿಗೆ ವಿಧೇಯ ನಾಗಿ ನಡಕೊಳ್ಳುತ್ತಿದ್ದ ಗೋಕುಲದಾಸನು ಈಗ ತನ್ನ ಯಜಮಾನನ ಸಮಾನಸ್ಕಂಧನಾಗಿ ಕುಳಿತನು.

ಒಂದು ದಿವಸ ಗೋಕುಲದಾಸನು ಶೃಂಗರಿಸಿದ ತನ್ನ ಮನೋರಥದಲ್ಲಿ ಕುಳಿತು ಆಲೋಚಿಸಿದ್ದೇನಂದರೆ : "ಇನ್ನು ನನ್ನ ಇಷ್ಟಾರ್ಥವು ಕೈಗೂಡುವ ಸಮಯವು ಬಂದಿತು. ನವಕುಮಾರನಂತೂ ನನಗೆ ಅಂಕಿತ ನಾಗಿ ಇರುವನು. ದೇವೀಪುರವು ನನ್ನ ಮಗನದಾಗಲಿಕ್ಕೆ ಅವಕಾಶ ಉಳಿಯಲಿಲ್ಲ. ಶ್ರೀಶನ ವರ್ಚಸ್ವವನ್ನು ಅರ್ಧಮರ್ಧ ಮುರಿದುಹಾಕಿದ್ದೇನೆ. ಯಜಮಾನರಲ್ಲಿ ದುರಭಿಮಾನವನ್ನು ಸಂಪೂರ್ಣವಾಗಿ ನಾನು ತುಂಬಿರುವೆ ನಾದ್ದರಿಂದ ಅವರು ಹೇಮಲತೆಯನ್ನು ಸಹಸಾ ನರೇಂದ್ರನಿಗೆ ಕೊಡುವದಿಲ್ಲ. ನರೇಂದ್ರನ ವಿಘ್ನವು ದೂರಾದ ಬಳಿಕ ನನ್ನ ಘನಶ್ಯಾಮನೇ ಹೇಮಲತೆಯ ಪತಿಯು. ಈ ಮಾತು ಸದ್ಯಕ್ಕೆ ಹಾಗಿರಲಿ, ಮೊದಲು ಶ್ರೀಶನಿಗೆ ಅರ್ಧಚಂದ್ರ ವನ್ನು ತೋರಿಸಿಯೇ ತೀರಬೇಕು."

ಹೀಗೆ ಆಲೋಚಿಸಿ ಅವನು ನೆಟ್ಟಗೆ ನವಕುಮಾರನ ಬಳಿಗೆ ಬಂದು ಆ ಹರಟೆ ಈ ಹರಟೆ ನಡಿಸಿದನು. ಮಾತಿಗೆ ಮಾತು ಬರಲು ನವಕುಮಾ ರನು : "ಗೋಕುಲದಾಸ, ನಮ್ಮ ಮನೆಯವರು ಹೇಮಲತೆಯನ್ನು ನರೇಂದ್ರನಿಗೇ ಕೊಡತಕ್ಕದ್ದೆಂದು ಹಟತೊಟ್ಟಿದ್ದಾರೆ. ನನಗಂತೂ ಈ ಸಂಬಂಧವು ಪ್ರಶಸ್ತವಾಗಿ ತೋರಲೊಲ್ಲದು. ಅನಾಯಾಸವಾಗಿ ಬಂದಿ ರುವಿ, ಏನು ಮಾಡಬೇಕೆಂಬದನ್ನು ಕುರಿತು ನಿನ್ನ ಆಲೋಚನೆಗಳನ್ನು ಹೇಳು...."

"ನರೇಂದ್ರನಿಗೆ ಕೊಡದಿದ್ದರೆ, ಹೇಮಲತಾದೇವಿಯನ್ನು ಯಜ ಮಾನರು ಮತ್ತಿನ್ನಾರಿಗೆ ಕೊಡಬೇಕೆಂದು ಆಲೋಚಿಸಿರುವರು ?"

"ನನಗೇನೂ ತೋಚಲೊಲ್ಲದು. ಈ ಮಾತಿನ ವಿಷಯದಲ್ಲಿ ನಾನು ಇದುವರೆಗೆ ವಿಚಾರ ಮಾಡಿಯೇ ಇಲ್ಲ." ಎಂದು ನವಕುಮಾರನೆಂದನು.

"ಸುಶೀಲಾದೇವಿಯವರಿಗೆ ತಮ್ಮ ಮಗಳನ್ನು ತವರಮನೆಗೆ ಕೊಡುವ ಇಚ್ಛೆಯಾಗಿರುವದು ಸಹಜವು. ಆದರೆ ಹಾಗೆ ಮಾಡುವದು ದೇವೀಪುರದವರ ಅಭಿಮಾನಕ್ಕೆ ಬಾಧಕವೇ ಎಂದು ನಾನು ಎಣಿಸುತ್ತೇನೆ. ಯಜಮಾನರು ತಮ್ಮ ಯೋಚನೆಯನ್ನು ತಾವು ಕಂಡುಕೊಳ್ಳಬಹುದು. ಗೃಹಕೃತ್ಯದ ಮಾತುಗಳಲ್ಲಿ ಬಾಯಿ ಹಾಕುವದು ನನ್ನ ಯೋಗ್ಯತೆಯಲ್ಲ."

"ಹಾಗೇಕೆ ಮಾತಾಡುವಿ ಗೋಕುಲದಾಸ? ನೀನು ನಮ್ಮವನೇ ಎಂದು ತಿಳಿದು ನಾನು ನಿನ್ನ ಅಭಿಪ್ರಾಯವನ್ನು ಕೇಳುತ್ತೇನೆ. ಕಾಂತಿಪುರದವರ ಮನೆಗಾಗಲಿ, ವಿಲಾಸಪುರದವರ ಮನೆಗಾಗಲಿ, ಹೇಮಲತೆಯನ್ನು ಕೊಟ್ಟರೆ ನೆಟ್ಟಗಾಗಲಿಕ್ಕಿಲ್ಲವೆ?"

"ವಿಲಾಸಪುರದ ಸ್ಥಳವು ಎಲ್ಲ ದೃಷ್ಟಿಯಿಂದ ಸರಿಯಾಗಿದ್ದರೂ, ಮುಖ್ಯ ವರನೇ ಏಕಾಕ್ಷಿಯು. ಹೇಮಲತಾದೇವಿಯಂಥ ರೂಪಸುಂದರಿಯನ್ನು ಏಕಾಕ್ಷಿಯಾದವನಿಗೆ ಕೊಡುವದು ಸರ್ವಥಾ ನನ್ನ ಮನಸ್ಸಿಗೆ ಬರುವದಿಲ್ಲ. ಇನ್ನು ಕಾಂತಿಪುರದವರು ಧನಸಂಪನ್ನರೂ, ದೊಡ್ಡ ಜಮೀನದಾರರೂ ಸರಿ. ಆದರೆ ಅಂಥ ಆಢ್ಯತೆಯುಳ್ಳವರ ಮನೆಗೆ ಕೊಟ್ಟರೆ ಬೇಕಾದಾಗ ನೀವು ಮಗಳ ಮೋರೆಯನ್ನು ನೋಡುವೆನೆಂದರೂ ಅವರು ಕಳಿಸಿಕೊಡುವವರಲ್ಲ. ಅದಕ್ಕಾಗಿ ನಮ್ಮ ವಿಚಾರವನ್ನು ನಾವು ನೋಡಿಕೊಳ್ಳಬೇಕು. ಯಜಮಾನರ ಸಂಪತ್ತಿಗೆ ಹೇಮಲತಾದೇವಿಯು ಒಬ್ಬಳೇ ಬಾಧ್ಯಳು. ಅವಳನ್ನು ನೋಡುತ್ತಲೆ ತಾವಾಗಲೀ, ಸುಶೀಲಾದೇವಿಯರಾಗಲೀ ಕಾಲಹರಣ ಮಾಡತಕ್ಕವರು. ಅಂದಬಳಿಕ ಮನೆಯ ಆಳೀತನಕ್ಕೆ ನಿಂತುಕೊಳ್ಳಲೊಪ್ಪಿದವನಿಗೇ ಹೇಮಲತಾದೇವಿಯನ್ನು ಕೊಟ್ಟರೆ ತಮಗೂ ಆ ಅಳಿಯನಿಗೂ ಕೂಡಿಯೇ ಸುಖವಾಗುವದು. ಯಜಮಾನರ ಆಜ್ಞೆಯಾದರೆ ಅಂಥ ವರನನ್ನು ನಾನು ಹುಡುಕಿ ತರುವೆನು" ಎಂದು ಗೋಕುಲದಾಸನು ತನ್ನ ಮಗನ ಕಾಲಂ ಮುಂದೆ ಚಾಚುವ ಉದ್ದೇಶದಿಂದ ನುಡಿದನು.

"ನಮ್ಮ ಸುಖಕ್ಕಾಗಿ ನಾವು ಹೇಮಲತೆಯ ಸುಖಕ್ಕೆ ವ್ಯತ್ಯಯ

ತರುವದು ನನಗೆ ಸರಿ ತೋರುವದಿಲ್ಲ. ಹೇಮಲತೆಯು ಹುಟ್ಟುತಲೆ ಅನ್ಯರವಳಾಗಿ ಹುಟ್ಟಿರುವಳು. ವೃದ್ಧಾಪ್ಯದಲ್ಲಿ ನಮ್ಮನ್ನು ಯಾರು ನೋಡುವರೆಂಬ ವಿಚಾರಕ್ಕೆ ಒಳಗಾಗಲು ನಾವೇನು ಬಡವರಲ್ಲ. ಮೇಲಾಗಿ ಶ್ರೀಶಚಂದ್ರನು ವೃದ್ಧಾಪ್ಯದಲ್ಲಿ ನಮ್ಮ ಸಂರಕ್ಷಣೆ ಮಾಡಲಿಕ್ಕೆ ಇದ್ದೇ ಇದ್ದಾನೆ. ''

" ದೇವರೂ, ಈ ವಿಷಯವು ಬಹು ಸೂಕ್ಷ್ಮವಾದದ್ದು. ಶ್ರೀಶಚಂದ್ರರೂ ತಮ್ಮ ಮಕ್ಕಳೇ, ತಮ್ಮ ಸುಖದುಃಖಗಳಾದರೂ ತಮ್ಮವೇ. ನನ್ನಂಥ ಪರಕೀಯನು ಏನಾದರೂ ಆಡಿದರೆ ಕೆಟ್ಟತನವೇ ನನ್ನ ಪಾಲಿಗೆ ಬರುವದು '' ಎಂದು ಆ ಪಂಚಕನು ಮಧ್ಯಸ್ಥನ ಆವಿರ್ಭಾವದಿಂದೆ ನುಡಿದನು.

" ಗೋಕುಲದಾಸ, ಕೆಟ್ಟತನವೇತರದು ಬರುವದು ನಿನಗೆ ? ''

" ಶ್ರೀಶಚಂದ್ರರ ಮೇಲೆ ತಾವು ಕೈ ಊರಿಕೊಳ್ಳುವದನ್ನು ಕಂಡು ನನಗೆ ಆಶ್ಚರ್ಯವೂ, ಖೇದವೂ ಆಯಿತೆಂದು ಹಾಗೆ ಹೇಳಿದೆನು. '' ಎಂದು ನಗುತ್ತ ಕಪಟಿಯಾದ ಆ ಗುಮಾಸ್ತನು ನುಡಿದನು.

" ಗೋಕುಲದಾಸ, ಯಾರ ಮುಂದೆ ಏನು ಹೇಳುತ್ತಿರುವಿ ನೀನು ?'' ಎಂದು ನವಕುಮಾರನು ಕೋಪ ತಳೆದು ಕೇಳಿದನು.

" ನೋಡಿರಿ ! ಇಷ್ಟರಲ್ಲಿಯೇ ಒಡೆಯರಿಗೆ ಹೇಗೆ ಕೋಪ ಬಂದಿತು ? ' हितं मनोहारि च दुर्लभं वचः ' ಎಂದು ಕವಿಗಳು ಹೇಳುತ್ತಿರಲು ನಮ್ಮಂಥವರು ಇಂಥ ಪ್ರಸಂಗದಲ್ಲಿ ಒಂದು ಮಾತು ಹೆಚ್ಚಿಗೆ ಆಡಿದರೂ ಕಷ್ಟ, ಒಂದು ಮಾತು ಕಡಿಮೆ ಆಡಿದರೂ ಕಷ್ಟ ! ''

" ನೀನು ಹೇಳುವದಾದರೂ ಏನು ? ''

" ಅಪ್ಪಣೆಯಾದರೆ ಹೇಳುವೆನು '' ಎಂದು ಉಪಕ್ರಮಿಸಿದ ಗೋಕುಲದಾಸನು ಆ ಹಾದೀ ನೋಡದೆ ಮುಂದಕ್ಕೆ ಸಾಗಿ ನುಡಿದದ್ದೇನಂದರೆ : " ನಾನಂತೂ ಯಜಮಾನರ ಉಪ್ಪು ಉಂಡು ಬೆಳೆದವನು. ಈ ಚರಣಗಳ ಹಿತವನ್ನು ಅನನ್ಯಭಾವದಿಂದ ಚಿಂತಿಸಿಯೇ ಕೆಲಸ ಮಾಡುತ್ತಿರುವೆನೆಂದು ದೇವರು ನನಗೆ ತುತ್ತು ಅನ್ನವನ್ನು ದಯಪಾಲಿಸಿರುವನು. ಅದಕ್ಕಾಗಿ ಯಜಮಾನರಿಗೆ ನಾಲ್ಕು ಹಿತದ ಮಾತು ಹೇಳಲಿಕ್ಕೆ ನಾನೆಂದಿಗೂ ಹಿಂದೆ ಮುಂದೆ ನೋಡುವದಿಲ್ಲ. ''

"ಹೇಳು. ನಿನ್ನ ಮಾತು ಸರಿಯಾಗಿ ಕಂಡಲ್ಲಿ ಅದರಂತೆ ನಡೆಯಲಿಕ್ಕೆ ಬಾಧಕವೇನು?"

"ದೇವರೂ, ಹೊಟ್ಟೆಮಕ್ಕಳಿಗೂ ಹೆರವರ ಮಕ್ಕಳಿಗೂ ಭೇದವುಂಟಷ್ಟೆ? ತನ್ನ ಕಣ್ಣಲ್ಲಿ ತಾನೇ ನೋಡಿಕೊಳ್ಳುವವರ ಸೌಕರ್ಯಕ್ಕೂ, ಅನ್ಯರು ದಾರಿ ತೋರಿಸಿದಂತೆ ಹೋಗುವ ಅಂಧನ ದುಃಸ್ಥಿತಿಗೂ ಮಹದಂತರವಿರುವದು. ಅಂಧನಿಗೆ ಮಾರ್ಗ ತೋರಿಸುವವನು ದೈವಯೋಗದಿಂದ ಒಳ್ಳೆವನಾಗಿದ್ದರೆ ಲೇಸು. ಇಲ್ಲದಿದ್ದರೆ ದೈವಹತನಾದ ಆ ಕುರುಡನು ಕಪಟಿಯ ಕೈಯಲ್ಲಿ ಸಿಕ್ಕು ತೆಗ್ಗಿನಲ್ಲಿ ಕಡುಕೊಂಡು ಬೀಳುವನಲ್ಲೆ?"

"ಶ್ರೀಶನು ಕಪಟಿಯಾಗಿರುವನೆಂಬದು ನಿನ್ನ ಅರ್ಥ!"

"ಯಾರು ಬಲ್ಲರು! ಆದರೂ ನಿಮ್ಮ ಎಚ್ಚರದಲ್ಲಿ ನೀವಿರುವದು ಒಳಿತಲ್ಲವೆ?"

"ಸರಿ. ಸರಿ. ಮುಂದೆ?"

"ಶ್ರೀಶಚಂದ್ರರ ತಂದೆಗಳಾದ ಶಿಶಿರಕುಮಾರರು ನಿಮ್ಮ ಒಡಹುಟ್ಟಿದ ತಮ್ಮಂದಿರೇ ಅಲ್ಲವೆ? ಅವರೇ ನಿಮ್ಮನ್ನು ಎಷ್ಟು ಸಂಕಟದಲ್ಲಿ ನೂಕಿದರೆಂಬ ದನ್ನು ನೀವು ಅರಿಯಿರೇನು? ಮಳೆಯ ನೀರಿನ ಗತಿಯೇ ಹಾಗಾಯಿತು. ನೀವಿನ್ನು ಮಂಜಿನ ನೀರಿಗೆ ಕೈಯೊಡ್ಡಬೇಕೆನ್ನುವಿರಿ."

ಈ ಮಾತು ಕೇಳಿ ನವಕುಮಾರನಲ್ಲಿ ಮತ್ತೆ ಸಂಶಯದ ಸಂಚಾರವಾಯಿತು. ಅವನು ತನ್ನ ತಮ್ಮನಾದ ಶಿಶಿರಕುಮಾರನಿಗೆ ವಿಲಕ್ಷಣವಾದ ಕಿಟಿಕಿಟಿ ಕೊಟ್ಟದ್ದರಿಂದ ಅವನು ಮನೆ ಬಿಟ್ಟು ಅಕಬರನ ಸೇನೆಯಲ್ಲಿ ಸೇರಿ ಎಲ್ಲಿಯೋ ಯುದ್ಧದಲ್ಲಿ ಮಡಿದುಹೋಗಿದ್ದನು. ದ್ರೋಹಿಗೆ ಎಲ್ಲಿ ನೋಡಿದರೂ ದ್ರೋಹವು ಕಂಡುಬರುವಂತೆ ನವಕುಮಾರನ ಮನಸ್ಸಿನ ಸ್ಥಿತಿಯೂ ಆಯಿತು. ಶಿಶಿರಕುಮಾರನ ಮಗನಾದ ಶ್ರೀಶಚಂದ್ರನು ತನಗೆ ದ್ರೋಹವನ್ನು ಬಗೆಯುತ್ತಿದ್ದರೂ ಇರಬಹುದೆಂದು ನೆನೆದು ನವಕುಮಾರನಂದದ್ದು: "ಗೋಕುಲದಾಸ, ನೀನೊಳ್ಳೇ ವಿಚಾರವಂತನು. ನೀನು ಹೇಳಿದ ಮಾತಿನ ಬಗ್ಗೆ ನಾನು ವಿಚಾರಮಾಡುವೆನು."

ತನ್ನ ಮಂತ್ರವು ಚೆನ್ನಾಗಿ ನಾಟಿತೆಂದು ತಿಳಿದು ಗೋಕುಲದಾಸನು ಒಳಿತಾಗಿ ಹಿಗ್ಗಿ "ಹೀಗೆ ಹಾದಿಗೆ ಬನ್ನಿರಿ. ನನ್ನನ್ನೇ ಹುಚ್ಚನನ್ನಾಗಿ

ಮಾಡಿಬಿಟ್ಟಿದ್ದಿರಿ ! ಶ್ರೀಶಚಂದ್ರರು ಈಗ ತಮ್ಮ ಆಶ್ರಯದಲ್ಲಿ ಇದ್ದು ಕೊಂಡು ಸಕಲಸುಖಗಳನ್ನು ಅನುಭವಿಸುತ್ತಿರಲು ಅವರು ನಿಮ್ಮೊಡನೆ ತೋರಿಕೆಗಾಗಿ ವಿನೀತರಂತೆ ವರ್ತಿಸದೆ ಮತ್ತಿನ್ನೇನು ಮಾಡುವರು ? ನಾಳೆ ನೀವು ಅವರಿಗೆ ಎಲ್ಲ ಅಧಿಕಾರಗಳನ್ನು ಒಪ್ಪಿಸಿ ನೋಡಿದರೆ ಬಣ್ಣ ತಿಳಿಯುವದು. ಶ್ರೀಶಚಂದ್ರರಲ್ಲಿ ಗುಣಗಳಿಲ್ಲವೆಂತಲ್ಲ. ಆದರೆ ಮಾಡುವರೇನು? ಅಹಂಕಾರಿಯೂ, ನಮ್ಮನ್ನು ದ್ವೇಷಿಸುವವನೂ ಆದ ನರೇಂದ್ರನ ಸಂಗತಿಗೆ ಬಿದ್ದು ಅವರು ತಂದೆಗೆ ಸಮಾನರಾಗಿರುವ ನಿಮ್ಮ ಮೇಲೆ ದ್ರೋಹಮಾಡುವ ಉದ್ಯೋಗದಲ್ಲಿ ಇರಬೇಕೇ? ರಾಮ ! ರಾಮ ! " ಎಂದು ಆ ದುರಾತ್ಮನು ವಿಷಾದವನ್ನು ನಟಿಸಿ ತಲೆ ಜಾಡಿಸಿದನು.

"ಏನು ! ಶ್ರೀಶನು ನನ್ನ ಮೇಲೆ ದ್ರೋಹಮಾಡಲು ಯತ್ನಿಸುತ್ತಿರುವನೇ? ಗೋಕುಲದಾಸ, ಏನಿದ್ದ ಸಂಗತಿಗಳನ್ನು ಹೇಳಿಬಿಡು. ಇನ್ನಾದರೂ ಆ ಹುಡುಗನನ್ನು ಹಾದಿಗೆ ತರುವಂತೆ ಮಾಡೋಣ" ಎಂದು ನವಕುಮಾರನು ವಿಷಾದದಿಂದ ನುಡಿದನು.

"ಯಜಮಾನರೇ, ಶ್ರೀಶಚಂದ್ರರನ್ನು ಹಾದಿಗೆ ತರುವ ಕಾಲವು ಹಿಂದಾಯಿತು. ಅವರು ಒಳಗಿಂದೊಳಗೇ ನರೇಂದ್ರನ ಹೇಳಿಕೆಯ ಮೇಲಿಂದ ಜಗತ್ಸುಂದರಿಯನ್ನು ಮದುವೆ ಮಾಡಿಕೊಳ್ಳಲು ಒಪ್ಪಿದ್ದಾರೆ. ಇನ್ನು ಮುಂದೆ ಅವರು ನರೇಂದ್ರನ ತಂತ್ರದಂತೆ ನಡಕೊಳ್ಳುವೆವೆಂದು ಶಪಥ ಮಾಡಿದ ವರ್ತಮಾನವನ್ನು ನಾನು ಕೇಳಿದ್ದೇನೆ. ಯಜಮಾನರು ತಮ್ಮ ಪೂರ್ವಜರ ಅಭಿಮಾನವನ್ನು ತೊಟ್ಟಿರುವದಕ್ಕೆ ಶ್ರೀಶಚಂದ್ರರು ದುರಭಿಮಾನ ವೆಂದು ಹೇಳುತ್ತಾರೆ. ಇನ್ನೊಂದು ಮಾತು ಹೇಳಿದರೆ ನೀವು ಎದೆ ಎದೆ ಬಡಕೊಳ್ಳುವಿರಿ."

"ಏನಿದ್ದದ್ದು ಎಲ್ಲ ಹೇಳಿಬಿಡು, ಕೇಳಲಿಕ್ಕೆ ಕುಳಿತಿದ್ದೇನೆ."

"ನಿನ್ನಿನ ದಿವಸ ಶ್ರೀಶಚಂದ್ರನೂ, ನರೇಂದ್ರನೂ ನನ್ನಲ್ಲಿಗೆ ಬಂದು ಹಿಂದಿನ ಲೆಕ್ಕಪತ್ರಗಳನ್ನೆಲ್ಲ ನೋಡಿಕೊಂಡು ಏನೇನೋ ಟಿಪ್ಪಣಿ ಮಾಡಿ ಕೊಂಡು ಹೋಗಿದ್ದಾರೆ. ಇನ್ನವರು ಆಲೋಚಿಸಿದ್ದೇನೆಂದರೆ, ಬೀರನಗರದ ಸಂಪತ್ತನ್ನೆಲ್ಲ ಯಜಮಾನರು ಸ್ವಹಿತಕ್ಕಾಗಿ ಹಾಳುಮಾಡಿದ್ದಲ್ಲದೆ ಸುಳ್ಳು ಲೆಕ್ಕವನ್ನಿಟ್ಟಿದ್ದಾರೆಂದು ರಾಜಮಹಾಲಿಗೆ ಹೋಗಿ ಮಾನಸಿಂಹರಾಜರ

ಮುಂದೆ ತಿಳಿಸುವರು. ಏಳೆಂಟು ದಿವಸಗಳಲ್ಲಿ ಅವರೀರ್ವರೂ ಕೂಡಿ ರಾಜಮಹಾಲಿಗೆ ಹೋಗಿಯೇ ಹೋಗುತ್ತಾರೆ. ”

ಈ ಮಾತು ಕೇಳಿ ನವಕುಮಾರನಲ್ಲಿ ಸಂಶಯ, ಭೀತಿ, ಕ್ರೋಧ ಮುಂತಾದ ಮನೋವಿಕಾರಗಳು ಹುಟ್ಟಿ ಅವನಂದದ್ದು : “ ಗೋಕುಲದಾಸ, ತಿಳಿದು ಮಾತಾಡು. ನಾನಿನ್ನು ಸೂಕ್ಷ್ಮವಾಗಿ ನೀನು ಹೇಳಿದ ಎಲ್ಲ ಮಾತುಗಳ ಸತ್ಯತೆಯನ್ನು ಕಂಡುಕೊಳ್ಳುವೆನು. ನೀನು ಸುಳ್ಳುಹೇಳಿದ್ದಾದರೆ ನಿನ್ನ ನಾಲಿಗೆಯನ್ನೇ ಕಡಿಸಿ ಚಲ್ಲುವೆನು. ಶ್ರೀಶನೇ ತಪ್ಪುಗಾರನಾಗಿದ್ದರೆ ಅವನು ನನ್ನ ಮನೆಯಲ್ಲಿ ಕಾಲಿಡದಂತೆ ಮಾಡುವೆನು. ”

ಗೋಕುಲದಾಸನು ನವಕುಮಾರನ ಪಾದದ ಮೇಲೆ ಕೈಯಿಟ್ಟು “ ಒಡೆಯರೇ, ಈ ಪಾದಸಾಕ್ಷಿ. ನಾನೆಷ್ಟು ಮಾತ್ರವೂ ಸುಳ್ಳು ಹೇಳಿಲ್ಲ. ಈ ಸಮಯದಲ್ಲಿ ನಾನು ಸುಳ್ಳು ಹೇಳಿದ್ದಾದರೆ ಇದ್ದೊಬ್ಬ ಮಗನು ನನಗೆ ದಕ್ಕಬೇಡ ! ” ಎಂದು ಯಾತಕ್ಕೂ ಹೇಸದ ಆ ನರಾಧಮನು ನುಡಿದನು.

ಇದನ್ನು ಕೇಳಿಯಂತೂ ನವಕುಮಾರನ ಸಂಶಯವು ದೃಢವಾಗಿ ಅವನು ಆವೇಶದಂದ “ ಶ್ರೀಶಾ ! ಕೃತಘ್ನಾ, ನನ್ನ ಮೇಲೆ ನೀನು ದ್ರೋಹ ಮಾಡಬೇಕೆನ್ನುವಿಯಾ ? ಇಂಥ ಸರ್ಪವನ್ನು ಸಾಕಿದವನಾದ ನಾನೇ ಮೂಢನು ! ” ಎಂದು ಆವೇಶದಿಂದ ಉದ್ಗಾರ ತೆಗೆದನು.

“ ಧನಿಯರೆ, ತೋಯಿಸಿಕೊಂಡ ಬಳಿಕ ಮಳೆಯ ಅಂಜಿಕೆಯೇಕೆ ? ಶ್ರೀಶನು ಇನ್ನೊಂದು ದೊಡ್ಡ ಅಪರಾಧ ಮಾಡಿದ್ದಾನೆ. ಅದನ್ನು ಹೇಳಲಿಕ್ಕೆ ಕೂಡಾ ನನಗೆ ನಾಚಿಕೆ ಬರುತ್ತದೆ. ಹೇಳೆಂದರೆ ಹೇಳುತ್ತೇನೆ.”

“ ಏನಿದ್ದದ್ದು ಹೇಳಿಬಿಡಪ್ಪಾ ! ಆಗಿ ಹೋಗಲಿ ! ”

“ ರಂಗಪಂಚಮಿಯ ದಿವಸ ನರೇಂದ್ರನೂ ನಮ್ಮ ಸಣ್ಣ ಯಜಮಾನರೂ ಕೂಡಿ ಕಿವಿಗೆ ಕಿವಿಹಚ್ಚಿ ಮಾತಾಡಿದ ಬಳಿಕ, ಶ್ರೀಶನೆದ್ದು ಹೇಮಲತಾದೇವಿಯ ಬಳಿಗೆ ಹೋಗಿ ‘ ಹೇಮಲತಾ, ನರೇಂದ್ರನ ಮೇಲೆ ಓಕಳಿ ಹಾಕು ’ ಎಂದು ಹೇಳಿ ಆ ಹುಡುಗೆಯನ್ನು ಆಗ್ರಹದಿಂದ ನರೇಂದ್ರನ ಕೋಣೆಯಲ್ಲಿ ನೂಕಿದನು. ಪಾಪ ! ಹೇಮಲತಾದೇವಿಯು ನರೇಂದ್ರನ ಕೋಣೆಯಲ್ಲಿ ಹೋದ ಕೂಡಲೇ, ಆ ಉದ್ದಾಮನು ಅವಳನ್ನು ಬಲಾತ್ಕಾರದಿಂದ ಚುಂಬಿಸಿದ್ದನ್ನು ಅಲ್ಲಿಯೇ ಕಿಟಕಿಯ ಬಳಿಯಲ್ಲಿ ನಿಂತು ನಾನು ನೋಡಿದೆನು.

ಶಿವಾ! ಶಿವಾ! ಏನು ಅತ್ಯಾಚಾರವಿದು? ಇಂಥ ಕೃತ್ಯಕ್ಕೆ ಶ್ರೀಶನು ಅನುಕೂಲನಾಗಬಹುದೇ?''

ಈ ದುರ್ಧರವಾದ ವರ್ತಮಾನವನ್ನು ಕೇಳಿ ನವಕುಮಾರನ ಸರ್ವಾಂಗಕ್ಕೆ ಪಂಜು ಹಚ್ಚಿದಂತೆ ವ್ಯಥೆಯಾಯಿತು. ಅವನು ಎದ್ದು ನಿಂತು ಹುಚ್ಚನಂತೆ ಎರಡೂ ಕೈಗಳನ್ನು ಮೇಲಕ್ಕೆ ಎತ್ತಿ ಮುಗಿಲು ನೋಡುತ್ತ ''ಅಯ್ಯೋ ಶ್ರೀಶಾ! ದುಷ್ಟಾ! ನೀನಿದೇನು ಮಾಡಿದಿ? ದುರಾತ್ಮಾ, ನಿನ್ನನ್ನು ಸೀಳಿಸಿ ಹಾಕುತ್ತೇನೆ.'' ಎಂದು ಅವನು ಕರಕರ ಹಲ್ಲು ತಿಂದು ಎದೆ ಎದೆ ಬಡಕೊಂಡನು.

"ದೇವರೂ, ಸ್ವಲ್ಪ ಶಾಂತರಾಗಿರಿ. ಈ ಸಂಗತಿಯನ್ನು ನೀವು ಆವೇಶದಲ್ಲಿ ಪ್ರಚಾರಗೊಳಿಸಿದರೆ ಜನರು ಹೇಮಲತಾದೇವಿಗೆ ಹೆಸರಿಡುವರು. ಮದುವೆಯಾಗುವ ಮಗಳು ಆಕೆ. ನೀವು ಈ ದಿವಸ ಯಾವ ಮಾತೂ ತೆಗೆಯದೆ ಸುಮ್ಮನೆ ಇರ್ರಿ. ನಾಳೆ ನಾನು ಮತ್ತೆ ನಿಮ್ಮಲ್ಲಿಗೆ ಬಂದು ಏನಾದರೂ ಆಲೋಚನೆ ಹೇಳಿ ಶ್ರೀಶನನ್ನು ಹೊರಗೆ ಹಾಕುವ ಹಂಚಿಕೆ ಹೇಳುತ್ತೇನೆ. ನೀವೀಗಲೇ ಮನೆಯಲ್ಲಿ ಹೆಚ್ಚು ಕಡಿಮೆ ಮಾತಾಡಿದರೆ ಸುಶೀಲಾದೇವಿಯರಾಗಲಿ, ಹೇಮಲತಾದೇವಿಯರಾಗಲಿ ಅಪಮಾನ ಸಹಿಸದೆ ಜೀವಕ್ಕೆ ಏನಾದರೂ ಅಪಾಯ ಮಾಡಿಕೊಂಡಾರು."

ನವಕುಮಾರನು "ಉಶ್ಶ್" ಎಂದು ನೆಲಕ್ಕೆ ಕುಳಿತು "ಹಾಗೇ ಆಗಲಿ ಗೋಕುಲದಾಸ. ಏನು ಮಾಡುತ್ತೀಯೋ ಮಾಡು" ಎಂದು ಹೇಳಿ ''ಅಯ್ಯೋ, ಶ್ರೀಶಾ!" ಎಂದು ಉದ್ಗಾರ ತೆಗೆದು ಆ ಅವಿಚಾರಿಯಾದ ಜಮೀನದಾರನು ತನ್ನ ಎರಡೂ ಕೈಗಳನ್ನೆತ್ತಿ ನೆಲಕ್ಕೆ ಬಡೆದನು.

## ಹನ್ನೊಂದನೆಯ ಅಧ್ಯಾಯ

## ಏನು ಸಮಾಚಾರವದು ?

अहो खल भुजंगस्य विचित्रोयं वधक्रमः
एकस्य दशतेश्चोत्र अन्यः प्राणैर्वियुज्यते

ಚೈತ್ರಮಾಸದ ಆರಂಭದಲ್ಲಿ ಬೇಟೆಯಾಡಲಿಕ್ಕೆ ಹೋಗುವದು ಎಲ್ಲ ದೇಶಗಳಲ್ಲಿಯೂ ಸಾಂಪ್ರದಾಯವುಂಟು. ಮಳೆಯ ಉಪದ್ರವವಿಲ್ಲ; ಕೆಟ್ಟ ಗಾಳಿಯಿಲ್ಲ, ವನಗಳೆಲ್ಲ ಚಿಗಿತು ಹೂವಾಗಿ ವಿಚಿತ್ರವಾದ ಶೋಭೆಯನ್ನು ತಳೆದ ಸಮಯದಲ್ಲಿ ಉತ್ಸಾಹಯುತರಾದ ಜನರಿಗೆ ಬೇಟೆಗೆ ಹೋಗುವ ಇಚ್ಛೆಯಾಗುವದು ಸಹಜವೇ.

ರಾಜಮಹಾಲ ಪರ್ವತದಲ್ಲಿ ಪ್ರಚುರವಾಗಿ ಬೆಳೆದಿರುವ ಅನೇಕ ಜಾತಿಯ ವೃಕ್ಷಗಳು ಹೂಬಿಟ್ಟು ಬಹು ರಮಣೀಯವಾಗಿ ಕಾಣುತ್ತಿದ್ದವು. ಸುತ್ತಲಿನ ವನೋದೇಶಗಳು ನವಪಲ್ಲವಗಳಿಂದ ಹಚ್ಚಗೆ ಮುರಿಯುತ್ತಿದ್ದವು. ಪರ್ವತರಾಜನ ಉತ್ತಮಾಂಗವನ್ನು ಅಲಂಕರಿಸಿದ ಮಯೂರಗಳು ಷಡ್ಜ ಸ್ವರದಲ್ಲಿ ಹಾಡುತ್ತ ತಮ್ಮ ಚಿತ್ರಮಯವಾದ ಗರಿಗಳನ್ನು ಹರಡಿ ನರ್ತನ ಮಾಡುತ್ತಿದ್ದವು ಕೋಗಿಲೆಯು ತಾನು ತಂದ ವಾರ್ತೆಯನ್ನು ಇತ್ಥಂಭೂತವಾಗಿ ಪಂಚಶರನಿಗೆ ಸಾಂಕೇತಿಕವಾದ ಭಾಷೆಯಿಂದ ಹೇಳುತ್ತಿತ್ತು. ಕೃತ್ರಿಮೋಪಜೀವಿಗಳಾದ ಮನುಷ್ಯನ ಸಮಾಚಾರವನ್ನರಿತುಕೊಳ್ಳುವದಕ್ಕೆ ಚಾರರಾಗಿ ತಿರುಗುತ್ತಿರುವ ಕಡಿಮೆ-ಮೃಗಗಳೂ ತಂದ ವರ್ತಮಾನವನ್ನು ಕೇಳಿ ಗುಹೆಯಲ್ಲಿರುವ, ತನ್ನ ಸ್ವಸ್ಥಾನದಲ್ಲಿ ಮಲಗಿದ ಮೃಗರಾಜನು ಗರ್ವೋದ್ರೇಕದಿಂದ ಗರ್ಜಿಸಿ ಶತ್ರುಗಳನ್ನು ಸಮರಕ್ಕೆ ಆಹ್ವಾನಮಾಡುತ್ತಿದ್ದನು. ಹೀಗೆ ರಮಣೀಯವಾಗಿ ತೋರುವ ರಾಜಮಹಾಲಿನ ಪರ್ವತಕ್ಕೆ ನರೇಂದ್ರನಾಥನೂ, ಶ್ರೀಶಚಂದ್ರನೂ ಬೇಟೆಗಾಗಿ ಹೊರಟರು.

ನೂರಾರು ಜನ ಬಂಟರು ನಾವೆಗಳಿಂದ ಗಂಗಾನದಿಯನ್ನು ದಾಟಿ ಆ ಪರ್ವತದ ಕಡೆಗೆ ನಡೆದಿದ್ದರು. ಮುಂದೆ ಅವರು ಬೇರೆ ಬೇರೆ ಗುಂಪಾಗಿ ಆ ಪರ್ವತದ ಎಲ್ಲ ಭಾಗಗಳನ್ನು ಆಕ್ರಮಿಸಿ "ಹುಯ್ ಹಾಃ!, ಕೀ ಹೊ ಹೂಃ!, ಹಲಲಲ!" ಎಂದು ಸ್ಫೂರ್ತಿಯಿಂದ ಕೂಗಾಡಿದರು. ಕಹಳೆ,

ಕೊಂಬು, ರಣಹಲಿಗೆಗಳ ಘನವಾದ ನಿನಾದವೆಸಗಿತು. ನಾಯಿಗಳ ಹಿಂಡು ಗಳು ಒಳಿತಾಗಿ ಭೋಂಕರಿಸಿದವು. ಘೋರತರವಾದ ಈ ಧ್ವನಿಗಳ ಸಮುಚ್ಚಯಕ್ಕೆ ವನದಲ್ಲಿಯ ಸತ್ವಗಳೆಲ್ಲ ಬೆದರಿ ಎದೆಯೊಡೆದು ಎಲ್ಲಿಗೆ ಹೋಗಬೇಕೆಂಬದನ್ನರಿಯದೆ ದಿಕ್ಕೆಟ್ಟು ನಾಲ್ಕೂ ಕಡೆಗೆ ಓಡಾಡತೊಡಗಿದವು. ಹುಲ್ಲೆ, ನರಿ, ಮೊಲ, ಮಿಕ ಮುಂತಾದ ಬೇಟೆಗಳು ವಿಪುಲವಾಗಿ ಎದ್ದದ್ದು ಕಂಡು ಬೇಟೆಗಾರರು ಹರ್ಷಾತಿರೇಕದಿಂದ ಮತ್ತಿಷ್ಟು ಕೂಗಿದರು. 'ಜಡ ಜಡ್ಡಿ ನಕನಕ ಜಡ್ಡಿ ನಕನಕ' ಎಂದು ರಣಹಲಿಗೆಯವರು ಆರ್ಭಟಿಯಿಂದ ಬಾರಿಸುವ ಕರ್ಣಕಟುವಾದ ಧ್ವನಿಗಳು ಗುಹೆಗಳಲ್ಲಿ ಪ್ರತಿಧ್ವನಿಗೊಡಲಾಗಿ, ತಮ್ಮ ಹಿಂದ್ಗಡೆಯೇ ಯಾರೋ ಭಯಂಕರವಾಗಿ ಬಾರಿಸುತ್ತಿರುವರೆಂಬ ಭ್ರಮಕ್ಕೆ ಅಲ್ಲಿದ್ದ ಹುಲಿಗಳು ಒಳಿತಾಗಿ ಕೆರಳಿ ರಭಸದಿಂದ ಹೊರಬಿದ್ದವು. ನಿದ್ರಾಲಸನಾದ ವೃದ್ಧ ಜಾಂಬವಂತನೊಬ್ಬನು ತನ್ನ ನಿದ್ದೆಯನ್ನು ಕೆಡಿಸಿದ ಉದ್ಧತರಾರೆಂದು ಕ್ರುದ್ಧನಾಗಿ ಎದ್ದು ಹೊರಬಿದ್ದು ಬಂದನು.

ಸಂಗಡಲೆ ನೂರಾರು ಬೇಟೆಯ ಬೀಸುಬಡಿಗೆಗಳು ಭಂವ್ವೆಂದು ಹೊರ ಟವು. ತುಬಾಕಿಗಳು ಧಡ ಧಡ್ಲಲ್ಲನೆ ಹಾರಿದವು. ಹುಲಿಗಳ ಗರ್ಜನೆಯೂ, ಮೃಗಗಳ ಆರ್ತಸ್ವರವೂ, ಬೇಟೆಗಾರರ ಹುಯ್ಲೂ ನಾಯಿಗಳ ಭಯಂಕರ ವಾದ ಬೊಗಳೂ ಎಣ್ಡಿಸೆಯಲ್ಲಿ ಇಡುಗಿಕೊಂಡವು. "ತರಬು, ತರಬು, ಬಿಡಬೇಡ ಬಿಡಬೇಡ, ವಃಹ್ವಾ, ಶಾಬಾಸ್!" ಮುಂತಾದ ಬೇಟೆಗಾರರ ಆವೇಶದ ಉದ್ಗಾರಗಳನ್ನು ಕೇಳಿ ಪರ್ವತರಾಜನು ತಾನೂ ಸ್ಫೂರ್ತಿಯಿಂದ ಕೂಗುತ್ತಿರುವನೋ ಎಂಬಂತೆ ಕಂದರದರಿಗೆಳೆಲ್ಲ ಪ್ರತಿಧ್ವನಿಗೊಟ್ಟವು.

ಇದು ತಗ್ಗು ಇದು ದಿನ್ನೆ ಎಂಬ ವಿಚಾರವನ್ನೆಷ್ಟು ಮಾತ್ರವೂ ಮಾಡದೆ ಕುದುರೆಯವನು ರಭಸದಿಂದ ಗಾಳಿಯಂತೆ ತನ್ನ ಕಡವವನ್ನು ಓಡಿಸುತ್ತಿದ್ದನು. ಇದು ಕಂಟಿ ಇದು ಮುಳ್ಳು ಎಂಬದರ ಎಚ್ಚರವಿಲ್ಲದೆ ಬಂಟರು ಧುಮುಕಿಟ್ಟು ಓಡುತ್ತಿದ್ದರು. "ಶಾಬಾಸ್ ಕನ್ಹಯ್ಯಾ! ಒಳ್ಳೇ ಏಟು ಬಿಗಿದಿ! ಬಾರೆಲೆ ಹುಲಿರಾಜ, ಈ ಬರ್ಚಿಯ ಹೊಡತವನ್ನು ತಾಳಿಕೋ!" ಎಂದು ಹುಲಿಯ ಎದುರಿನಲ್ಲಿಯೇ ನಿಂತು ಅದರ ವಿಕ್ರಾಳ ವಾದ ಮುಖದಲ್ಲಿ ನರೇಂದ್ರನು ಬರ್ಚಿಯನ್ನು ಚುಚ್ಚಿ ಅದನ್ನು ಕೆಡವಿದನು. "ಥೂ, ಹೇಡೀ! ಆ ಬೆರ್ಚನ್ನು ಹಾಗೆ ಬಿಡಬಹುದೇ?" ಎಂದೊಬ್ಬ ಭಟನು

ತಾನು ಮುಂದಾಗಿ ಬಂದು ಗುಂಡಿಲೆ ಆ ಚಿರ್ಚವನ್ನು ಕೆಡವಿದನು. “ ಬೇಗ ಬನ್ನಿರಿ ! ಬೇಗ ಬನ್ನಿರಿ !! ಬ್ರಿಜಲಾಲನು ಕರಡೆಪ್ಪನವರ ಕೂಡ ಕುಸ್ತೀ ಹಿಡಿದಿರುವನು,” ಎಂದು ನಾಲ್ಕು ಜನರು ಕೂಡಿ ಬ್ರಿಜಲಾಲನನ್ನು ಬಿಡಿಸಿ ಕೊಂಡು ಕರಡೆಯನ್ನು ಕೊಂದರು.

ಹೀಗೆ ಇಳಿಹೊತ್ತಿನವರೆಗೆ ಬೇಟೆಯು ಉತ್ಸಾಹದಿಂದ ನಡೆಯಿತು. ಪ್ರಚಂಡವಾದದ್ದೊಂದು ಹುಲಿಯೂ, ಮೂರು ನಾಲ್ಕು ಚಿರ್ಚುಗಳೂ, ಹತ್ತೆಂಟು ನರಿಗಳೂ ಕೊಲ್ಲಲ್ಪಟ್ಟವು. ನಿದ್ದೆಗೇಡಾದ ಕರಡೆಪ್ಪನು ಕಾಳನಿದ್ರೆಯನ್ನು ಹೊಂದಿ ಮುಸುಕದಂತೆ ಬಿದ್ದುಕೊಂಡನು. ಬೇಟೆಗಾರರು ಹೊಡೆದ ಮೊಲಪುಲ್ಲೆಗಳಿಗಂತೂ ' ಎಣಿಕೆಯೇ ಇದ್ದಿಲ್ಲ. ಕಹಳೆಯವನು ಊದಿ ಇನ್ನು ಬೇಟೆ ಸಾಕೆಂದು ಸೂಚಿಸಿದ ಬಳಿಕ ಎಲ್ಲ ಭಟರೂ ಒಂದಾಗಿ ಕೂಡಿ ಊರ ಹಾದೀ ಹಿಡಿದು ಬಂದರು.

ಬೇಟೆಯುವರು ನಾವುಗಳಲ್ಲಿ ಕುಳಿತುಕೊಂಡು ನದಿ ದಾಟಿ ಬರುತ್ತಿರುವದನ್ನು ಊರ ಜನರು ಕಂಡು ಇದಿರುಗೊಳ್ಳಲಿಕ್ಕೆ ನದಿಯ ದಂಡೆಗೆ ಬಂದು ನಿಂತರು. ಭಟರೆಲ್ಲರೂ ನಾವೆಗಳಿಂದಿಳಿದು ಘಾಟಿನಲ್ಲಿ ಸ್ನಾನ ಮಾಡಿ ಬಟ್ಟೆಗಳನ್ನುಟ್ಟುಕೊಂಡು ಊರವರು ತಂದ ಬುತ್ತಿಗಳನ್ನುಂಡು ಲಾವಣಿಗಳನ್ನು ಹಾಡುತ್ತ ಕುಳಿತುಕೊಂಡರು. ಬಳಿಕ ಬೇಟೆಯ ಮೆರವಣಿಗೆಯು ಸಿದ್ಧತೆಯಾಗಲಾರಂಭಿಸಿತು.

ಹುಲಿರಾಜನು ಈಗ ಹಾಕಲುದ್ಯುಕ್ತನಾಗಿರುವನೋ ಎಂಬ ಹಾಗೆ ಆ ಸತ್ವಶಾಲಿಯ ದೇಹವನ್ನು ಒಂದು ಬಂಡಿಯ ಮೇಲೆ ಕಟ್ಟಿ ಅದಕ್ಕೊಂದು ದೊಡ್ಡ ಹೂವಿನ ಮಾಲೆ ಹಾಕಿದರು. ಹಿಂದಿನ ಬಂಡಿಗಳಲ್ಲಿ ಚಿರ್ಚಗಳ ಮೇಳೆ. ಅವುಗಳ ಹಿಂದೆ ಗೊಂಗಡೀ ಹೊದ್ದುಕೊಂಡಿದ್ದ ಕರಡೆಪ್ಪನವರು ತಲೆಗೆ ದೊಡ್ಡ ರುಮಾಲು ಸುತ್ತಿಕೊಂಡು ಕುಳಿತಿದ್ದರು. ಎರಡು ದೊಡ್ಡ ಗಣಿಗಳಿಗೆ ದೊಡ್ಡ ಹಗ್ಗವನ್ನು ಅಡ್ಡವಾಗಿ ಕಟ್ಟಿ, ಆ ಹಗ್ಗಕ್ಕೆ ನರಿಗಳನ್ನು ಸಾಲುಹಿಡಿದು ಇಳಿಬಿಟ್ಟು ಕಟ್ಟಿದ್ದರು. ಅದರ ಹಿಂದೆ ಹುಲ್ಲೆಗಳ ಸಾಲು; ಅದರ ಹಿಂದೆ ಮೊಲಗಳ ಸಾಲುಗಳಿದ್ದವು. ಮೂರುಸಂಜೆಯ ಮಬ್ಬಾದ ಕೂಡಲೆ ಮೆರವಣಿಗೆಯು ಹೊರಟಿತು. ನೂರಾರು ದೀವಟಿಗೆಗಳ ಬೆಳಕು ಎಲ್ಲ ಕಡೆಯಲ್ಲಿಯೂ ಬಿದ್ದಿತು. ಹುಲಿರಾಜನ ಮುಂದೆ ನಗಾರಿ, ಹಲಿಗೆ, ಸನಾಯಿ,

ಬಜಂತ್ರಿ ಮುಂತಾದ ವಾದ್ಯಗಳನ್ನು ಒಳಿತಾಗಿ ಬಾರಿಸುತ್ತಿದ್ದರು. ಮೈಗೆ ಹಳದೀ ಮಣ್ಣು ತಿಕ್ಕಿಕೊಂಡು ತಲೆಯಲ್ಲಿ ಹೂವಿನ ಟೊಂಗೆಗಳನ್ನು ಇಟ್ಟು ಕೊಂಡ ಹುಡುಗರು ಹಲಿಗೆಯವರ ತಾಲಕ್ಕೆ ಸರಿಯಾಗಿ ನೆಲ ಅದುರುವಂತೆ ಉತ್ಸಾಹದಿಂದ ಕುಣಿಯುತ್ತಿದ್ದರು.

ಎಣಿಕೆಯಿಲ್ಲದ ದೀವಟಿಗೆಗಳ ಬೆಳಕಿನಲ್ಲಿ ಒಳ್ಳೇ ವೈಭವದಿಂದ ಬರುತ್ತಿರುವ ಬೇಟೆಯ ಮೆರವಣಿಗೆಯನ್ನು ನೋಡುವದಕ್ಕಾಗಿ ಬೀರನಗರದ ಸ್ತ್ರೀಯರು ಮಾಳಿಗಿ ಹತ್ತಿ ನಿಂತುಕೊಂಡಿದ್ದರು. ಕೆಲವರು ಹುಲಿರಾಜನ ಭಯಂಕರವಾದ ವೇಷವನ್ನು ಕಂಡು ಅರಿದುಬಟ್ಟು ನೋಡುತ್ತಿದ್ದರು. ಕೆಲವರು ಕರಡೆಪ್ಪನ ಸಡಗರವನ್ನು ಕಂಡು ನಗುತ್ತಿದ್ದರು. ತಮ್ಮ ಪ್ರಿಯಕರರು ಹುರುಪಿನಿಂದ ಕುಣಿಯುತ್ತಿರುವದನ್ನು ಕಂಡು, ಕೆಲ ಜನ ಯುವತಿಯರು ಮಂದಹಾಸಗೈಯುತ್ತಿದ್ದರು. ಉಬ್ಬಿನಿಂದ ಕುದುರೆಗಳನ್ನೇರಿಕೊಂಡು ಬರುತ್ತಿರುವ ನರೇಂದ್ರ, ಶ್ರೀಶಚಂದ್ರರ ದಿವ್ಯವಾದ ಮೂರ್ತಿಗಳನ್ನು ಕಂಡು ವೃದ್ಧರಾದ ಕೆಲಜನ ಸಾಧ್ವಿಯರು ಮೆಲಕು ಮುರಿದು ಅವರನ್ನು ಹರಸಿದರು.

ಮೆರವಣಿಗೆಯು ಅರಮನೆಯ ಮುಂದೆ ಬಂದ ಕೂಡಲೆ, ದಾಸಿಯರು ನರೇಂದ್ರನಾಥ ಶ್ರೀಶಚಂದ್ರರಿಗೆ ಕದಲಾರತಿಯನ್ನು ಮಾಡಿದ ಬಳಿಕ ಸೇವಕರು ಕುದುರೆಗಳ ಕಡಿವಾಣಗಳನ್ನು ಹಿಡಿದು ವಿಜಯಿಗಳಾದ ತಮ್ಮ ಯಜಮಾನರನ್ನು ಇಳಿಸಿಕೊಂಡರು.

ತಾನಿನ್ನು ಕಕ್ಕನನ್ನು ಕಂಡು ಮೃಗಯೆಯ ವೃತ್ತಾಂತವನ್ನು ಹೇಳಿ ಅವರನ್ನು ಸಂತೋಷಗೊಳಿಸಬೇಕೆಂದು ಶ್ರೀಶಚಂದ್ರನು ಒಳ್ಳೇ ಉಬ್ಬಿನಿಂದ ಪಾವಟಿಗೆಗಳನ್ನೇರಿ ನವಕುಮಾರನ ಬಳಿಗೆ ಬಂದನು. ಆದರೆ ತನ್ನ ಪರೋಕ್ಷದಲ್ಲಿ ನೀಚನಾದ ಗೋಕುಲದಾಸನು ನವಕುಮಾರನ ಕಿವಿಯನ್ನು ಊದಿ ಇಟ್ಟದ್ದು ಪಾಪ, ಶ್ರೀಶಚಂದ್ರನಿಗೇನು ಗೊತ್ತು! ಅವನು ವಿನಯದಿಂದ ನವಕುಮಾರನಿಗೆ ನಮಸ್ಕರಿಸಿ ನಿಲ್ಲುವಷ್ಟರಲ್ಲಿಯೇ ನವಕುಮಾರನು ಕೋಪಾವೇಶದಿಂದ "ನೀಚಾ ನಡೆಯುತ್ತ! ನೀನು ನನ್ನ ಕಣ್ಣೆದುರಿಗೆ ನಿಲ್ಲಬೇಡ!" ಎಂದು ಗದ್ದರಿಸಿದನು.

ಶ್ರೀಶನು ಆಶ್ಚರ್ಯಚಕಿತನಾಗಿ "ಕಾಕಾ" ಎಂದು ಸಂಬೋಧಿಸಿ

ದನು. “ ದುರಾತ್ಮಾ, ನೀನು ಮಗನಲ್ಲ; ನಾನು ಕಕ್ಕನಲ್ಲ. ಈಗಿಂದೀಗಲೇ ನೀನು ಮನೆ ಬಿಟ್ಟು ನಡೆ! ”

“ ನಾನು ಮಾಡಿದ ತಪ್ಪಾದರೂ ಏನು ? ” ಎಂದು ಶ್ರೀಶನು ವಿಚಾರ ಮೂಢನಾಗಿ ಕೇಳಿದನು.

“ ತಪ್ಪೇನು, ಸರ್ಪನೆ ! ನಿನ್ನನ್ನು ಸಾಕಿದ್ದಕ್ಕಾಗಿ ನನ್ನನ್ನು ಕಚ್ಚಿ ಮೇಲೆ ತಪ್ಪೇನೆಂದು ಕೇಳುವಿಯಾ ? ನಡೆ ಹೊರಗೆ. ಇಂದು ಈ ಮನೆಯಲ್ಲಿ ನೀನು ನಿಂತು ನೀರು ಕುಡಿಯಲಾಗದು. ”

ಈ ಗದ್ದಲವನ್ನು ಕೇಳಿ ಸುಶೀಲಾದೇವಿಯು ಅಲ್ಲಿಗೆ ಧಾವಿಸಿ ಬಂದು ನವಕುಮಾರನ ಆವೇಶವನ್ನೂ, ಶ್ರೀಶನ ಖಿನ್ನವಾದ ಮುಖವನ್ನೂ ಕಂಡು “ ಏನು ಸಮಾಚಾರವದು ? ” ಎಂದು ತನ್ನ ಪತಿಯನ್ನು ಕೇಳಿದಳು.

“ ಈ ಮಾತಿನಲ್ಲಿ ನೀನು ಬರಬೇಡ. ಸುಮ್ಮನೆ ಒಳಗೆ ನಡೆ. ಇದೆಲ್ಲ ನಿನ್ನ ಸಲಿಗೆಯ ಫಲವು ! ” ಎಂದು ನವಕುಮಾರನು ಕಣ್ಣು ಕೆಂಪಗೆ ಮಾಡಿ ನುಡಿದನು.

“ ಏನು ಹಾಗಂದರೆ ? ” ಎಂದು ಆ ಸಾಧ್ವಿಯು ಚಕಿತಳಾಗಿ ಕೇಳಿದಳು.

“ ಹಾಗಂದರಿಲ್ಲ ಹೀಗಂದರಿಲ್ಲ. ಈ ರಾಕ್ಷಸನು ಈಗಲೆ ನನ್ನ ಮನೆ ಬಿಟ್ಟು ಹೋಗಲೇಬೇಕು.

ಶ್ರೀಶನಿಗೆ ಅತಿಶಯವಾದ ಕೋಪ ಬಂದಿತು; ಅವನು ಹಿಂದಿರುಗಿ ನವಕುಮಾರನ ಮುಖವನ್ನು ಕೂಡ ನೋಡದಲೆ ತನ್ನ ಖಡ್ಗವನ್ನು ತೆಗೆದುಕೊಂಡು ಧಡಧಡನೆ ಪಾವಟಿಗೆಗಳನ್ನು ಇಳಿದವನೇ ಕುದುರೆಯನ್ನೇರಿಕೊಂಡು ಊರು ಬಿಟ್ಟು ಎತ್ತಲೋ ಧಾವಿಸುತ್ತ ನಡೆದನು.

“ ಶ್ರೀಶಾ, ಅಪ್ಪಯ್ಯಾ, ಎಲ್ಲಿಗೆ ಹೋಗುತ್ತೀ ? ಹೋಗಬೇಡ ನನ್ನ ಆಣೆಯಿದೆ. ” ಎಂದು ಸದ್ಗದಿತಕಂಠೆಯಾದ ತನ್ನ ಮಾತೆಯು ನುಡಿಯನ್ನಾಗಲಿ, “ ಅಣ್ಣಾ ಹಾಗೇಕೆ ಹೋಗುತ್ತೀಯೋ ಬಾರೋ ಅಣ್ಣಾ, ” ಎಂದು ಅಳುತ್ತ ಬಾರೆಂದು ಕರೆಯುತ್ತಿರುವ ತಂಗಿಯ ಮಾತನ್ನಾಗಲಿ ಅವನು ಲೆಕ್ಕಿಸದೆ ಹೋದದ್ದು ಕಂಡು ಆ ತಾಯಿಮಕ್ಕಳು ಹಲುಬಿ ಹಲುಬಿ ಮರುಗಿದರು. ಹೇಮಲತೆಯು ತಂದೆಯನ್ನು ಒಳಿತಾಗಿ ನಿಂದಿಸಿ ಶ್ರೀಶನ

ಗುಣಗಳನ್ನು ನೆನೆನೆನೆದು ಅತ್ತಳು, "ನನ್ನ ಮಗನನ್ನು ಏನು ಕಾರಣ ಹೊರಗೆ ಹಾಕಿದಿರಿ? ಗೋಕುಲದಾಸನ ಮಾತು ಕೇಳಿ ಹೀಗೆ ನಿಮ್ಮ ಕಾಲ ಮೇಲೆ ನೀವೇ ಕಲ್ಲುಹಾಕಿಕೊಂಡಿರಲ್ಲ?" ಎಂದು ಸುಶೀಲಾದೇವಿಯು ನವಕುಮಾರನನ್ನು ಕುರಿತು ಕೇಳಿದಳು. ಅವನು ಒಂದೂ ಮಾತಾಡದೆ ಸುಮ್ಮನಿದ್ದನು.

## ಹನ್ನೆರಡನೆಯ ಅಧ್ಯಾಯ

## ವಿಯೋಗದ ವ್ಯಸನವು

ಆ ರಾತ್ರಿ ನವಕುಮಾರನ ಮನಸ್ಸಿಗೂ ಸ್ವಾಸ್ಥ್ಯವಿರಲಿಲ್ಲ. "ಕೇವಲ ಗೋಕುಲದಾಸನೊಬ್ಬನ ಹೇಳಿಕೆಯ ಮೇಲಿಂದ ನಾನಿದನ್ನೆಲ್ಲ ಮಾಡಿದೆನು. ಇದು ವಿಹಿತವಾಯಿತೋ ಇಲ್ಲವೋ ಕಾಣೆನು." ಎಂದು ಅವನು ಚಿಂತಿಸುತ್ತ ಮಲಗಿ ಬೆಳಗಿನಲ್ಲಿ ಎದ್ದರೂ ಅವನ ಮನಸ್ಸಿಗೆ ಸಮಾಧಾನವಿರಲಿಲ್ಲ. ಎದ್ದು ಮನೆಯಲ್ಲೆಲ್ಲ ಅಡ್ಡಾಡಿ ನೋಡಿದನು. ಎಲ್ಲಿ ಹೋದರೂ ಉದಾಸತನವು ಅವನ ಎದೆ ಹಿಡಿದು ನೂಕಿದಂತಾಗುತ್ತಿತ್ತು. ಮುಖ್ಯ ಗೃಹಲಕ್ಷ್ಮಿಯಾದ ಸುಶೀಲಾದೇವಿಯೇ ಚಿಂತಾಮಗ್ನಳಾಗಿರಲು ಆನಂದವೆಲ್ಲಿ ತೋರುವದು? ಉಲ್ಲಾಸದಿಂದ ನಗುತ್ತಿರುವ ಅವನ ಚತುರೆಯಾದ ಮಗಳು ಬಾಡಿದ ಹೂವಿನಂತಿರುವ ತನ್ನ ಗಲ್ಲದ ಮೇಲೆ ಕೈಯಿಟ್ಟುಕೊಂಡು ಕುಳಿತಿದ್ದಳು. ಸೇವಕರು ಅವನಿಗೆ ಮಾಡಿದ ಪ್ರಣಾಮಗಳಲ್ಲಿ ಆದರವು ತೋರಿಬರಲಿಲ್ಲ. ಶ್ರೀಶನು ಹೊರಟೆದ್ದು ಹೋಗುವಾಗ ನನ್ನ ಮನೆಯ ಸುಖಶಾಂತಿಗಳನ್ನು ಎತ್ತಿಕೊಂಡು ಹೋದನೇನು ಎಂದು ಅವನು ಚಿಂತಿಸಿದನು.

ಹೇಮಲತೆಯು ಚಿಂತಾಕುಲಳಾಗಿ ಕುಳಿತ ಸ್ಥಳಕ್ಕೆ ಅವನು ಮೆಲ್ಲನೆ ಬಂದು "ಹೇಮಾ, ಹೀಗೇಕೆ ವಿಚಾರಗ್ರಸ್ಥಳಾಗಿ ಕುಳಿತಿರುವಿ? ಏನಾಗಿದೆ ನಿನಗೆ?" ಎಂದು ಕೇಳಿದನು.



"ಇನ್ನೇನಾಗಬೇಕು ಅಪ್ಪಾ. ಶ್ರೀಶ ಅಣ್ಣನು ನಿನಗೇನು ಮಾಡಿದ್ದನು ?" ಎಂದು ಗದ್ಗದಕಂಠೆಯಾಗಿ ನುಡಿದ ಹೇಮಲತೆಯ ಕಣ್ಣುಗಳಲ್ಲಿ ಅಶ್ರುಧಾರೆಗಳು ಒತ್ತಿ ಬಂದವು.

"ಅಮ್ಮಾ, ನೀನು ಚಿಕ್ಕವಳು. ನಿನಗೇನು ತಿಳಿದೀತು ? ಶ್ರೀಶನು ಮಾಡಿದ ಅಪರಾಧಗಳನ್ನು ನೆನೆದರೆ ಇನ್ನೂ ನನ್ನ ಮೈ ಉರಿಯುತ್ತದೆ."

"ಏನು ಮಾತಾಡುತ್ತೀರಿ ! ನಮ್ಮ ಅಣ್ಣನು ಎಂದಿಗಾದರೂ ಅಪರಾಧ ಮಾಡಿದವನೇ ? ಮಂದಿಯ ಮಾತು ಕೇಳಿಕೊಂಡು ಧರ್ಮರಾಯನಂಥ ನನ್ನ ಅಣ್ಣನನ್ನು ಹೊರಗೆ ಹಾಕಿದಿರಿ."

"ಯಾರ ಮಾತು ಕೇಳಿದೆನು ನಾನು ಹೇಮಲತಾ ?"

"ನಿಮಗೆ ಗೊತ್ತಿಲ್ಲೇನು ? ಗೋಕುಲದಾಸನ ಮಾತು ಕೇಳಿ ಇಷ್ಟೆಲ್ಲ ಮಾಡಿದಿರಿ; ಅವನ ಹೆಣ ಭಂದಾಗಲಿ !" ಎಂದು ಉದ್ವೇಗದಿಂದ ಹೇಮಲತೆಯು ಲಟಲಟನೆ ಚಿಟಕು ಮುರಿದಳು.

ಹೊರಗೆ ನಿಂತು ಈ ಸಂವಾದವನ್ನು ಕೇಳುತ್ತಿದ್ದ ಸುಶೀಲಾದೇವಿಯು ಹೇಮಲತೆಯನ್ನು ಕುರಿತು "ಹೇಮಾ, ಯಾಕೆ ಜೀವಕ್ಕೆ ಸಂತಾಪ ಮಾಡಿಕೊಳ್ಳುತ್ತೀ ಬಿಡು. ಸುಳ್ಳೇ ಅತ್ತು ದಣುಕೊಳ್ಳಬೇಡ !" ಎಂದು ತುಸು ಆಕ್ಕಸದಿಂದಲೂ, ವಿಷಾದದಿಂದಲೂ ನುಡಿದಳು.

"ಅಳಲಿಕ್ಕೆ ಏನಾಗಿದೆ ?" ಎಂದು ನವಕುಮಾರನು ತುಸು ಗಟ್ಟಿಸಿ ಕೇಳಿದನು.

"ನಾವೇಕೆ ಅಳೋಣ. ದುರ್ದೈವಕ್ಕೆ ಅತ್ತರೆ ಆಗುವದೇನು ?" ಎಂದು ಸುಶೀಲಾದೇವಿಯು ಒಳಕ್ಕೆ ಮಗಳ ಬದಿಗೆ ಬಂದು ನಿಂತು ನುಡಿದಳು.

"ದುರ್ದೈವವೆನ್ನಲಿಕ್ಕೆ ಈಗ ಏನಾಯಿತು ನಿಮಗೆ ?" ಎಂದು ನವಕುಮಾರನು ಹೆಂಡತಿಯನ್ನು ತುಸು ಜರಿದು ಕೇಳಿದನು.

"ಇದಕ್ಕೂ ದುರ್ದೈವವು ಎಂಥದಿರಬೇಕು ? ಗುಣಮಣಿಯಾದ ಶ್ರೀಶಚಂದ್ರನನ್ನು ನೋಡಿಕೊಂಡು, ನನಗೆ ಗಂಡುಮಗನಾಗಲಿಲ್ಲವೆಂಬ ದುಃಖವನ್ನು ನಾನು ಮರೆತಿರುವಾಗ ಅವನಾದರೂ ನನಗೆ ದಕ್ಕಬಾರದೆಂದರೆ

ಪೂರ್ವಜನ್ಮದ ದುಷ್ಕರ್ಮವೆ ಅಲ್ಲವೆ ? " ಎಂದು ಸುಶೀಲಾದೇವಿಯು ವ್ಯಸನದಿಂದ ಕಣ್ಣೊರಸಿಕೊಂಡಳು.

" ನಿರಪರಾಧಿಯಾದವನನ್ನು ಹೊರಗೆ ಹಾಕಲಿಕ್ಕೆ ನಾನೇನು ಕಿವಿಯಲ್ಲಿ ತುತ್ತು ಹಾಕುತ್ತೇನೇನು ? ಶ್ರೀಶನ ದುಷ್ಕೃತ್ಯಗಳು ನಿಮಗೆ ತಿಳಿದೇ ಇಲ್ಲ! ನಾನೇನು ಹೇಳಲಿ ? " ಎಂದು ನವಕುಮಾರನು ತಾನಾಡುವದರಲ್ಲಿ ತನಗೇ ನಂಬಿಗೆ ಇಲ್ಲದೆ ನುಡಿದನು.

" ನನಗೆ ತಿಳಿಯದ ಹಾಗೆ ಶ್ರೀಶನು ಅಪರಾಧ ಮಾಡಿದನೇ ? ನನಗೆ ತಿಳಿದಿಲ್ಲ ; ಊರಲ್ಲಿಯ ಜನರಲ್ಲಿ ಯಾರಿಗೂ ತಿಳಿದಿಲ್ಲ; ನಿಮಗೆ ಸ್ವತಃಕ್ಕೇ ಗೊತ್ತಾಗಿಲ್ಲ; ಎಂಥ ರಾಜ್ಯಕ್ಕೆ ಹೊರತಾದ ಅಪರಾಧಗಳವು ? ಅವನು ಒಳ್ಳೆಯವನಾಗಿದ್ದದ್ದೇ ಅಪರಾಧವಾಗಿದ್ದಿತೇನು ? "

ನವಕುಮಾರನು ನಿರುತ್ತರನಾಗಿ ಸುಮ್ಮನೆ ಕುಳಿತುಕೊಂಡನು.

" ನೋಡಿರಿ. ವಿಚಾರ ತಿಳಿದು ನೋಡಿರಿ. ಗುಣವಂತನೂ, ಚತುರನೂ ಆದ ಆ ಹುಡುಗನು ಎಲ್ಲಿ ಹೋದಲ್ಲಿ ನಾಲ್ಕು ಜನರಿಗೆ ಬೇಕಾದವನೂ ಕೀರ್ತಿವಂತನೂ ಆಗಿರುವನು. ನಮಗೆ ಮಾತ್ರ ವ್ಯಸನವಾಯಿತು! ಕುಲುಕುಲು ನಗುತ್ತ ನನ್ನ ಮುಂದೆ ಬಂದು ಕುಳಿತು ಗೆಳೆಯ ಹಾಗೆ ವಿನಯದ ಮಾತಾಡುತ್ತ ಚಂಡಿಕೆ ಹಿಕ್ಕಿಸಿಕೊಳ್ಳುವ ಮಗನ ಹೊಟ್ಟೆಯಲ್ಲಿ ಎಳ್ಳಷ್ಟಾದರೂ ಕಪಟವಿದ್ದೀತೆ ? " ಎಂದು ನುಡಿದ ಸುಶೀಲಾದೇವಿಯ ಕಣ್ಣುಗಳಲ್ಲಿ ಮತ್ತೆ ಅಶ್ರುಧಾರೆಗಳು ಸುರಿದವು.

ಈ ಪ್ರಸಂಗವು ನವಕುಮಾರನಿಗೆ ಸಾಕುಬೇಕಾಗಿ ಹೋಯಿತು. ಸದ್ಗುಣಗಳ ಪ್ರಭಾವದಿಂದ ತೇಜೋಮಯವಾಗಿ ತೋರುತ್ತಿರುವ ತನ್ನ ಹೆಂಡತಿಯ ಮುಖವು ಅಶ್ರುಕಲುಷಿತವಾದದ್ದು ಕಂಡು ಅವನಿಗೆ ಅತಿಶಯವಾದ ದುಃಖವಾಯಿತು. ಮೆಲ್ಲನೆ ಅಲ್ಲಿಂದೆದ್ದು ಅವನು ಹೊರಗೆ ನಡೆದನು.

ಶ್ರೀಶನೆಲ್ಲಿಗೆ ಹೋದನೆಂಬ ವರ್ತಮಾನವು ನರೇಂದ್ರನಿಗೆ ತಿಳಿದದೆಯೋ ಹೇಗೆಂದು ಕೇಳುವದಕ್ಕಾಗಿ ನವಕುಮಾರನು ಮೆಲ್ಲನೆ ಅವನ ಕೋಣೆಯಲ್ಲಿ ಬಗ್ಗಿ ನೋಡಿದನು. ಆ ತರುಣನು ಗುರ್ರೆಂದು ಕುಳಿತ ಉಗ್ರವಾದ ವ್ಯಾಘ್ರನಂತೆ ಸಿಟ್ಟಾಗಿ ಕುಳಿತದ್ದು ಕಂಡು ಅವನನ್ನು ಮಾತಾಡಿಸಲಿಕ್ಕೆ ನವಕುಮಾರ

ನಿಗೆ ಧೈರ್ಯ ಸಾಲಲಿಲ್ಲ. ಅಲ್ಲಿಂದ ಅವನು ನೆಟ್ಟಗೆ ತನ್ನ ಕೋಣೆಗೆ ಹೋಗಿ ಮಂಚದ ಮೇಲೆ ಬಿದ್ದುಕೊಂಡು ವಿಚಾರದಲ್ಲಿ ನಿಮಗ್ನನಾದನು.

" ನಾನು ಆಡಿದ ಬಿರಿನುಡಿಗಳಿಗೆ ಸ್ವಲ್ಪವಾದರೂ ಪ್ರತ್ಯುತ್ತರವನ್ನು ಕೊಡದಲೆ ಮಾನನಿಧಿಯಾದ ಶ್ರೀಶಚಂದ್ರನು ಥಟ್ಟನೆ ಎದ್ದು ಹೋದನು. ಅಪರಾಧಿಯ ದುರ್ಮುಖವು ಅವನಲ್ಲಿ ಕಂಡುಬರಲಿಲ್ಲ. ಆಕೆಯು (ಹೆಂಡತಿ) ಹೇಳಿದಂತೆ ಅವನ ತಪ್ಪುಗಳು ಅನ್ಯರಿಗೆ ಕಂಡುಬಾರದಲೆ ಗೋಕುಲದಾಸನೊಬ್ಬನಿಗೆ ಹೇಗೆ ತಿಳಿದವು ? ಗೋಕುಲದಾಸನಾದರೂ ಹುಟ್ಟಿಸಿಕೊಂಡು ಹೇಳುವನೇಕೆ ? ಏನಿದೆಯೋ ಏನು ಮಣ್ಣೋ ! "

" ಇಂತಿಷ್ಟು ಅಪರಾಧಗಳನ್ನು ನೀನು ಮಾಡಿರುವಿ. ಅದಕ್ಕೆ ನೀನೇನು ಹೇಳುವಿ ? " ಎಂದು ನಾನು ಅವನನ್ನು ಕೇಳಬೇಕಾಗಿತ್ತು. ಅವನು ಸಮರ್ಪಕವಾದ ಉತ್ತರಗಳನ್ನು ಹೇಳಿದರೂ ಹೇಳುತ್ತಿದ್ದನು.. ಅವನು ದೋಷಿಯಾಗಿರಲಿ, ನಿರ್ದೋಷಿಯಾಗಿರಲಿ ಅವನನ್ನು ವಿಚಾರಿಸದೆ ನಾನು ಹಾಗೆ ಬಿರಿನುಡಿಗಳನ್ನಾಡಿ ಅವನನ್ನು ಹೊರಗೆ ಹಾಕಿದ್ದು ಸರಿಯಾಗ ಲಿಲ್ಲ. 'सहसा विदधीत न क्रियां' ಎಂಬ ಶ್ಲೋಕವನ್ನು ಒಂದು ಲಕ್ಷ ಹಣ ವನ್ನು ಕೊಟ್ಟು ಕೊಂಡುಕೊಂಡ ರಾಜನು ಜಾಣನೇ.

ಸುಶೀಲಾದೇವಿಯು ನರೇಂದ್ರನ ಬಳಿಗೆ ಬಂದು " ನರೇಂದ್ರ, ಇದೇನನರ್ಥವಪ್ಪಾ ! ಶ್ರೀಶನ ಮೇಲೆ ಇಷ್ಟ್ಯಾಕೆ ಸಿಟ್ಟಾಗಿದ್ದರು ? ಅವ ನೇನಾದರೂ ಮಾಡಿದ್ದನೇನು ? " ಎಂದು ಕೇಳಿದಳು.

" ನಾನೇನು ಬಲ್ಲೆನು ಅತ್ಯಾ ? ಶ್ರೀಶನೆಂದಿಗಾದರೂ ಅಪರಾಧವನ್ನು ಮಾಡುವವನೇ ? ಇಷ್ಟು ದಿವಸ ಹೇಗೋ ನಾನು ಈ ಮನೆಯಲ್ಲಿ ಇದ್ದೆನು. ಇನ್ನು ಮೇಲೆ ನಾನೂ ಎಲ್ಲಿಗಾದರೂ ಎದ್ದು ಹೋಗಬೇಕೆಂದು ಮಾಡಿದ್ದೇನೆ."

" ನಿನಗೇನು ಬಂದದೆ ? ಈ ಮನೆಯ ಯಜಮಾನನೇ ನೀನು ! ಶ್ರೀಶನ ವಿರುದ್ಧವಾಗಿ ದುರುಳನಾದ ಗೋಕುಲದಾಸನು ಏನಾದರೂ ಹೇಳಿ ಇಷ್ಟೆಲ್ಲ ಅನರ್ಥವನ್ನು ತಂದಿಟ್ಟಿರಬಹುದು. ನಿನ್ನೆ ಮಧ್ಯಾಹ್ನದಿಂದ ಆ ಚಾಂಡಾಲನು ಯಜಮಾನರೊಡನೆ ಬಹಳೊತ್ತು ಕಿವಿಗೆ ಕಿವಿ ಹಚ್ಚಿ ಮಾತಾ ಡುತ್ತಲಿದ್ದನು."

" ಅತ್ಯಾ, ನರಪಶುವಾದ ಆ ಗೋಕುಲದಾಸನ ಕೃತ್ಯಗಳನ್ನೂ ಅವನ

ಅಂತಸ್ಥ ಹೇತುಗಳನ್ನೂ ನಾನು ಚನ್ನಾಗಿ ಬಲ್ಲೆನು. ನಾನು ಸಾವ ಕಾಶವಾಗಿ ಮಾವನವರ ಮುಂದೆ ಅದನ್ನೆಲ್ಲ ಹೇಳುವೆನು. ಸದ್ಯಕ್ಕೆ ಶ್ರೀಶಚಂದ್ರನು ಹೋದವನು ನೀವೇನು ಕೊಟ್ಟರೂ ಮರಳಿ ಬರುವವ ನಲ್ಲ. ”

“ ಶ್ರೀಶನು ಮರಳಿ ಬರಲಿಕ್ಕಿಲ್ಲವೆಂದಿಯಾ ? ” ಎಂದು ಸುಶೀಲಾ ದೇವಿಯೂ ದುಃಖಾರ್ತೆಯಾಗಿ ಕೇಳಿದಳು.

“ ಮಾವಂದಿರಿಗೆ ತಾವು ಮಾಡಿದ್ದು ತಪ್ಪಾದದ್ದೆಂದೂ, ಶ್ರೀಶನು ನಿರಪರಾಧಿಯೆಂದೂ ಮನವುಟ್ಟಿ ತಿಳಿದ ಹೊರತು ಅವನು ಬರಲಿಕ್ಕಿಲ್ಲ. ”

“ ಯುಕ್ತಿಪ್ರಯುಕ್ತಿಗಳಿಂದ ಗೋಕುಲದಾಸನ ಕಪಟವನ್ನು ಹೊರ ಗೆಡವುವಂತೆ ಮಾಡು ” ಎಂದು ಹೇಳಿ ತನ್ನ ಕೆಲಸಕ್ಕೆ ಹೋದಳು.

ಪಾಪ ! ಜಗತ್ಸುಂದರಿಯು ಓರ್ವಳೆ ತನ್ನ ಕೋಣೆಯಲ್ಲಿ ಚಿಂತಾಕ್ರಾಂತ ಳಾಗಿ ಕುಳಿತಿದ್ದಳು. ತನ್ನ ಚಿಂತೆಯ ಕಾರಣವನ್ನು ಯಾರ ಮುಂದಾದರೂ ಹೇಳುವಂತೆ ಇದ್ದಿಲ್ಲ. ಶ್ರೀಶಚಂದ್ರನಲ್ಲಿ ಕ್ರಮಕ್ರಮದಿಂದ ಅವಳ ಪ್ರೇಮವು ನೆಲೆಗೊಂಡಿತ್ತು. ಶ್ರೀಶನ ದಿವ್ಯವಾದ ರೂಪವನ್ನು ಕಂಡು ಅವಳು ಆನಂದ ಪಡುತ್ತಿದ್ದಳು. ಅವನ ಮುಖದಲ್ಲಿ ತೋರುವ ಎಳೆನಗೆಯನ್ನು ಕಂಡು ಅವಳು ನಾಚುತ್ತಿದ್ದಳು. ಮನೆಯಲ್ಲಿ ಅನೇಕ ಜನ ಸೇವಕರಿದ್ದರೂ ಅವನು ಸ್ನಾನಕ್ಕೆ ಏಳುವದಕ್ಕೆ ಮುಂಚಿತವಾಗಿ ತಾನೇ ನೀರು ತೋಡಿ ಸಿದ್ಧಮಾಡು ತ್ತಿದ್ದಳು. ಅವನು ಸ್ನಾನಮಾಡಿ ಏಳುವದರೊಳಗಾಗಿ ಅವನ ದೋತರಗಳಿಗೆ ನೀರಿಗೆ ಹಾಕಿ ಇಡುವವಳು ಅವಳೇ. ಈ ದಿವಸ ಅಂಥ ಆಸ್ಥೆಯ ಸೇವೆಗಳೆಲ್ಲ ನಿಂತುಹೋದವು. ಅವನ ಮನೋಹರವಾದ ಮುಖವು ಕಾಣಿಸದಾಯಿತು. ಅವಳಿಗೆ ಅನನುಭೂತವಾದ ವಿರಹತಾಪವಾಯಿತು. ನಿರ್ದಯನಾದ ಮದನನು ಒಳಗಿಂದೊಳಗೇ ಶರಸಂಧಾನಗೈದು ಅವಳ ಹೃದಯವನ್ನು ಭೇದಿಸಿ ಪೊಳ್ಳುಮಾಡಿದ್ದನು.

न खलु न खलु बाणः संनिपात्योयमस्मिन्
मृदुनि वधु शरीरे पुष्प राशाविवाग्निः

ಎಂದು ಆ ನಿರ್ದಯನಾದ ಮದನನನ್ನು ತಡೆದು ಬುದ್ಧಿಹೇಳುವವರು ಯಾರು ? ಜಗತ್ಸುಂದರಿಯು ವಿರಹಸಂತಪ್ತಳಾದದ್ದು ಸರಿ. ಪ್ರಿಯತಮನ

ತದೇಕಧ್ಯಾನದಿಂದ ಪ್ರೇಮವು ಹೆಚ್ಚಾಗುವದು ಸಹಜವೇ. ಜಗತ್ಸುಂದರಿಯು ಯಾರೂ ಕಾಣದಂತೆ ಶ್ರೀಶಚಂದ್ರನ ಕೋಣೆಯಲ್ಲಿ ಸೇರಿದಳು.

ಅಲ್ಲಿ ಅಸ್ತವ್ಯಸ್ತವಾಗಿ ಬಿದ್ದಿರುವ ಶ್ರೀಶನ ಒಡವೆಗಳನ್ನೆಲ್ಲ ಅವಳು ಚನ್ನಾಗಿ ಮಾಡಿ ಇಡಲಾರಂಭಿಸಿದಳು. ಪರಿಮಳದಿಂದ ಯುಕ್ತವಾದ ಶ್ರೀಶನ ಸೆಲ್ಲೆಯನ್ನು ಅವಳು ಪ್ರೇಮದಿಂದ ಆಘ್ರಾಣಿಸಿ ಚುಂಬಿಸಿದಳು. ಗೀಚಿ ಹಾಕಿದ ಕಾಗದವನ್ನೊಂದು ಎತ್ತಿ ನೋಡುತ್ತಾಳೆ. ಅದರ ತುಂಬ ಶ್ರೀಶನು "ಜಗತ್ಸುಂದರಿ, ಜಗತ್ಸುಂದರಿ" ಎಂದು ಮುಕ್ತಾಫಲಗಳಂತೆ ಇರುವ ತನ್ನ ಅಕ್ಷರಗಳಿಂದ ಬರೆದಿದ್ದನು. ಮತ್ತೊಂದು ಕಾಗದದ ಮೇಲೆ ಶ್ರೀಶನು ಜಗತ್ಸುಂದರಿಯ ಮೇಲೆ ಇರುವ ತನ್ನ ಪ್ರೇಮದ ವರ್ಣನೆಯನ್ನು ಕವಿತಾ ರೂಪವಾಗಿ ಬರೆದಿದ್ದನು. ಆ ಪ್ರೇಮಪ್ರಬಂಧವನ್ನು ಪ್ರೀತಿಬದ್ಧಳಾದ ಆ ನವತರುಣಿಯು ಮೆಲ್ಲನೆ ಕದ್ದು ತನ್ನ ಕುಪ್ಪಸದಲ್ಲಿ ಇಟ್ಟುಕೊಂಡಳು.

ಅಷ್ಟರಲ್ಲಿ ಹೇಮಲತೆಯು ಒಳಗೆ ಬಂದು "ಜಗತಾ" ಎಂದು ಮಾತಾಡಿಸಿದಳು. ಜಗತ್ಸುಂದರಿಯ ಮೋರೆಯು ಹುಚ್ಚಿಟ್ಟು ಸುರಿಯಿತು. ಸಸ್ಮಿತವಾದ ಲಜ್ಜೆಯುಳ್ಳವಳಾಗಿ "ಏನೂ ಇಲ್ಲ. ಬಾ ಹೇಮಲತಾ" ಎಂದು ಹೇಮಲತೆಯನ್ನು ಕರೆದಳು.

"ನಾನೇನು ಕೇಳಿದೆನೆಂದು ನೀನು 'ಏನೂ ಇಲ್ಲ'ವೆಂದು ಹೇಳಿದಿ ಜಗತ್ಸುಂದರೀ?"

"ಕೇಳಿದ ಹಾಗಾಯಿತು. ನೀನೇನೂ ಕೇಳಲಿಲ್ಲವೇನು?"

"ಕಳ್ಳನ ಜೀವ ಹುಳ್ಳುಳ್ಳಗೆ! ನಿನ್ನ ಮನೋವ್ಯಾಪಾರಕ್ಕಾಗಿಯೇ ಹಾಗೆ ಭ್ರಮಿಷ್ಟಳಂತೆ ಮಾತಾಡುವಿ, ಬಾ ಇನ್ನು ಹೆಣಿಲು ಹಾಕಿಕೊಂಡು ಮೈತೊಳಕೊಳ್ಳುವದಿಲ್ಲವೇ?"

ಜಗತ್ಸುಂದರಿಯು ಲಗಬಗೆಯಿಂದ ತನ್ನ ತಲೆ ಉಗುರಿಸಿಕೊಂಡು "ಹೇಮಾ, ನನ್ನ ತಲೆ ಓರಣವಾಗಿಯೇ ಇದೆ. ನಿನ್ನ ಮೈ ಆಯಿತೇನು?" ಎಂದು ನುಡಿದು ತನ್ನ ಪತ್ರದ ಕಳವು ಹೇಮಲತೆಗೆ ಸಿಕ್ಕಲಿಲ್ಲವೆಂದು ತಿಳಿದು ಸಮಾಧಾನದ ಉಸುರು ಹಾಕಿದಳು.

"ಹಾಗಂದರೇನು ಜಗತ್ಸುಂದರಿ, ನೀನು ಹೆಣಿಲು ಹಾಕಿಕೊಳ್ಳುವದಿಲ್ಲೆಂಬ ಸುದ್ದಿಯನ್ನು ಕೇಳಿ ಶ್ರೀಶಚಂದ್ರನು ಹೋದ ಕಾಲಿಲೆ ತಿರುಗಿ

ಬರುವನೇ ? ” ಎಂದು ವಿಷಾದದಲ್ಲಿ ವಿನೋದವನ್ನು ಬೆರಿಸಿ ಹೇಮಲತೆಯು ನುಡಿದು ನಕ್ಕಳು.

“ ಏನಾದರೂ ಹುಚ್ಚುಚ್ಚು ಮಾತಾಡುವಿ ಆಯಿತು ! ”

“ ಸುಮ್ಮನೆ ಬಾ ! ಹೆಣಿಲು ಹಾಕುತ್ತೇನೆ. ಹುಚ್ಚು ಮತ್ಯಾರದು ! ಅರಿಯದವರ ಮುಂದೆ ಮಾತಾಡಿದಂತೆ ಮಾಡಬೇಡ. ”

“ ಯಾರದು ಯಾರಿಗೆ ಗೊತ್ತಿಲ್ಲ ? ವಿನೋದಕ್ಕೆ ಇದು ಸಮಯ ವಲ್ಲೆಂದು ಬಿಟ್ಟಿರುವೆನು. ಸುಮ್ಮನಿರು ! ” ಎಂದು ಜಗತ್ಸುಂದರಿಯು ಸೆಣಿಸಿ ನುಡಿದಳು.

“ ಜಗತ್ಸುಂದರಿ, ನೀನು ಸಿಟ್ಟಾಗುವದು ಯಾರ ಮೇಲೆ ? ಶ್ರೀಶನು ನೀನಿದ್ದ ಸ್ಥಳವನ್ನು ಬಿಟ್ಟು ದೂರ ಹೋಗಲಾರನು. ನಿನ್ನನ್ನು ಬಿಟ್ಟು ಅನ್ಯರನ್ನು ಲಗ್ನವಾಗುವದಿಲ್ಲೆಂದು ಅವನು ಒಬ್ಬರ ಮುಂದೆ ಆಡಿ ತೋರಿ ಸಿರುವನಂತೆ ? ”

“ ಯಾರ ಮುಂದೆ ಆಡಿ ತೋರಿಸಿರುವರಂತೆ ಹೇಮಾ ? ”

ಅಷ್ಟರಲ್ಲಿ ಸುಶೀಲಾದೇವಿಯು ತನ್ನ ದಾಸಿಯನ್ನು ಕುರಿತು ” ಕುಂದಾ, ಹೇಮಲತಾ ಜಗತ್ಸುಂದರಿಯರು ಎಲ್ಲಿ ಅಡಗಿದರು ನೋಡು ! ಜಗತ್ಸುಂದ ರಿಯೂ ಅತ್ತಲಾಗೇ, ಅವಳನ್ನು ಕರೆಯಲಿಕ್ಕೆ ಹೋದ ಹೇಮಲತೆಯೂ ಅತ್ತಲಾಗೇ ! ಅವರಿಗೆ ಸ್ನಾನ ಪರಿಧಾನಗಳ ಅರಿವೇ ಇಲ್ಲ ” ಎಂದು ಆಜ್ಞೆ ಮಾಡಿದ್ದನ್ನು ಕೇಳಿ ಆ ತರುಣಿಯರೀರ್ವರೂ ಲಗಬಗೆಯಿಂದ ಎದ್ದು ತಮ್ಮ ನೇವೇಥ್ಯ ವಿಧಾನದಲ್ಲಿ ತೊಡಗಿದರು.

## ಹದಿಮೂರನೆಯ ಅಧ್ಯಾಯ

### ತಪ್ಪಿಗೆ ಒಪ್ಪ

ಶ್ರೀಶಚಂದ್ರನು ಆ ರಾತ್ರಿ ತನ್ನ ಕುದುರೆಯನ್ನು ಆವೇಶದಿಂದ ಓಡಿ ಸುತ್ತ ರಾಜಮಹಾಲಿನ ಹಾದೀ ಹಿಡಿದು ನಡೆದನು. ಭಿನ್ನಭಿನ್ನವಾದ ಮನೋವ್ಯಾಪಾರಗಳು ಅವನ ಹೃದಯದಲ್ಲಿ ತಳಕುಮಲಕಾಗಿ ಹೊಯ್ದಾ

ಡುತ್ತಿರುವದರಿಂದ ಅವನಿಗೆ ರಾತ್ರಿಯೆಂಬದರ ಧ್ಯಾನವೂ ಇದ್ದಿಲ್ಲ. ಕತ್ತಲೆಯೆಂಬದರ ಧ್ಯಾನವೂ ಇದ್ದಿಲ್ಲ. ಅವನ ಚಪಲವಾದ ತುರಂಗಮದ ವೇಗಕ್ಕಿಂತಲೂ ಅವನ ವಿಚಾರಗಳು ಹೆಚ್ಚಾದ ವೇಗದಿಂದ ಧಾವಿಸುತ್ತಿದ್ದವು. ನಾನಿನ್ನು ಬಾದಶಹನ ಸೇನೆಯಲ್ಲಿ ಸೇರಿ ಅತುಲವಾದ ಪರಾಕ್ರಮವನ್ನು ತೋರಿಸಿ ನವಕುಮಾರನ ಸಂಪತ್ತನ್ನು ಹೀಯಾಳಿಸುವಂಥ ವೈಭವದಿಂದ ಇರುವೆನು ಎಂದು ಒಮ್ಮೆ ಆಶೆ ತೊಟ್ಟನು. ನವಕುಮಾರನು ನನ್ನ ಮರ್ಯಾದೆಯನ್ನು ತೆಗೆದುಕೊಳ್ಳದೆ ಹಾಗೆಯೇ ಹೋಗೆಂದು ಹೇಳಿದ್ದರೆ ನಾನು ಆನಂದದಿಂದ ಮನೆಬಿಟ್ಟು ಹೊರಟುಹೋಗುತ್ತಿದ್ದೆನು. ನವಕುಮಾರನ ಮಾತು ಕೇಳಿ ಜನರು ನಿಜವಾಗಿ ನನ್ನನ್ನು ನೀಚನೆಂದು ನಂಬುವರಾದೀತೇನು ? ದೇವೀಪುರದ ಜಮೀನದಾರಿಗೆ ಎರವಾದ ಹಾನಿಗಿಂತಲೂ ಜನಾಪವಾದದ ಭೀತಿಯು ನನ್ನನ್ನು ಹೆಚ್ಚಾಗಿ ಬಾಧಿಸುತ್ತಲಿದೆ ಎಂದವನು ವಿಷಾದತೊಟ್ಟನು.

" ಮನೆಯಲ್ಲಿ ಸುಶೀಲಾಮಾತೆಯು ನನ್ನ ವಿಯೋಗಕ್ಕಾಗಿ ವ್ಯಥೆಯನ್ನು ತಾಳಿರಬಹುದು. ಆಕೆಯು ನನ್ನ ಮೇಲೆ ಅತಿಶಯವಾಗಿ ಮಾಡುತ್ತಿರುವ ಮಮತೆಯನ್ನು ನೆನೆದರೆ ಈ ವಿಯೋಗವು ಎಷ್ಟಾದರೂ ನನಗೆ ವ್ಯಸನವನ್ನೀಯುವದು. ಜಗದೀಶಾ, ಜನ್ಮಜನ್ಮಾಂತರಗಳಲ್ಲಿಯೂ ಅಂಥ ಮಾತೆಯನ್ನು ಕೊಡು " ಎಂದವನು ದುಃಖಾರ್ತನಾಗಿ ಬೇಡಿಕೊಂಡನು. " ಅಣ್ಣಯ್ಯಾ ! ಹಾಗೇಕೆ ಹೋಗುವಿಯೋ " ಎಂದು ಆರ್ತಳಾಗಿ ಕೂಗುವ ತಂಗಿಯಾದ ಹೇಮಲತೆಯು ನೆನಪಾಗಿ ಅವನೆದೆಗೆ ಚುರ್ರನೆ ಬರೆ ಕೊಟ್ಟಂತಾಯಿತು.

" ನನ್ನ ಪ್ರೀತಿಗೆ ಪಾತ್ರಳಾದ ಆ ಮೋಹನಾಂಗಿಯಾದ ಜಗತ್ಸುಂದರಿಯ ಮುಖವನ್ನು ನಾನಿನ್ನು ಹೇಗೆ ಕಾಣುವೆನು ? ಅವಳ ಪ್ರೇಮಮಯವಾದ ದೃಷ್ಟಿಯೂ, ಮೃದುವಾದ ಸುಹಾಸವೂ ನನಗೆ ಸ್ವಪ್ನದಲ್ಲಿ ಕೂಡಾ ದೊರಕುವಂತೆ ಇಲ್ಲ. ಆ ಪ್ರಿಯತಮೆಯು ನೆನಪಾಗಿ ನನ್ನ ಮನಸ್ಸೇ ಮುಂದಕ್ಕೆ ಸಾಗಲೊಲ್ಲದು. ಅವಳಲ್ಲಿ ತೊಡಕಿದ ನನ್ನ ಪ್ರಾಣವನ್ನು ಈ ತೀವ್ರಗತಿಯಾದ ಕುದುರೆಯು ಬಲಾತ್ಕಾರದಿಂದ ಜಗ್ಗಿಕೊಂಡು ಹೋಗುತ್ತಿರುವಂತೆ ನನಗೆ ವ್ಯಥೆಯಾಗುತ್ತದೆ.

ನಾನಿನ್ನು ರಾಜಮಹಾಲಿಗೆ ಹೋದೆನೆಂದರೆ ಅಲ್ಲಿ ಯಾರ ಯಾರ ಸಮಾಗಮದಲ್ಲಿದ್ದು ಸುಖದಿಂದ ಕಾಲಕಳೆಯುವೆನು? ಸುಶೀಲಾಮಾತೆಯ ಮಮತೆ ಇಲ್ಲ; ನರೇಂದ್ರನ ಸ್ನೇಹವಿಲ್ಲ; ಜಗತ್ಸುಂದರಿಯ ಮೃದುಹಾಸದ ವಿಲಾಸವಿಲ್ಲ!''

ಹೀಗೆ ಚಿಂತಿಸುತ್ತ ಅವನು ರಾಜಮಹಾಲಿಗೆ ಬಂದು ತನಗೆ ಪರಿಚಯದವನಾಗಿದ್ದ ಒಬ್ಬ ಅಧಿಕಾರಿಯ ಮನೆಯಲ್ಲಿ ಉಳುಕೊಂಡನು. ಮಧ್ಯಾಹ್ನದ ಮೇಲೆ ಮಾನಸಿಂಹರಾಜನ ದರ್ಶನ ತೆಗೆದುಕೊಂಡು ತನ್ನ ಸಮಾಚಾರವನ್ನೆಲ್ಲ ಅರಿಕೆ ಮಾಡಿಕೊಂಡನು. ತಾನು ಬೀರನಗರಕ್ಕೆ ಬಂದಾಗ ಶ್ರೀಶನ ಯೋಗ್ಯತೆಯನ್ನು ಅರಿತುಕೊಂಡವನಾದ ಮಾನಸಿಂಹನು ಈ ಸಮಾಚಾರವನ್ನು ಕೇಳಿಕೊಂಡು ವಿಷಾದ ತಾಳಿ "ಶ್ರೀಶಾ, ಚಿಂತೆಪಡಬೇಡ. ಸದ್ಯಕ್ಕೆ ನಮ್ಮ ಸೈನ್ಯದಲ್ಲಿ ಒಂದು ಚಿಕ್ಕ ಅಧಿಕಾರವನ್ನು ಕೊಡುವೆನು. ಮುಂದೆ ನಿನ್ನ ಯೋಗ್ಯತಾನುಸಾರವಾಗಿ ನಿನ್ನನ್ನು ಏರಿಸುವೆನು'' ಎಂದು ಹೇಳಿದನು.

ಇತ್ತ ನವಕುಮಾರನು ಶ್ರೀಶಚಂದ್ರನನ್ನು ಮನೆಬಿಡಿಸಿ ಹೊರಗೆ ಹಾಕಿದನೆಂಬ ವರ್ತಮಾನವನ್ನು ಅರಿತು ಗೋಕುಲದಾಸನ ಹೆಂಡತಿಯಾದ ದುರ್ಗಾಮಾಯಿಗೆ ಮಿತಿಮೀರಿದ ಆನಂದವಾಯಿತು. ಅವಳು ಗರ್ವದಿಂದ ಉಬ್ಬಿದವಳಾಗಿ ಅಂದದ್ದು: "ಯಾರಾದರೇನು! ಅಷ್ಟು ಸೊಕ್ಕಿನಿಂದ ಉರಿಯಬಾರದು. ಉರಿದವರು ಒಮ್ಮಿಲ್ಲ ಒಮ್ಮೆ ಕೂಡ್ರಬೀಳುವದೇ ಗಟ್ಟಿ.

"ನಿನ್ನ ಇಚ್ಛೆಯಂತೆ ಆಯಿತೋ ಇಲ್ಲವೋ?'' ಎಂದು ಗೋಕುಲದಾಸನು ಆತ್ಮಪೌರುಷ್ಯದ ಹೆಮ್ಮೆಯಿಂದ ನುಡಿದನು.

"ನಾನು ಹಟ ತೊಟ್ಟಲ್ಲಿ ಇಷ್ಟೆಲ್ಲ ಆಯಿತು. ಇಲ್ಲದಿದ್ದರೆ ನೀವೇನು ಸತ್ಯಭಟ್ಟನ ಹಾಗೆ ಅಪಮಾನಗಳನ್ನು ನುಂಗಿಕೊಂಡು ಕೂಡುತ್ತಿದ್ದಿರಿ!''

"ಇನ್ನೂ ನಿನ್ನ ಬಯಕೆ ಏನಿದೆ ಹೇಳು. ಅದನ್ನು ನಾನು ಹೇಗೆ ಪೂರೈಸುವೆನೋ ನೋಡುವಿಯಂತೆ. ಹೇಮಲತೆಯು ನಿನ್ನ ಸೊಸೆಯಾಗಬೇಕೆನ್ನುವಿಯಾ?" ಎಂದು ಗೋಕುಲದಾಸನು ತನ್ನ ಮನೋರಥವೆಲ್ಲ ಈಗಲೇ ಸಿದ್ಧವಾಗಿರುವದೆಂದು ನಂಬಿ ಉಲ್ಹಾಸದಿಂದ ತನ್ನ ಹೆಂಡತಿಯನ್ನು ಕೇಳಿ ನಕ್ಕನು.

" ನನ್ನ ಘನಶಾಮನ ಹೆಂಡತಿಯಾದರೆ ಹೇಮಲತೆಯು ಕೆಡುವಳೇನು? ಇಂಥ ಗಂಡನು ಸಿಕ್ಕಬೇಕಾದರೆ ಹೇಮಲತೆಗೆ ದೈವ ಬೇಕು " ಎಂದು ದುರ್ಗಾಮಾಯಿಯು ತನ್ನ ಮಗನ ಗದ್ದವನ್ನು ಹಿಡಿದು ನಗುತ್ತ ನುಡಿದಳು.

" ಅಲ್ಲಿಂದೇನು ಕೇಳುವಿ? ನೀನು ಸುಶೀಲಾದೇವಿಗೆ ಸಮಾನಸ್ಕಂಧಳಾಗಿ ಮೆರೆಯುವಿ ' ಎಂದು ಗೋಕುಲದಾಸನು ಮನಸ್ಸಿನಲ್ಲಿಯು ಮಂಡಿಗೆಗಳನ್ನು ಯಥೇಷ್ಟವಾಗಿ ತಿನ್ನುತ್ತ ನುಡಿದನು.

" ನಾನು ಗಂಡಿನ ಬೀಗಿತ್ತಿ ! ಸುಶೀಲಾದೇವಿಗೂ ಹೆಚ್ಚಿನವಳು. ಅವಳನ್ನು ತಲೆಯಲ್ಲಿ ನಡೆಯುತ್ತ ನನ್ನ ಮನೆಗೆ ಬರುವ ಹಾಗೆ ಮಾಡುವೆನು" ಎಂದು ದುರ್ಗಾಮಾಯಿಯು ತಿದಿಯುಬ್ಬಿದಂತೆ ಉಬ್ಬಿ ನುಡಿದಳು.

ಹೀಗೆ ಕೆಲಹೊತ್ತು ಹೆಂಡರುಮಕ್ಕಳೊಡನೆ ಆನಂದದಿಂದ ಮಾತಾಡುತ್ತ ಕುಳಿತ ಬಳಿಕ ಗೋಕುಲದಾಸನು ಅಂಗಿ ಮುಂಡಾಸಗಳನ್ನು ಹಾಕಿಕೊಂಡು ತನ್ನ ಯಜಮಾನನ ಮನೆಯ ಕಡೆಗೆ ನಡೆದನು. ಶ್ರೀಶನನ್ನು ಹೊರಗೆ ಹಾಕಿದ ಬಗ್ಗೆ ನವಕುಮಾರನು ಪಶ್ಚಾತ್ತಾಪವನ್ನು ತಾಳಿದ್ದರೆ ಅವನೊಡನೆ ಹೇಗೆ ಮಾತಾಡಬೇಕೆಂಬದನ್ನು ವಿಚಾರಮಾಡುತ್ತ ಬಂದು ಮೆಲ್ಲಗೆ ನವಕುಮಾರನ ಕೋಣೆಯಲ್ಲಿ ಹಣಿಯಿಕ್ಕಿ ನೋಡಿದನು. ನವಕುಮಾರನು ಚಿಂತೆಯಲ್ಲಿಯೇ ಇದ್ದನು. ಅವನು ತನ್ನ ಗುಮಾಸ್ತನನ್ನು ಕಂಡು: " ಗೋಕುಲದಾಸನೇನು ? ಬಾ." ಎಂದು ಕರೆದನು.

" ಯಾಕೋ ಧನಿಯರು ಚಿಂತೆಯಲ್ಲಿದ್ದಂತೆ ಕಾಣುತ್ತದಲ್ಲ ? " ಎಂದು ಆ ಶಕುನಿಯು ತುಸು ಎದೆಗುಂದಿದವನಾಗಿ ಕೇಳಿದನು.

" ಗೋಕುಲದಾಸ, ಶ್ರೀಶನು ಎದ್ದು ಹೋದದ್ದು ಕಂಡು ನನಗೆ ವಿಷಾದವಾದಂತೆ ಆಗಿದೆ. "

" ಸಹಜವೇ ಇದು. ಅವನ ಕೆಟ್ಟತನವು ಅವನ ಸಂಗಡ. ಪ್ರತ್ಯಕ್ಷ ತಮ್ಮನ ಮಗನು! ಮನೆ ಬಿಟ್ಟು ಹೋದರೆ ಧನಿಯರಂಥ ನಿರ್ಮಲಾಂತಃಕರಣದವರಿಗೆ ವಿಷಾದವಾಗದೇನು ? ದುಷ್ಟಪ್ರಾಣಿಯಾದ ಚೇಳನ್ನು ಕೂಡ ಹೊಡೆಯುವಾಗ ನಮಗೆ ಹಳಹಳಿಯಾಗುತ್ತದೆ. "

" ಸತ್ಯವಾಗಿ ಹೇಳು ಗೋಕುಲದಾಸ, ನೀನು ಹೇಳಿದಂತೆ ಶ್ರೀಶನು ಕೃತಘ್ನನಾಗಿ ವರ್ತಿಸಿದ್ದು ಅಹುದೋ ? "

“ ದೇವರೂ, ಶ್ರೀಶಚಂದ್ರನ ವಿರುದ್ಧವಾಗಿ ಸುಳ್ಳು ಹುಟ್ಟಿಸಿ ಹೇಳಿ ನಾನೇನು ಗಳಿಸಿಕೊಳ್ಳತಕ್ಕವನು ? ಅವನ ದುಷ್ಕೃತಿಗಳಿಂದ ಯಜಮಾನರಿಗೆ ಹಾನಿ ತಟ್ಟೀತೆಂದು ತಿಳಿದು ಸೂಚಿಸಿದೆನಲ್ಲದೆ, ಶ್ರೀಶಚಂದ್ರನನ್ನು ಹೊರಗೆ ಹಾಕಬೇಕೆಂದು ನಾನು ಹೇಳಲಿಲ್ಲ.”

“ ಒಳ್ಳೇದು, ಶ್ರೀಶನ ದುಷ್ಕೃತ್ಯಗಳನ್ನು ನಾನು ಕಾಣಲಿಲ್ಲ; ನನ್ನ ಮನೆಯವರು ಕಾಣಲಿಲ್ಲ. ನೀನೊಬ್ಬನೇ ಹೇಗೆ ಕಂಡಿ ? ”

“ ಹೇಗಂದರೆ ? ಕಳ್ಳನ ಹೆಜ್ಜೆ ಕಳ್ಳನೇ ಬಲ್ಲ ! ನೀವೇನು ಧರ್ಮರಾಜ ನಂಥವರು. ನಿಮ್ಮ ಕಣ್ಣಿಗೆ ಎಲ್ಲರೂ ಸಜ್ಜನರೇ ಆಗಿ ತೋರುವರು ” ಎಂದು ಆ ಕಪಟಿಯು ಮುಖಸ್ತುತಿಯ ಸಕ್ಕರೆಯಲ್ಲಿ ವೈಷಮ್ಯದ ವಿಷವನ್ನು ಬೆರಿಸಿ ನುಡಿದನು.

“ ಶ್ರೀಶನನ್ನು ಹೊಟ್ಟೆಮಗನಿಗಿಂತಲೂ ಹೆಚ್ಚಾಗಿ ಜೋಪಾನ ಮಾಡಿದ್ದಕ್ಕೆ ಅವನು ನನ್ನ ಮೇಲೆ ದ್ರೋಹ ಮಾಡಬಹುದೆ ? ” ಎಂದು ಅರ್ಧ ತನ್ನೊಳಗೂ ಅರ್ಧ ಗೋಕುಲದಾಸನನ್ನು ಕುರಿತೂ ನವಕುಮಾರನು ಉದ್ವಿಗ್ನನಾಗಿ ನುಡಿದನು.

“ ದೇವರೂ, ವಿಷಾದಪಡಬೇಡಿರಿ. ಶ್ರೀಶನನ್ನು ಸಂರಕ್ಷಿಸಿ ನೀವು ಪುಣ್ಯದ ಕೆಲಸವನ್ನೇ ಮಾಡಿದಿರಿ. ದೈವಗೇಡಿಯಾದ ಆ ದ್ರೋಹಿಯು ಹಣೇಬರಹದಲ್ಲಿ ನಿಮ್ಮಂಥ ಹಿರಿಯರ ಪ್ರೇಮವನ್ನು ಸಂಪಾದಿಸಿ ಸ್ವಾರ್ಥ-ಪರಮಾರ್ಥಗಳನ್ನು ಕೂಡಿಯೇ ಸಾಧಿಸಿಕೊಳ್ಳುವದು ಇದ್ದೇ ಇಲ್ಲ. ಯಜಮಾನರು ಇನ್ನು ಶ್ರೀಶನ ವಿಷಯವಾಗಿ ವಿಷಾದವನ್ನು ಹಚ್ಚಿಕೊಳ್ಳಬಾರದು. ”

“ ನಾನೇನು ಅಷ್ಟು ವಿಷಾದ ಹಚ್ಚಿಕೊಂಡಿಲ್ಲ. ಮನೆಯವರೇ ಅವನ ವಿಷಯವಾಗಿ ಹಲುಬುತ್ತಾರೆ; ಅದಕ್ಕಾಗಿ ಮನಸ್ಸಿಗೆ ತಾಪವಾಗಿದೆ.”

“ ಇದು ಬಹಳ ದಿವಸಗಳ ಸಹವಾಸದ ಫಲವು. ಗಂಗಾದೇವಿಯರಂಥ ನಮ್ಮ ಸುಶೀಲಾಮಾತೆಯವರ ಹೃದಯದಲ್ಲಿ ದಯೆಯ ಹೊರತಾಗಿ ಮತ್ತೊಂದೇನೂ ಇಲ್ಲ. ಅವರಿಗೆ ಗೋಮುಖವ್ಯಾಘ್ರನಾದ ಶ್ರೀಶನ ವಿಷಯವಾಗಿ ವ್ಯಸನವಾಗುವದು ಏನಾಶ್ಚರ್ಯ ? ಸುಶೀಲಾಮಾತೆಯವರು ಇಂದು ನಾಳಿಗೆ ತಮ್ಮ ಕಡೆಗೆ ಬಂದು ‘ ಶ್ರೀಶನನ್ನು ಕ್ಷಮಿಸಿರಿ ; ಅವನನ್ನು

ಹೇಗಾದರೂ ಮಾಡಿ ಕರಿಸಿರಿ ' ಎಂದು ಹೇಳಿಕೊಳ್ಳುವರು. ಆ ಸಮಯ ದಲ್ಲಿ ತಾವು ಕ್ರೋಧಾವೇಶವನ್ನು ತಾಳಿ ಅವರ ಕೋಮಲವಾದ ಮನಸ್ಸನ್ನು ನೋಯಿಸಕೂಡದು. ಹಾಗೆಯೇ ಸುಮ್ಮನಿದ್ದು ಮೆಲ್ಲಮೆಲ್ಲನೆ ಶ್ರೀಶನ ದುರ್ಗುಣಗಳನ್ನು ಅವರಿಗೆ ತಿಳಿಸುತ್ತ ಹೋಗಿರಿ. ನಾನು ಬಂದು ಬಹಳ ಹೊತ್ತಾಯಿತು. ಯಜಮಾನರ ಭೋಜನದ ಸಮಯವಾಗಿದೆ. ಅಪ್ಪಣೆ ಕೊಡಿರಿ '' ಎಂದು ಹೇಳಿ ಆ ನೀಚನು ಹೊರಟುಹೋದನು.

## ಹದಿನಾಲ್ಕನೆಯ ಅಧ್ಯಾಯ

## ರಾಮನವಮಿಯು

ಚೈತ್ರಮಾಸವೇ ನಿಜವಾದ ವರ್ಷಾರಂಭವು. ಚೈತ್ರಮಾಸದಲ್ಲಿಯೇ ಸಕಲ ಧಾನ್ಯಗಳನ್ನು ತುಂಬಿಕೊಂಡು ರೈತರು ಆನಂದದಲ್ಲಿರುವರು. ಅದೇ ಮಾಸದಲ್ಲಿಯೇ ಸರಕಾರದವರು ಕಂದಾಯವನ್ನೆತ್ತಿ ಇಂಥಿಂಥ ಪ್ರಜಾಹಿತದ ಕೆಲಸಗಳನ್ನು ಮಾಡತಕ್ಕದ್ದೆಂದು ಉತ್ಸಾಹದಿಂದ ಆಲೋಚಿಸುವರು. ಇಂಥ ಉತ್ಕೃಷ್ಟವಾದ ಮಾಸವನ್ನೇ ಆರಿಸಿ ಪ್ರಭುವಾದ ಶ್ರೀ ನಾರಾಯಣನು ರಾಮಾವತಾರವನ್ನು ತಾಳಿದನು.

ಐಶ್ವರ್ಯದಿಂದ ಮದಾಂಧರೂ, ಬಲಾತಿಶಯದಿಂದ ಉನ್ಮತ್ತರೂ, ದುರ್ನೀತಿಯ ನಿವಾಸಸ್ಥಾನರೂ, ಮಾಯಾವಿಗಳೂ ಆದ ರಾಕ್ಷಸರು ಸನ್ಮಾರ್ಗವರ್ತಿಗಳಾದ ಮನುಷ್ಯರನ್ನು ಬಹುವಿಧವಾಗಿ ಬಾಧಿಸುತ್ತಿರುವದನ್ನು ಅನೇಕಾವರ್ತಿ ಕಂಡು ಜಗದೀಶನಿಗೆ ಕರುಣೆ ಹುಟ್ಟಿ, ರಾಕ್ಷಸರ ಬಲವನ್ನು ಮುರಿಯಬೇಕೆಂತಲೂ, ಲೋಕಕ್ಕೆ ನೀತಿಯ ಮಾರ್ಗವನ್ನು ತೋರಿಸಿ ಕೊಡ ಬೇಕೆಂತಲೂ ಆ ಪರಮಾತ್ಮನು ರಾಮಾವತಾರವನ್ನು ತಾಳಿದನು.

ಪಿತೃಭಕ್ತಿಪರಾಯಣನಾದ ಮಗನೂ, ಭ್ರಾತೃವತ್ಸಲನಾದ ಸಹೋದ ರನೂ, ಮಾತೃದೇವನೂ, ಪರನಾರಿಯರ ಸೋದರನೂ, ಸತ್ಯವಾದಿಯೂ, ವಚನಪರಿಪಾಲಕನೂ, ವಿಪತ್ತಿಗೆ ಈಡಾಗದವನೂ, ಧೈರ್ಯಸಿಂಧುವೂ, ಕ್ಷಮಾಶೀಲನೂ, ದಯಾಸಮುದ್ರನೂ, ಅನೀತಿಕುಠಾರನೂ, ದುಷ್ಟರನ್ನು

ನಿಗ್ರಹಿಸುವವನೂ ಆದ ಶ್ರೀ ರಾಮನ ಪ್ರತ್ಯಕ್ಷ ಉದಾಹರಣವನ್ನು ಕಂಡು ರಾಮಾವತಾರದ ಕಾಲದ ಜನರು ಆ ಪ್ರಭುವಿನ ಸತ್ಕೃತಿಗಳ ಅನುಕರಣ ವನ್ನು ಮಾಡಿದ್ದರಿಂದ ಎಲ್ಲಿ ನೋಡಿದಲ್ಲಿ ಶ್ರೀ ರಾಮನ ಪ್ರತಿಬಿಂಬಗಳೇ ಕಂಡವು. ಆ ಕಾಲದ ಮಹಾನುಭಾವರ ಅನುಕರಣವನ್ನೇ ಹಿಂದುಸ್ಥಾನದ ನಿವಾಸಿಗಳಾದ ನಾವು ಇಂದಿಗಾದರೂ ಮಾಡುತ್ತಲಿದ್ದೇವೆ. ಹಿಂದುಸ್ಥಾನದ ಜನರು ನಿಷ್ಕಪಟಿಗಳು, ಹಿಂದುಸ್ಥಾನದ ಜನರು ಪರೋಪಕಾರಿಗಳು, ಅವರು ರಾಜನಿಷ್ಠರು, ದಯಾಳುಗಳು, ನೀತಿವಂತರೆಂದು ಜಗತ್ತಿನಲ್ಲಿ ಖ್ಯಾತಿ ಯಾದದ್ದು ನಾವು ಶ್ರೀರಾಮನ ಗುಣಗಳನ್ನು ನಿತ್ಯದಲ್ಲಿಯೂ ಕೊಂಡಾಡಿ ಹಾಡುತ್ತಿರುವದರ ಫಲವು.

ಶ್ರೀ ರಾಮನ ಜನ್ಮೋತ್ಸವದ ದಿವಸವೆಂದರೆ ಆರ್ಯಭೂಮಿಯಲ್ಲಿಯ ಸದ್ಗುಣಗಳ ಜನ್ಮೋತ್ಸವದ ದಿವಸವು. ಇಂಥ ಮಹೋತ್ಸವವು ಮನೆಮನೆ ಗಳಲ್ಲಿ, ಗ್ರಾಮಗ್ರಾಮಗಳಲ್ಲಿ, ದೇಶದೇಶಗಳಲ್ಲಿ ಆಗುತ್ತಿರುವದು ಏನಾ ಶ್ಚರ್ಯ? ಆರ್ಯಕಾಲದ ಮಹನೀಯರೂ, ವಸಿಷ್ಠ, ವಾಲ್ಮೀಕಿ ಮುಂತಾದ ಮಹರ್ಷಿಗಳೂ, ತಾನೇ ಸಾಕ್ಷಾತ್ ಶ್ರೀ ಶಂಕರನೂ ರಾಮನಾಮವನ್ನು ಗರ್ಜಿಸುತ್ತ ಹುಚ್ಚೆದ್ದು ಕುಣಿದಿರಲು ಈಗಿನ ಕಾಲದಲ್ಲಿ ಶ್ರೀ ರಾಮನ ಜನ್ಮೋತ್ಸವದ ದಿವಸ ಸಕಲ ಮಾನವರೂ "ರಾಮಾ! ಶ್ರೀ ರಾಮಾ! ಲೋಕಾಭಿರಾಮಾ!" ಎಂದು ಉದ್ರೇಕದಿಂದ ಕೂಗುತ್ತ ಕುಣಿದು ಆನಂದಾ ಶ್ರುಗಳನ್ನು ಸುರಿಸುತ್ತಿರುವದು ಏನಾಶ್ಚರ್ಯ?

ರಾಮನವಮಿಯ ಉತ್ಸವವನ್ನು ಮಾಡುವದು ಬೀರನಗರದ ಜಮಿಾನ ದಾರರ ಕುಲಧರ್ಮವಾದ್ದರಿಂದ ಆ ಗ್ರಾಮದಲ್ಲಿ ಶ್ರೀ ರಾಮನ ಜನ್ಮೋತ್ಸವವು ಬಹು ವಿಜೃಂಭಣೆಯಿಂದ ನಡೆದಿತ್ತು. ಮನೆಮನೆಗಳನ್ನು ತೋರಣ, ಬಾಳೆಗಂಬಗಳಿಂದ ಅಲಂಕರಿಸಿದ್ದರು. ಶ್ರೀ ರಾಮದೇವರ ಮಂದಿರದ ಶೃಂಗಾರವಂತೂ ಬಹು ಪ್ರೇಕ್ಷಣೀಯವಾಗಿತ್ತು. ನರನಾರಿಯರೆಲ್ಲರೂ ಸ್ನಾನ ಮಾಡಿ ಹೊಸಹೊಸ ವಸ್ತ್ರಗಳನ್ನು ಧರಿಸಿಕೊಂಡು ಅಲಂಕಾರ ಭೂಷಿತರಾಗಿ ಉತ್ಸವದ ನಗಾರಿನೌಬತ್ತುಗಳ ಧ್ವನಿಯನ್ನು ಕೇಳುತ್ತಲೇ ದೇವತಾಯತನಕ್ಕೆ ಗುಂಪುಗುಂಪಾಗಿ ನಡೆದಿದ್ದರು.

ವಿಶಾಲವಾದ ಸಭಾಮಂಡಪದ ಎದುರಿನಲ್ಲಿ ಶ್ರೀರಾಮ ಸೀತಾ

ಲಕ್ಷ್ಮಣರ ಮಂಗಲಕರವಾದ ಮೂರ್ತಿಗಳು ನಯನಾಭಿರಾಮವಾಗಿ ತೋರು ತ್ತಿದ್ದವು. ಈ ತ್ರಿಮೂರ್ತಿಗಳ ಎದುರಿನಲ್ಲಿಯೇ ಭಕ್ತಶಿಖಾಮಣಿಯಾದ ಶ್ರೀಮದಾಂಜನೇಯನ ವಿಚಿತ್ರವಾದ ಮೂರ್ತಿಯು ರಾಮನ ಮುಖವನ್ನೇ ನೋಡುತ್ತ ಕೈಜೋಡಿಸಿಕೊಂಡು ನಿಂತಿತ್ತು. ಮಂಗಲವಾದ್ಯಗಳೊಡನೆ ಸ್ತ್ರೀಪುರುಷರು ಶ್ರೀರಾಮನ ಗುಣಾನುವಾದವನ್ನು ಮಾಡಿ ಬಹು ಮಂಜುಲ ವಾಗಿ ಹಾಡುತ್ತಿದ್ದರು. ಮಿಕ್ಕ ಗ್ರಾಮವಾಸಿಗಳು ಸಭಾಮಂಟಪದಲ್ಲಿ ಸಾಲುಸಾಲಾಗಿ ನಿಂತುಕೊಂಡು रामलछमन जानकी जय बोलो हनुमानकी ಎಂದು ಭಜಿಸುತ್ತ ತಾಳಗಳನ್ನು ಒಳಿತಾಗಿ ಕಟಿಯುತ್ತ ಸ್ಫೂರ್ತಿಯಿಂದ ಕುಣಿದೇ ಕುಣಿಯುತ್ತಿದ್ದರು.

ಮುಖ್ಯ ವ್ಯವಸ್ಥಾಪಕನಾದ ನವಕುಮಾರನು, ಪ್ರಾತಃಕಾಲದಿಂದ ದೇವಾಲಯದಲ್ಲಿಯೇ ಟೊಂಕಕಟ್ಟಿಕೊಂಡು ನಿಂತಿದ್ದನು. ಸುಶೀಲಾದೇವಿಯು ದೇವರಿಗೆ ಅರ್ಪಿಸತಕ್ಕ ವಸ್ತ್ರಾಲಂಕಾರ, ಗಂಧಪುಷ್ಪಾಕ್ಷತೆಗಳನ್ನು ತೆಗೆದು ಕೊಂಡು ಪೂಜಾಸಮಯಕ್ಕಿಂತ ಮೊದಲೇ ದೇವಾಲಯಕ್ಕೆ ಬಂದು ಬಿಟ್ಟಿದ್ದಳು. ಜಗತ್ಸುಂದರಿಯು ಮನೆಗೆ ಹೊಂದಿದ್ದ ಪುಷ್ಪೋದ್ಯಾನಕ್ಕೆ ಹೋಗಿ ಶ್ರೀರಾಮನಿಗೋಸ್ಕರ ವೈಜಯಂತಿಮಾಲೆಯನ್ನು ಕಟ್ಟುತ್ತ ಮೆಲ್ಲಗೆ ಬಾಯಿಯಲ್ಲಿಯೇ "ರಾಮಾ ರಘುಕುಲಸೋಮಾ, ಮುನಿಜನಪ್ರೇಮಾ, ಜಾನಕಿ ರಮಣಾ" ಎಂದು ಹಾಡುತ್ತ ಕುಳಿತಿದ್ದಳು. ಹೇಮಲತೆಯು ಮಂಗಲಸ್ನಾನವನ್ನು ಮಾಡಿ ಜರದಸೀರೆ ಕುಪ್ಪಸಗಳನ್ನು ತೊಟ್ಟುಕೊಂಡು ಸರ್ವಾಭರಣ ಭೂಷಿತೆಯಾಗಿ, ಇನ್ನು ದೇವಾಲಯಕ್ಕೆ ಹೋಗಬೇಕೆಂದು ಜಗತ್ಸುಂದರಿಯ ಮಾರ್ಗಪ್ರತೀಕ್ಷೆಮಾಡುತ್ತ ಮನೆಯಲ್ಲಿ ಕುಳಿತಿದ್ದಳು.

ನರೇಂದ್ರನು ಗಂಗಾಸ್ನಾನವನ್ನು ಮಾಡಿಕೊಂಡು ಮನೆಗೆ ಬಂದು ಇನ್ನು ಬೇಗನೆ ದೇವಾಲಯಕ್ಕೆ ಹೋಗಬೇಕೆಂದು ತನ್ನ 'ಪೋಷಾಕು' ಮಾಡಿಕೊಂಡು ಫಲ ಪುಷ್ಪದ ತಟ್ಟೆಯನ್ನು ತರಬೇಕೆಂದು ಒಳಗೆ ಹೋಗಿ ನೋಡಲಾಗಿ ಅಲ್ಲಿ ಮನುಷ್ಯರ ಉಲುವೇ ಇಲ್ಲ. ದಿವಾನಖಾನೆಯಲ್ಲಿ ಹೇಮಲತೆಯೊಬ್ಬಳೇ ನಿಲುವುಗನ್ನಡಿಯಲ್ಲಿ ತನ್ನ ಸೌಂದರ್ಯವನ್ನು ನೋಡುತ್ತ ಮೈಮರೆದು ನಿಂತಿದ್ದಳು. ಅಂಥ ಸಮಯದಲ್ಲಿ ಆಕಸ್ಮಾತ್ತಾಗಿ ನರೇಂದ್ರನೇ ಅಲ್ಲಿಗೆ ಬಂದದ್ದು ಕಂಡು ಹೇಮಲತೆಯು ಚಕಿತಳಾಗಿ ನಾಲಿಗೆ

ಬಚ್ಚಿಕೊಂಡು ಕನ್ನಡಿ ಬಿಟ್ಟು ಸರಕ್ಕನೆ ಹಿಂದಕ್ಕೆ ಸರಿದು ನಿಂತಳು. ಸರ್ವಾಭರಣಭೂಷಿತೆಯಾಗಿ ಬಲು ಮೋಹಕಳಾಗಿ ಕಾಣುತ್ತಿರುವ ಹೇಮಲತೆಯನ್ನು ನೋಡಿ ನರೇಂದ್ರನಾದರೂ ತಟಸ್ಥನಾಗಿ ನಿಂತನು. ಹೀಗೆ ಒಬ್ಬರ ಮುಖವನ್ನು ಒಬ್ಬರು ಕ್ಷಣಹೊತ್ತು ನೋಡಿ ಈರ್ವರೂ ಮೃದುಹಾಸಗೈದರು.

ಈ ತರುಣ ತರುಣಿಯರಲ್ಲಿ ಅವ್ಯಕ್ತವಾಗಿದ್ದ ಪ್ರೇಮವು ರಂಗಪಂಚಮಿಯ ಪ್ರಸಂಗದಿಂದ ಪ್ರತಿ ದಿನವೂ ಒಳಗಿಂದೊಳಗೆ ಅಭಿವೃದ್ಧಿಯಾಗುತ್ತ ನಡೆದಿತ್ತು. ಆದರೂ ಹೀಗೆ ಏಕಾಂತದಲ್ಲಿ ನಿಂತು ಮಾತಾಡುವ ಸಂಧಿಯು ಅವರಿಗೆ ಸಾಧಿಸಿದ್ದಿಲ್ಲ. ಅವರಾದರೂ ಅಂಥ ಪ್ರಸಂಗವನ್ನು ಹುಡುಕಿಕೊಂಡಿದ್ದಿಲ್ಲ. ಹೇಮಲತೆಯು ನರೇಂದ್ರನಿಗೆ ಮನಸೋತವಳಾಗಿದ್ದರೂ ವಿಲಾಸಚೇಷ್ಟಿತಗಳನ್ನು ಅವಳು ಅರಿಯದವಳಾಗಿದ್ದಳು. ನರೇಂದ್ರನಾದರೂ ಹುಚ್ಚುತನಬಡೆಯುವ ಕಾಮಿಯಾಗಿದ್ದಿಲ್ಲ. ಈಗಿನ ಪ್ರಸಂಗದಲ್ಲಿ ಅವರು ಕ್ಷಣಹೊತ್ತು ಮೂಢರಂತೆ ನಿಂತುಕೊಂಡರು.

ಕಡೆಗೆ ನರೇಂದ್ರನೇ ಧೈರ್ಯತಾಳಿ ಭರದಿಂದ ಹೇಮಲತೆಯ ಕೈಹಿಡಿದು "ಹೇಮಲತಾ" ಎಂದು ಕರೆದನು. ಪಾಪ! ಹೇಮಲತೆಗೆ ಉತ್ತರ ಕೊಡಲು ಬರಲೊಲ್ಲದು. ಆ ಮುಗ್ಧೆಯ ಹೃದಯದಲ್ಲಿ ಉದ್ವೇಗವು ತುಂಬಿದ್ದರಿಂದ ಅವಳು ಅವನತಮುಖಿಯಾಗಿ ಉಸುರ್ಗರೆದಳು.

"ಹೇಮಲತಾ, ಮಾತಾಡಲೊಲ್ಲೇಕೆ?" ಎಂದು ನರೇಂದ್ರನು ಅವಳ ಮುಖವನ್ನು ನೋಡಿ ಮುಗುಳುನಗೆ ನಗುತ್ತ ಕೇಳಿದನು.

"ನಾನೇನು ಮಾತಾಡಲಿ?" ಎಂದು ಹೇಮಲತೆಯು ತನ್ನ ಕೈಬಿಡಿಸಿಕೊಳ್ಳಲು ಯತ್ನಮಾಡದೆ ಹಾಗೇ ಅವನತಮುಖಿಯಾಗಿ ನುಡಿದಳು.

"ನಾನು ರಂಗಪಂಚಮಿಯ ದಿವಸ ಅವಿನೀತನಾಗಿ ವರ್ತಿಸಿದ್ದಕ್ಕಾಗಿ ನೀನು ನೊಂದುಕೊಂಡಿಯೇನು?"

ನರೇಂದ್ರನ ಪ್ರಶ್ನಕ್ಕೆ ಹೇಮಲತೆಯು ಏನು ಉತ್ತರಕೊಡತಕ್ಕದ್ದು? ಆ ಲೋಭನೀಯವಾದ ಪ್ರಯೋಗವು ತನಗೆ ರುಚಿಸಿತೆಂದು ಒಪ್ಪಿಕೊಳ್ಳುವಳೇ? ಇಲ್ಲೆಂದು ತನ್ನ ಹೃದಯಾಭಿರಮಣನಿಗೆ ಅವಳು ಸುಳ್ಳಾದರೂ ಹೇಗೆ ಹೇಳುವಳು? ಇನ್ನು ತನ್ನ ಪ್ರಿಯನು ಎರಡು ಮೂರು ಪ್ರಶ್ನಗಳನ್ನು

ಮಾಡಿದಾಗ್ಯೂ ಸುಮ್ಮನಿರುವದು ಸರಿಯಲ್ಲವೆಂದೆಣಿಸಿ ಆ ಭಾಮಿನಿಯು "ರಂಗಪಂಚಮಿಯು ದಿವಸ ಏನಾಯಿತು? ನನಗೆ ನೆನಪೇ ಇಲ್ಲ!" ಎಂದು ನುಡಿದು ಮಂದಹಾಸದಿಂದ ಕೈಬಿಡಿಸಿಕೊಳ್ಳಲು ಯತ್ನ ಮಾಡಿದಳು.

"ಹೇಮಾ, ಈಗಲೆ ನಾನು ಕೈಬಿಡುವದಿಲ್ಲ. ನೀನು ನನ್ನನ್ನು ಪ್ರೀತಿಸುವಿಯೇನು?"

"ಹಾಗೆ ಆಡಿಯೇ ತೋರಿಸಬೇಕೇನು? ಕೈಬಿಡಿರಿ. ಜಗತ್ ಸುಂದರಿಯು ಬರುವ ಹೊತ್ತಾಗಿದೆ."

ಸುಖಾನುಭೂತಿಯ ಅತಿರೇಕದಿಂದ ಹೇಮಲತೆಯ ಹೃದಯವು ಧಕ್ಕ ಧಕ್ಕೆಂದು ಹಾರಿತು. ಅವಳ ಹಣೆಯಲ್ಲಿ ಬೆವರೊಡೆಯಿತು. ಕಾತರಳಾಗಿ ಅವಳು ತನ್ನ ಮುಖವನ್ನು ನರೇಂದ್ರನ ಭುಜದ ಮೇಲಿಟ್ಟುಕೊಂಡು ಸ್ವಲ್ಪ ಮರೆತು ನಿಂತುಕೊಂಡಳು. ನರೇಂದ್ರನು ಮೆಲ್ಲನೆ ಅವಳ ಹೆಗಲಮೇಲೆ ಕೈಹಾಕಿ "ಮನೋಹಾರಿಣಿ, ಎಂಥ ವಿಘ್ನಗಳು ಬಂದರೂ ನಮ್ಮ ಪ್ರೇಮದಲ್ಲಿ ಹೆಚ್ಚುಕಡಿಮೆಯಾಗಲಿಕ್ಕಿಲ್ಲವಷ್ಟೆ?" ಎಂದು ಉತ್ಸುಕನಾಗಿ ಕೇಳಿದನು.

"ದಾಸಿಯ ಸತ್ವಪರೀಕ್ಷೆಗಾಗಿ ವಿಘ್ನಗಳು ಬಂದಾದರೂ ಬರಲಿ. ಆ ಮೇಲೆ ತಿಳಿಯುವದು" ಎಂದು ಹೇಮಲತೆಯು ಪ್ರೇಮದಿಂದ ನರೇಂದ್ರನ ಎದೆಯ ಮೇಲೆ ಕೈಯಾಡಿಸಿ ನುಡಿದಳು.

ಅಷ್ಟರಲ್ಲಿ ಜಗತ್‌ಸುಂದರಿಯು ಮನೋಹರವಾಗಿ ಕಟ್ಟಿದ ವೈಜಯಂತೀ ಮಾಲೆಯನ್ನು ತೆಗೆದುಕೊಂಡು ಸಂತೋಷದ ಭರದಲ್ಲಿ "ಹೇಮಾ, ಹೇಮಾ" ಎಂದು ಕೂಗುತ್ತ ನೆಟ್ಟಗೆ ಈ ಹೊಸ ಪ್ರಣಯಿಗಳದ್ದಲ್ಲಿಗೆ ಧಾವಿಸಿ ಬಂದಳು. ಅಷ್ಟರಲ್ಲಿ ಆ ಪ್ರಣಯಿಗಳ ಪಾಶಗಳು ಸಡಿಲಾಗಿ ಅವರೀರ್ವರು ತುಸು ಅಂತರದ ಮೇಲೆ ನಿಂತರು. ನರೇಂದ್ರನು ಲಗಬಗೆಯಿಂದ ಹೊರಬಿದ್ದು ಬರುವದರೊಳಗೆಯೇ ಜಗತ್‌ಸುಂದರಿಯು ಅಲ್ಲಿಗೆ ಬಂದೇಬಿಟ್ಟಳು. ತನ್ನ ಅಣ್ಣನು ಹೊರಗೆ ಹೋದ ಬಳಿಕ ಜಗತ್‌ಸುಂದರಿಯು ಒಳಗೆ ಬಂದವಳೇ ಬಿದ್ದು ಬಿದ್ದು ನಗಲಾರಂಭಿಸಿದಳು.

"ಇಷ್ಟ್ಯಾಕೆ ನಗುತ್ತಿರುವಿ ಜಗತ್‌ಸುಂದರೀ?" ಎಂದು ಉದ್ವೇಗದಿಂದ ಹೇಮಲತೆಯು ಕೇಳಿದಳು.

ಜಗತ್ಸುಂದರಿಯು ನಗುನಗುತ್ತಲೇ "ಒಳಿತಾಗಿ ಸಿಕ್ಕಿರಿ ಬನ್ನಿರೀ ಹೇಮಲತಾದೇವಿಯವರೇ ?" ಎಂದು ಚಪ್ಪಳೆ ಹೊಡೆದು ನುಡಿದಳು.

"ಏನು ಹಾಗೆ ನಕ್ಕರೆ ಜಗತ್ಸುಂದರೀ ?" ಎಂದು ಹೇಮಲತೆಯು ತುಸು ಸಿಟ್ಟಾಗಿ ಕೇಳಿದಳು.

ಜಗತ್ಸುಂದರಿಯು ವಿಲಾಸದಿಂದ ತನ್ನ ಕೋಮಲವಾದ ಹಸ್ತವನ್ನು ಹೇಮಲತೆಯ ಮುಖಕ್ಕೆ ಚಾಚಿ ಮಂದಹಾಸಗೈಯುತ್ತ :

ಏನೇನೇ ಇದು ಏನೇನೇ ‖ ಪಲ್ಲ ‖
ಜದುರೆ ನಿನ್ನ ಮುಖ ಬದಲಾಗಿರುವದು ।
ಕದಪಿಲೆ ತೋರುವ ಪದುಮರಾಗ, ವಿದೇನೇ ಇದು ಏನೇನೇ ‖ ೧ ‖

ಎಂದು ಹಾವಭಾವ ಮಾಡಿ ಹಾಡಿದಳು.

"ಜಗತ್ಸುಂದರೀ, ನಾನಿಲ್ಲಿ ಇರುವಾಗ ನರೇಂದ್ರನಾಥರು ಅಕಸ್ಮಾತ್ತಾಗಿ ಬಂದದ್ದರಿಂದ ನಾನು ತುಸು ನಾಚಿಕೊಂಡು ನಿಂತದ್ದು ಕಂಡು ನೀನಿಷ್ಟು ಆಟ ಮಾಡುವಿಯಾ ?" ಎಂದು ಹೇಮಲತೆಯು ಜಗತ್ಸುಂದರಿಯನ್ನು ತುಸು ಹಿಂದಕ್ಕೆ ದೂಡಿ ನುಡಿದಳು.

"ಹಾಃ ಹಾಃ ಹಾಃ" ಎಂದು ನಕ್ಕು ಜಗತ್ಸುಂದರಿಯು ಅಂದದ್ದು: "ನರೇಂದ್ರನು ತೆಂಗಿನ ಗಿಡದ ಮೇಲೆ ಹುಲ್ಲು ಇಲ್ಲೆಂದೇ ಇಳಿದು ಹಾಗೆ ಓಡಿ ಹೋದನಲ್ಲೀ ಒಯ್ಯಾರೀ ?"

ಹೇಮಲತೆಯು ಜಗತ್ಸುಂದರಿಯ ಬೆನ್ನಿಗೆ ಮೂರು ನಾಲ್ಕು ಸಾರೆ ಗುದ್ದಿ, ಗುದ್ದಿದ ಸರತಿಗೊಮ್ಮೆ "ನಗು ! ನಗು !" ಎಂದು ಕೂಗಿದಳು.

"ಗುದ್ದು, ಬೇಕಾದಷ್ಟು ಗುದ್ದು. ಈ ನಗೆ ತೀರಿದ ಬಳಿಕ ನಾನು ಅಳಬೇಕಷ್ಟೆ ?" ಎಂದು ನುಡಿದು ಜಗತ್ಸುಂದರಿಯು ಮತ್ತೆ ನಕ್ಕಳು.

ಅಷ್ಟರಲ್ಲಿ ಕುಂದಾ ದಾಸಿಯು ಬಂದು ಇವರನ್ನು ರಾಮಮಂದಿರಕ್ಕೆ ಕರಕೊಂಡು ಹೋದಳು.

---

## ಹದಿನೈದನೆಯ ಅಧ್ಯಾಯ

## ದುರಾಗ್ರಹಕ್ಕೆ ಉಪಾಯವಿಲ್ಲ

ಒಂದು ದಿವಸ ನವಕುಮಾರನು ಚಿಂತೆಮುಂಬಳಿಗಳಿಲ್ಲದೆ ತನ್ನ ದಿವಾನಖಾನೆಯಲ್ಲಿ ಕುಳಿತು ಒಂದು ಪುಸ್ತಕವನ್ನು ತೆಗೆದುಕೊಂಡು ಧ್ವನಿ ತೆಗೆದು ತೆಗೆದು ಓದುತ್ತ ಕುಳಿತಾಗ ಸುಶೀಲಾದೇವಿಯು ಮೆಲ್ಲನೆ ಅವನ ಬಳಿಗೆ ಬಂದು ಮರ್ಯಾದೆಯಿಂದ ನಿಂತುಕೊಂಡಳು. ಅವಳನ್ನು ಕಂಡು ನವಕುಮಾರನು ನಗೆಮುಖವನ್ನು ತಾಳಿ ಆದರದಿಂದ "ಹಾಗೆ ನಿಂತಿರೇಕೆ? ಕುಳಿತುಕೊಳ್ಳಿರಿ. ಏನಾದರೂ ಕೇಳುವದಿದೆ ಏನು?"ಎಂದು ಕೇಳಿದನು.

"ಕೇಳುವದೇನು? ಶ್ರೀಶನು ಹೋಗಿ ಬಹಳ ದಿವಸಗಳಾದವು. ಅವನೆಲ್ಲಿ ಇದ್ದಾನೆ, ಏನು ಮಾಡುತ್ತಾನೆ ಎಂಬ ವರ್ತಮಾನವೇ ಇಲ್ಲ. ಇತ್ತಕಡೆ ಏನಾದರೂ ತಿಳಿದಿದೆಯೋ ಎಂದು ಕೇಳಬೇಕಾಗಿ ಬಂದೆನು."

"ಎಲ್ಲಿಯಾದರೂ ಇರುವನಾದೀತು! ಅವನೇನು ಕೂಸಲ್ಲ ಕುನ್ನಿಯಲ್ಲ! ಇಪ್ಪತ್ತುವರ್ಷದ ಟೊಣಪನಾಗಿದ್ದಾನೆ. ಅವನಿಗೇನು ಬೇನೆ?" ಎಂದು ನವಕುಮಾರನು ತಿರಸ್ಕಾರದಿಂದ ನುಡಿದನು.

"ಎಲ್ಲಿಯಾದರೂ ಇರುವನು ಸರಿ. ಹುಟ್ಟಿಸಿದ ದೇವರೇನು ಹುಲ್ಲು ಮೇಯಿಸುವನೆ? ಆದರೆ ಶ್ರೀಶನ ಅಪರಾಧವೇನು? ಅವನ ಮೇಲೆ ಆರೋಪ ವನ್ನು ತಂದವರು ಯಾರು? ಇದರ ವಿಚಾರವು ಬೇಕೋಬೇಡವೊ?"

"ಅದರ ವಿಚಾರವನ್ನು ಮಾಡತಕ್ಕವನು ನಾನು!" ಎಂದು ನವಕುಮಾರನು ತನ್ನ ಉಪನೇತ್ರಗಳನ್ನು ತೆಗೆದು ಕೈಯಲ್ಲಿ ಹಿಡಿದು ಕೂಗಿ ಹೇಳಿದನು.

"ಅಲ್ಲವೆಂದು ಯಾರಂದರು? ವಿಚಾರ ಮಾಡತಕ್ಕವರಾದರೆ ಮಾಡಿ ರುವಿರೇನು?"

"ವಿಚಾರಮಾಡುವದರಲ್ಲಿ ಅರ್ಥವಿಲ್ಲ. ಗೋಡೆ ತೊಳೆದ ಹಾಗೆ ಮಣ್ಣೇ!"

"ದುರಾಗ್ರಹಕ್ಕೆ ಉಪಾಯವಿಲ್ಲ. ಯಾವ ಚಾಂಡಾಲನ ಮಾತು ಕೇಳಿ ನೀವು ಹೀಗೆ ಮಾಡುವಿರೋ ಕಾಣೆನು. ಕುಲದೀಪಕನಾದ ಮಗನನ್ನು

ಹೊರಗೆ ಹಾಕಿ ನಾವು ಮನೆಯಲ್ಲಿ ಇರಬೇಕಾಯಿತು. ಸಂಸಾರದಲ್ಲಿ ಇನ್ನೇನು ಇದೆ!'' ಎಂದು ಆ ಸಾಧ್ವಿಯು ಮುಳುಮುಳು ಅತ್ತಳು.

ನವಕುಮಾರನು ಹೇಡಿಯಾದ ಲೋಭಿಯೂ, ಮಂದಮತಿಯೂ ಆಗಿದ್ದರೂ ಅವನು ಜಾತ್ಯಾ ಕೆಟ್ಟಮನಸ್ಸಿನವನಲ್ಲ. ಅವನಿಗೆ ಸುಶೀಲಾದೇವಿಯ ಅಶ್ರುಗಳನ್ನು ಕಂಡು ವ್ಯಥೆಯಾಯಿತು. "ಯಾಕೆ ವ್ಯರ್ಥವಾಗಿ ವ್ಯಸನಪಡುತ್ತೀರಿ? ನಮ್ಮ ಸಂಸಾರಕ್ಕೆ ಏನಾಗಿದೆ? ನಮಗೆ ಮಗನಿಲ್ಲದಿದ್ದರೂ ಬಂಗಾರದಂಥ ಮಗಳಿದ್ದಾಳೆ. ಆವಳ ಹಿತವನ್ನು ಮಾಡಿ ಅವಳ ಉಚ್ಛ್ರಾಯವನ್ನೇ ನೋಡಿಕೊಂಡು ಇದ್ದರಾಯಿತು!" ಎಂದು ಅವನು ಹೇಳಿದನು.

"ಮಗಳು ಯಾರು, ನಾವು ಯಾರು? ಹೇಮಲತೆಯು ಪರರ ಇಡಗಂಟು, ಇಂದಿಲ್ಲ ನಾಳೆಗೆ ಕೊಟ್ಟಮನೆಗೆ ಹೊರಟು ಹೋಗುವಳು. ಅವಳನ್ನು ಒಂದು ಚಲೋ ಮನೆಗೆ ಕೊಟ್ಟು ಬೇಗನೆ ಕಲ್ಯಾಣೋತ್ಸವವನ್ನು ಮಾಡಿಬಿಡಬೇಕು. ಹೇಮಲತೆಯು ದೊಡ್ಡವಳಾಗಿದ್ದಾಳೆ."

''ನನಗೆ ಈ ಮಾತು ತಿಳಿಯುತ್ತದೆ. ಅವಳಿಗೆ ಚಲೋ ಸ್ಥಳವನ್ನು ನಾನು ಹುಡುಕುತ್ತಲೇ ಇದ್ದೇನೆ.'' ಎಂದು ನವಕುಮಾರನು ನಗುತ್ತ ನುಡಿದನು.

''ಇದ್ದ ಸ್ಥಳವನ್ನು ಬಿಟ್ಟು ಮತ್ತಿನ್ನೆಲ್ಲಿಯ ಸ್ಥಳವನ್ನು ಹುಡುಕುವಿರಿ? ನರೇಂದ್ರನು ರೂಪವಂತನೂ, ವಿದ್ಯಾವಂತನೂ, ದೊಡ್ಡ ಜಮೀನದಾರನೂ ಆಗಿರುವನು. ಅವನಿಗೆ ಕೊಟ್ಟರೆ ಆಗದೇನು?"

"ಈ ಮಾತಿನ ಬಗ್ಗೆ ನಾನು ನಿಮಗೆ ಮೊದಲೇ ಹೇಳಿಬಿಟ್ಟಿದ್ದೇನೆ. ನರೇಂದ್ರನಿಗೆ ಹೇಮಲತೆಯನ್ನು ಕೊಡುವದು ನನ್ನ ಮನಸ್ಸಿನಲ್ಲಿ ಇಲ್ಲ. ನೀವು ಸುಳ್ಳೇ ಆಗ್ರಹತೊಡಬೇಡಿರಿ.'' ಎಂದು ನವಕುಮಾರನು ನಿಷ್ಠುರವಾಗಿ ಹೇಳಿದನು.

"ನನ್ನ ಆಗ್ರಹವೆಲ್ಲಿಗೆ ಮುಟ್ಟುವದು? ಆದರೂ ನಾವು ಹೇಮಲತೆಯ ಮನಸ್ಸಿಗೆ ಬಂದ ವರನಿಗೆ ಅವಳನ್ನು ಕೊಡುವದು ವಿಹಿತವಾದದ್ದಲ್ಲೆ? ಇಂಥ ಮಾತಿನಲ್ಲಿ ನನ್ನ ಆಗ್ರಹವೂ ತಕ್ಕದ್ದಲ್ಲ, ನಿಮ್ಮ ಆಗ್ರಹವೂ ತಕ್ಕದ್ದಲ್ಲ.''

"ಹೇಮಲತೆಗಿಂತಲೂ ನನಗೆ ಚನ್ನಾಗಿ ತಿಳಿಯುತ್ತದೆ. ನರೇಂದ್ರನಿಗೆ

ಅವಳನ್ನು ಕೊಟ್ಟರೆ ಆವಳಿಗೆ ಎಂದಿಗೂ ಸುಖವಾಗದು. ಉದ್ದಾಮನೂ, ಅಹಂಕಾರಿಯೂ, ಸ್ವೇಚ್ಛಾಚಾರಿಯೂ ಆದ ನರೇಂದ್ರನ ಕೈಯಲ್ಲಿ ಹೇಮಲತೆಯು ನಾಲ್ಕೊಪ್ಪತ್ತಾದರೂ ಬಾಳಲಿಕ್ಕಿಲ್ಲ."

"ನಮ್ಮ ದುರ್ದೈವಕ್ಕೆ ನಿಮಗೆಲ್ಲವೂ ವಿಪರೀತವಾಗಿ ಕಾಣುತ್ತಲಿದೆ. ನಾಲ್ಕು ಜನ ತನ್ನ ಯೋಗ್ಯತೆಯುವರೂ ಸಮಾನವಯಸ್ಕರೂ ಆದ ತರುಣರಂತೆಯೇ ನರೇಂದ್ರನು ಒಬ್ಬನು. ಅವನು ಉದ್ದಾಮನೂ ಅಲ್ಲ, ಅಹಂಕಾರಿಯೂ ಅಲ್ಲ. ಸ್ವಾರ್ಥಪರಾಯಣರ ಹಾಗೆ ಆವನು ಮುಂದೆ ಬಿದ್ದು ನಾಲ್ಕು ಗಲಿಬಿಲಿಯ ಮಾತುಗಳನ್ನಾಡುವದಿಲ್ಲೆಂದು ನರೇಂದ್ರನು ಕೆಟ್ಟವನಾಗಲರಿಯನು."

"ಆವನು ಎಂಥವನೇ ಇರಲಿ. ಹೇಮಲತೆಯು ನನ್ನ ಮಗಳು. ಆವಳನ್ನು ನಾನು ಬೇಕಾದ ವರನಿಗೆ ಕೊಡುವೆನು"

"ಹಾಗಂದರೇನು ? ಹೇಮಲತೆಯು ಮನಸ್ಸಿನಲ್ಲಿ ನರೇಂದ್ರನನ್ನೇ ಮದುವೆಯಾಗುವದದೆ ಎಂದು ನಾನು ಜಗತ್ಸುಂದರಿಯ ಬಾಯಿಂದ ಕೇಳಿದ್ದೇನೆ. ಇದ್ದೊಬ್ಬ ಮಗಳ ಮನಸ್ಸು ಮುರಿದು ನಮ್ಮ ಆಗ್ರಹದ ಮೇರೆಗೆ ನಾವು ನಡೆಯಬೇಕೆ?" ಎಂದು ಸುಶೀಲಾದೇವಿಯು ತುಸು ಕೋಪಿಸಿಕೊಂಡು ನುಡಿದಳು.

"ಹೇಮಲತೆಯು ಹೇಳಿದಂತೆ ನಾವಿನ್ನು ಕುಣಿಯಬೇಕೆ ?"

"ಯಾರ ಉಪಕಾರಕ್ಕೆ ಕುಣಿಯುತ್ತೀರಿ ! ಹೇಮಲತೆಯು ಸುಶಿಕ್ಷಿತಳು; ಅವಳೂ ನಿಮ್ಮಂತೆಯೇ ಆಗ್ರಹದವಳು. ಅವಳು ನರೇಂದ್ರನನ್ನೇ ಮದುವೆ ಯಾಗುವೆನೆಂದು ನಿಶ್ಚಯಿಸಿದ್ದೇ ಆದರೆ ಈಚೆಯ ಸೂರ್ಯನು ಆಚೆಗೆ ಮೂಡಿದರೂ ಅವಳು ನಿಮ್ಮ ಮಾತು ಕೇಳುವವಳಲ್ಲ. ವಿಚಾರಮಾಡಿರಿ. ಇಲ್ಲದಿದ್ದರೆ ಇದ್ದೊಬ್ಬ ಮಗಳ ಕೂಡ ನಿಮಗೆ ಅಖಂಡವಾದ ವ್ಯಾಜ್ಯಮಾಡುತ್ತ ಕುಳ್ಳಿರಬೇಕಾಗುವದು."

"ಸದ್ಯಕ್ಕೆ ಈ ಮಾತು ಸಾಕಾಯಿತು. ನನ್ನ ಮನಸ್ಸು ಈಗ ನೆಟ್ಟಗೆ ಇಲ್ಲ. ಮತ್ತಾವಾಗಾದರೂ ಈ ಮಾತಿನ ಬಗ್ಗೆ ಆಲೋಚಿಸುವ" ಎಂದು ನವಕುಮಾರನು ನಡೆದ ಸಂವಾದವನ್ನು ಮುರಿದು ತನ್ನ ಪುಸ್ತಕವನ್ನು ಓದುವ ನೆವಮಾಡಿಕೊಂಡು ಕುಳಿತನು.

"ಹಾಗೇ ಆಗಲಿ." ಎಂದು ಸುಶೀಲಾದೇವಿಯು ಎದ್ದು ಹೋದಳು.

ನವಕುಮಾರನ ದಿವಾನಖಾನೆಯ ಬಳಿಯಲ್ಲಿಯೇ ಇರುವ ಕೋಣೆಯಲ್ಲಿ ಕುಳಿತಿದ್ದ ಜಗತ್‌ಸುಂದರಿಯು ಹೇಮಲತೆಯ ವಿವಾಹವನ್ನು ಕುರಿತಾದ ಈ ಸಂವಾದವನ್ನು ಕೇಳಿ ವ್ಯಾಕುಲಳಾಗಿ ಕೂಡಲೆ ಹೇಮಲತೆಯ ಬಳಿಗೆ ಬಂದು "ಹೇಮಲತಾ, ಏನು ಮಾಡುತ್ತಿರುವಿ?" ಎಂದು ಕರುಣಾಸ್ವರದಿಂದ ಕೇಳಿದಳು.

"ಏನೂ ಇಲ್ಲ. ಹೊತ್ತು ಹೋಗಲಾರದ್ದಕ್ಕೆ ಚಂದ್ರಹಾಸ ರಾಜನ ಚರಿತ್ರವನ್ನು ಓದುತ್ತ ಕುಳಿತಿದ್ದೆನು. ಯಾಕೆ?"

"ಯಾಕೂ ಇಲ್ಲ. ನಿನಗೊಂದು ವರ್ತಮಾನವನ್ನು ಹೇಳಬೇಕೆಂದು ಬಂದಿದ್ದೆನು."

"ಶ್ರೀಶನ ವರ್ತಮಾನವನ್ನು ತಂದಿರುವಿಯೇನು ಜಗತ್‌ಸುಂದರೀ?" ಎಂದು ಹೇಮಲತೆಯು ವಿನೋದಗೈದು ನಕ್ಕಳು.

"ಪ್ರಿಯ ಹೇಮಲತಾ, ಇದು ವಿನೋದದ ಸಮಯವಲ್ಲ. ಅವರ ಕಡೆಯ ವರ್ತಮಾನವೂ ಬಂದಿಲ್ಲ!" ಎಂದು ಜಗತ್‌ಸುಂದರಿಯು ಖಿನ್ನಳಾಗಿ ನುಡಿದಳು.

ಹೇಮಲತೆಯೂ ಗಾಬರಿಯಾಗಿ ಜಗತ್‌ಸುಂದರಿಯ ಕೈಹಿಡಿದು "ಏನಾಗಿದೆ ಜಗತ್‌ಸುಂದರಿ? ನೀನಿಷ್ಟು ಖಿನ್ನಳ್ಯಾಕೆ ಆಗಿರುವಿ?" ಎಂದು ಕೇಳಿದಳು.

"ಹೇಮಲತಾ, ನಮ್ಮ ಮಂದಿರದ ಕಾಲ್ಗುಣವೇ ಕೆಟ್ಟದ್ದು. ಇಲ್ಲಿ ನಿಂತು ನೀರು ಕುಡಿದವರಿಗೂ ಅಹಿತವಾಗುವದೆಂದು ನಾನು ನಂಬುತ್ತೇನೆ" ಎಂದು ಜಗತ್‌ಸುಂದರಿಯು ಅಳುಮೋರೆ ಮಾಡಿ ನುಡಿದಳು.

"ಆದದ್ದಾದರೂ ಏನು ಜಗತಾ?"

"ಈಗಲೇ ನವಕುಮಾರ ಮಾವಂದಿರೂ ಅತ್ತೆಯವರೂ ನಿನ್ನ ವಿವಾಹದ ವಿಷಯವಾಗಿ ಮಾತಾಡುತ್ತಿದ್ದರು."

"ಅಪ್ಪನು ಅವ್ವನಿಗೆ ಏನಾದರೂ ಅಂದನೇನು?" ಎಂದು ಹೇಮಲತೆಯು ಶಂಕಿತಳಾಗಿ ಕೇಳಿದಳು.

"ಅವರೂ ಅವರೂ ಬಹಳೊತ್ತು ವಾದಿಸ್ಯಾಡಿದರು. ಮಾವಂದಿರು ನಿನ್ನನ್ನು ನರೇಂದ್ರನಿಗೆ ಕೊಡುವದಿಲ್ಲೆಂದು ಆಗ್ರಹತೊಟ್ಟಿದ್ದಾರೆ."

"ಇಷ್ಟು ನನಗೆ ಮೊದಲೇ ತಿಳಿದಿತ್ತು." ಎಂದು ಹೇಮಲತೆಯು ವಿಷಾದದಿಂದ ನಕ್ಕಳು.

"ನಿನಗೆ ಹೇಗೆ ತಿಳಿದಿತ್ತು?"

"ಅಪ್ಪನಿಗೂ ಅವರಿಗೂ ಮನಸಾ ಮನಸಾ ನೆಟ್ಟಗಿಲ್ಲವೆಂದು ನಾನೇನು ಅರಿಯನೇನು? ಯಾಕೆ, ನಿನಗಾದರೂ ಈ ಸಂಗತಿ ಗೊತ್ತಿಲ್ಲೇನು?" ಎಂದು ಹೇಮಲತೆಯು ವ್ಯಸನದಿಂದ ಉಸುರಿಟ್ಟು ನುಡಿದಳು.

"ಮುಂದೇನು ಗತಿ ಹೇಮಾ?" ಎಂದು ಜಗತ್‌ಸುಂದರಿಯು ಕೇಳಿ ಹೇಮಲತೆಯ ಚಿಂತಾಕ್ರಾಂತವಾದ ಮುಖ ನೋಡಿದಳು.

"ಮುಂದೇನು. ಶ್ರೀಶನು ಎದ್ದುಹೋದಂತೆ ನಾನೂ ಸನ್ಯಾಸಿನಿಯಾಗಿ ಹಿಮಾಚಲವನ್ನು ಸೇರುವೆನು." ಎಂದು ವಿಷಾದದಿಂದ ನಕ್ಕು ನುಡಿದ ಹೇಮಲತೆಯ ಕಣ್ಣೊಳಗಿಂದ ಅಶ್ರುಬಿಂದುಗಳು ಪಟಪಟನೆ ಉದುರಿದವು.

## ಹದಿನಾರನೆಯ ಅಧ್ಯಾಯ

## ಕಪಟಿಯ ಕಾರಸ್ಥಾನವು

ಉದಾರನೂ ಚತುರನೂ ಆದ ನರೇಂದ್ರನಾಥನು ಪ್ರಬುದ್ಧನಾಗಿ ಬೀರನಗರದ ನಿವಾಸಿಗಳ ಮನಸ್ಸಿಗೆ ಸಂತೋಷವನ್ನು ಕೊಡುವವನಾದನು. ತನ್ನ ಜಮೀನದಾರಿಗೆ ಹೊಂದಿದ್ದ ಹಳ್ಳಿಗಳ ಸಾಂಪತ್ತಿಕ ಸ್ಥಿತಿಯನ್ನು ಕುರಿತು ಆವನು ರೈತರೊಡನೆ ಆಲೋಚಿಸಲಾರಂಭಿಸಿದನು. ಒಕ್ಕಲತನದ ಬೆಳವಣಿಗೆಯ ರೀತಿಯನ್ನು ಅವನು ಒಕ್ಕಲಿಗರಿಗೆ ತಿಳಿಸಿಕೊಡುತ್ತಿದ್ದನು. ಬಾಲಕರ ವಿದ್ಯಾಭ್ಯಾಸದ ಏರ್ಪಡೆಗಾಗಿ ಅವನು ಯತ್ನ ನಡಿಸಿದನು. ಗ್ರಾಮದ ಪಂಚಾಯತಿಯಿಂದ ಜನರಿಗೆ ಹಿತವಾಗುವದೋ ಇಲ್ಲವೊ ಎಂಬುದನ್ನು ಅವನು ನಿರೀಕ್ಷಿಸಿ ನೋಡಿದನು.

ಭೂಪೇಂದ್ರನಾಥರು ತೀರಿಕೊಂಡ ಬಳಿಕ ಜನರ ಹಿತದ ಕಡೆಗೆ

ಯಾರದೂ ಲಕ್ಷ್ಯವಿಲ್ಲದ್ದರಿಂದ ಅವರ ಸ್ಥಿತಿಯು ಕೆಟ್ಟಿತ್ತೆಂಬದನ್ನು ಹೇಳ ಬೇಕೆ? ತಮ್ಮ ಹೊಸ ಯಜಮಾನನು ಹೀಗೆ ಅಂತಃಕರಣದಿಂದ ತಮ್ಮ ಹಿತವನ್ನು ಬಯಸುತ್ತಿರುವದನ್ನು ನೋಡಿ ಪ್ರಜರೆಲ್ಲ ಅವನನ್ನು ಕೊಂಡಾಡ ಲಾರಂಭಿಸಿದರು. ಬಿಕ್ಕಟ್ಟಿನ ವ್ಯಾಜ್ಯಗಳು ಬಂದರೆ ಜನರು ನರೇಂದ್ರನ ಕಡೆಗೆ ಬರುವರು. ಅವನ ಮುಂದೇ ಅವರು ತಮ್ಮ ಸುಖದುಃಖಗಳನ್ನು ತೋಡಿಕೊಳ್ಳುವರು. ಯಜಮಾನರಿಗೆ ಸಲ್ಲತಕ್ಕ ಸಮಸ್ತವಾದ ಮರ್ಯಾದೆ ಗಳನ್ನು ಜನರು ಸಂತೋಷದಿಂದಲೂ ಆದರದಿಂದಲೂ ನರೇಂದ್ರನಾಥನಿಗೆ ಸಲ್ಲಿಸಲಾರಂಭಿಸಿದರು. ಅವನಿಗೆ ತಿಳಿಯದಿದ್ದ ಸಂಗತಿಯೇ ಇರಲಿಲ್ಲ.

ಇಷ್ಟು ದಿವಸ ನವಕುಮಾರನೂ ಅವನ ಗುಮಾಸ್ತನಾದ ಗೋಕುಲ ದಾಸನೂ ಊರಲ್ಲಿ ಪ್ರಧಾನಪುರುಷರಾಗಿದ್ದರು. ಈಗ ನವಕುಮಾರನು ಕೇವಲ ಸರಕಾರದಿಂದ ನಿಯಮಿಸಲ್ಪಟ್ಟ ವ್ಯವಸ್ಥಾಪಕನೇ ಹೊರತಾಗಿ ಊರ ಜನರಿಗೆ ನಿಯಾಮಕನು ನರೇಂದ್ರನೇ ಆಗಿದ್ದನು. ಸರ್ವತಂತ್ರಸ್ವತಂತ್ರನಾದ ನವಕುಮಾರನು ಈಗ ನರೇಂದ್ರನ ಗುಮಾಸ್ತನಂತೆ ಕಂಡನು. ಗೋಕುಲ ದಾಸನಂತೂ ಯಾವದೋ ಗಿಡದ ತೊಪ್ಪಲನಾಗಿ ಹೋದನು.

ಊರ ಜನರಿಗೆ ನರೇಂದ್ರನ ಬೆಂಬಲವಾದ್ದರಿಂದ ಗೋಕುಲದಾಸನ ಮೆರವಣಿಗೆಗೂ ಘನಶ್ಯಾಮನ ಉರವಣಿಗೆಗೂ ಯಾರೂ ಉಪ್ಪು ಹಾಕಲಿಲ್ಲ. ಕಟ್ಟಳೆಗಿಂತಲೂ ಹೆಚ್ಚಿನ ಹಣವನ್ನು ನವಕುಮಾರನಿಗಾಗಲೀ ಗೋಕುಲ ದಾಸನಿಗಾಗಲೀ ಆ ವರುಷ ರೈತರು ಕೊಡಲೇ ಇಲ್ಲ. ಇದಕ್ಕೆಲ್ಲ ನರೇಂದ್ರನೇ ಕಾರಣನೆಂದು ತಿಳಿದು ಗೋಕುಲದಾಸನು ಅವನ ಮೇಲೆ ಹೆಚ್ಚಾಗಿ ಹಲ್ಲು ತಿನ್ನಲಾರಂಭಿಸಿದನು.

ಕಡೆಗೆ ಬೇಸತ್ತು ಗೋಕುಲದಾಸನು ಒಂದು ನೆವದಿಂದ ನವಕುಮಾರನ ಬಳಿಗೆ ಬಂದು ಆಕ್ಕಸದಿಂದೆ ಅಂದದ್ದು: "ಹಿಂದಕ್ಕೆ ಶ್ರೀಶನ ಪೀಡೆಗಾಗಿ ಎದ್ದು ಹೋಗುವ ಪ್ರಸಂಗವು ಬಂದಂತೆ ಮತ್ತೆ ಈಗ ನರೇಂದ್ರನ ಕಾಲಲ್ಲಿ ಬಂದಿದೆ. ಇದು ತಕ್ಕೊಳ್ಳಿ ನಿಮ್ಮ ಲೆಕ್ಕಪತ್ರ. ಧನಿಯರು ಇನ್ನೇನು ಹೇಳಿದರೂ ನಾನು ಈ ಊರಲ್ಲಿ ನಿಂತು ನೀರು ಕುಡಿಯುವಂತೆ ಇಲ್ಲ!"

"ಮತ್ತೇನು ಗೋಕುಲದಾಸ?"

"ಏಕನಿಷ್ಠೆಯಿಂದ ಸ್ವಾಮಿಸೇವೆ ಮಾಡಿದ್ದರ ಫಲವು ದೊರಕಿತು

ಮತ್ತಿನ್ನೇನು ? ” ಎಂದು ಗೋಕುಲದಾಸನು ಮತ್ತಿಷ್ಟು ಆವೇಶದಿಂದ ನುಡಿದನು.

“ ಹೇಳಬಾರದೆ, ಏನಾಯಿತು ? ”

“ ದೇವರೂ, ಪ್ರತ್ಯಕ್ಷ ನನ್ನ ಮಗನನ್ನು ಒಕ್ಕಲಿಗರು ರಾಜಮಾರ್ಗ ದಲ್ಲಿ ಹೊಡೆದರ್‍ರಿ ! ” ಎಂದು ಅಳುವವರ ಧ್ವನಿ ತೆಗೆದು ಆ ನಟನು ಅಂಗಲಾಚಿ ಹೇಳಿಕೊಂಡನು.

“ ಏನು ! ಒಕ್ಕಲಿಗರು ನಿನ್ನ ಮಗನನ್ನು ಬಡಿದರೇ ? ” ಎಂದು ಆಶ್ಚರ್ಯದಿಂದ ನವಕುಮಾರನು ಕೇಳಿದನು.

“ ಅಹುದು ದೇವರೂ ! ”

“ ಕಾರಣವೇನು ? ”

“ ಕುಚೇಷ್ಟೆಗೆ ಕಾರಣ ಬೇಕಾಗುತ್ತದೇನು ? ನರೇಂದ್ರನಾಥನ ಪ್ರೋತ್ಸಾಹನೆ, ಮತ್ತಿನ್ನೇನು ? ”

ಘನಶ್ಯಾಮನು ಕುದುರೆಯನ್ನೇರಿಕೊಂಡು ಅಗಸೆಯಲ್ಲಿ ಬಂದಾಗ ಒಬ್ಬ ಒಕ್ಕಲಿಗನ ತುಂಬಿದ ಬಂಡಿಯು ಅಲ್ಲಿ ಒಗ್ಗಾಲಿಯಾಗಿ ಬಿದ್ದಿತ್ತು. ಮೂರ್ಖ ನಾದ ಆ ಘನಶ್ಯಾಮನು ಈಗಲೇ ಹಾದಿಯನ್ನು ಬಿಡಿಸೆಂದು ಆ ಒಕ್ಕಲಿಗನಿಗೆ ಆಜ್ಞಾಪಿಸಿದನು. ಆದರೆ ಅವನು ತೆಗೆಯುವದು ಹೇಗೆ ? ಘನಶ್ಯಾಮನು ತುಸು ತಡವಾದದ್ದನ್ನು ಸಹಿಸದೆ ಆ ಒಕ್ಕಲಿಗನನ್ನು ತನ್ನ ಕೈಯಲ್ಲಿಯ ಚಬಕದಿಂದ ದನ ಬಡಿದ ಹಾಗೆ ಬಡಿಯಲು, ಊರಲ್ಲಿಯ ಒಬ್ಬಿಬ್ಬ ಸಂಭಾವಿತರು ಆ ಬಡ ಒಕ್ಕಲಿಗನನ್ನು ಬಿಡಿಸಿಕೊಳ್ಳಲಿಕ್ಕೆ ಹೋದರು. ಘನಶ್ಯಾಮನು ಆವೇಶದಿಂದ ಆ ಜನರನ್ನೂ ಹೊಡೆಯ ಹೋಗಲಾಗಿ ನಾಲ್ಕು ಜನರು ಕೂಡಿ ಘನಶ್ಯಾಮನನ್ನು ಹಿಡಿದು ಒಳಿತಾಗಿ ತಳಿಸಿದ್ದರು. ಇದನ್ನೆಲ್ಲ ಗೋಕುಲದಾಸನು ಯಾಕೆ ಹೇಳುವನು ?

“ ಗೋಕುಲದಾಸ, ಈಗೀಗ ನರೇಂದ್ರನು ಊರಲ್ಲಿ ಬಹಳ ಚೇಷ್ಟೆ ಗಳನ್ನು ಎಬ್ಬಿಸಿರುವನೆಂದು ನಾನು ಕೇಳಿದ್ದೇನೆ. ಆ ನಿನ್ನ ಮಗನ ಬಡಿದವ ರನ್ನೂ ನರೇಂದ್ರನನ್ನೂ ಕೂಡಿಯೇ ದಂಡಿಸುವೆನು. ” ಎಂದು ನವಕುಮಾ ರನು ಹೇಳಿ ಗೋಕುಲದಾಸನನ್ನು ಸಮಾಧಾನಗೊಳಿಸಿದನು.

ಇದು ಆದೀತು. ಆದರೆ ನರೇಂದ್ರನ ವರ್ತನದಿಂದ ಊರಲ್ಲಿ ಅನೇಕ

ದುಷ್ಪರಿಣಾಮಗಳು ಉದ್ಭವಿಸುವ ಸಂಭವವಿದೆ. ಊರಲ್ಲಿ ನ್ಯಾಯಗಳ ಪಂಚಾಯತಿ ಮಾಡುವವರು ನೀವಿರಲು ಜನರು ತಮ್ಮ ನ್ಯಾಯಗಳನ್ನು ತೆಗೆದುಕೊಂಡು ನರೇಂದ್ರನ ಬಳಿಗೆ ಹೋಗುತ್ತಾರೆ. (ಗೋಕುಲದಾಸನು ತಿನ್ನುವ ಲಂಚವನ್ನು ಮುಗ್ಗಿಸುತ್ತಾರೆ!) ಈ ವರ್ತಮಾನವು ಮಾನಸಿಂಹನಿಗೆ ತಿಳಿದರೆ ಏನಾಗುತ್ತದೆಂಬದನ್ನು ಧನಿಯರು ಬಲ್ಲರೇನು? ಜನರಿಗೆ ನಿಮ್ಮಿಂದ ನ್ಯಾಯ ಸಿಕ್ಕುವದಿಲ್ಲೆಂಬದು ಸ್ಪಷ್ಟವಾಗುವದಿಲ್ಲವೆ? ವಿಶ್ವಾಸದಿಂದ ನಿಮ್ಮನ್ನು ಇಲ್ಲಿ ಇಟ್ಟಿರಲು ನೀವು ಅನ್ಯಾಯ ಮಾಡುವಿರೆಂಬ ವರ್ತಮಾನವು ಬಾದಶಹನಿಗೆ ತಿಳಿದರೆ ಆಮರಣ ಕಾರಾಗ್ರಹದಲ್ಲಿ ಇರದೆ ನೀವು ಮತ್ತೆಲ್ಲಿರುವಿರಿ? ತೆರಿಗೆಯನ್ನು ಎತ್ತುವಾಗ ನೀವು ಜನರನ್ನು ಪೀಡಿಸುತ್ತಿರುವಿರೆಂದು ರೈತರೆಲ್ಲರೂ ಮಾನಸಿಂಹರಾಜನ ಬಳಿಗೆ ದೂರು ಹೇಳಿಕೊಳ್ಳುವವರಿದ್ದಾರಂತೆ! ಬಾದಶಹನು ಕೊಲೆಗಡಕರನ್ನು ಕ್ಷಮಿಸಿದರೂ ಕ್ಷಮಿಸುವನು; ಆದರೆ ರೈತರನ್ನು ಪೀಡಿಸುವವನಿಗೆ, ಅವನು ಅಕಬರನಲ್ಲ, ಪ್ರತ್ಯಕ್ಷ ಯಮರಾಜನೇ. ಇದೆಲ್ಲ ನರೇಂದ್ರನಾಥನ ದುರ್ಬೋಧನದ ಪರಿಣಾಮವು. ಅವನ ಪಾರಿಪತ್ಯವನ್ನು ಮಾಡದಿದ್ದರೆ ನಿಮಗೆ ಕ್ಷೇಮವಿಲ್ಲ."

ತನ್ನ ಮಂತ್ರಿಯ ಮಾತು ಕೇಳಿ ನವಕುಮಾರನು ಭೀತಿಯಿಂದ ಗದಗದ ನಡುಗಿದನು. ಪ್ರತಾಪಶಾಲಿಯಾದ ಅಕಬರನ ದರ್ಪವೇ ಅಂಥಾದ್ದು. ಅವನ ರಾಜದಂಡದ ಘೋರತರವಾದ ಪೆಟ್ಟು ಸ್ವಲ್ಪ ಜನರ ಮೇಲೆ ಬೀಳುತ್ತಿದ್ದರೂ ಅವನ ಭೀತಿಯ ದಂಡವು ದ್ರೋಹಿಗಳಿದ್ದಲ್ಲಿ ಒಳಗಿಂದೊಳಗೇ ಶಾಸಿಸುತ್ತಿತ್ತು. ಇದನ್ನೆಲ್ಲ ನೆನೆದು ನವಕುಮಾರನು ದೀನನಾಗಿ ತನ್ನ ಗುಮಾಸ್ತನನ್ನು ಕುರಿತು ಕೇಳಿದ್ದು:

"ನೀನು ಹೇಳುವದರಲ್ಲಿ ತಥ್ಯಾಂಶವಿರುವದು. ಅದಕ್ಕೆ ಏನು ಉಪಾಯ ಮಾಡಬೇಕೆಂಬುದನ್ನು ನೀನೇ ಹೇಳು. ನನಗಂತೂ ಏನೂ ತೋಚಲೊಲ್ಲದು. ನೀನು ನಮಗೆ ಕೇವಲ ಆವಶ್ಯಕವಾದ್ದರಿಂದ ಕೇಳುತ್ತೇನೆ."

"ಇದಕ್ಕೊಂದೇ ಉಪಾಯವುಂಟು. ಆ ಉಪಾಯವು ಉಚಿತವಾದದ್ದೋ ಅನುಚಿತವಾದದ್ದೋ ಎಂದು ತಕ್ಕಡಿಯಲ್ಲಿ ತೂಗುವ ಸಮಯ ಇದಲ್ಲ. ನಾನು ಹೇಳಿದ ಹಾಗೆ ಮಾಡುವದಿದ್ದರೆ ಹೇಳುವೆನು. ಇಲ್ಲದಿದ್ದರೆ

ಹೇಳಿ ಫಲವೇನು ?" ಎಂದು ಗೋಕುಲದಾಸನು ನವಕುಮಾರನ ಭಯಗ್ರಸ್ತ ವಾದ ಸ್ಥಿತಿಯನ್ನು ಕಂಡು ಮಾತಾಡಿದನು.

"ಮಾಡಲೇಬೇಕು. ನಿರ್ವಾಹವೆಲ್ಲಿದೆ ? ನಾವು ಪಾರಾದರೆ ಸಾಕು. ವಿಹಿತಾವಿಹಿತದ ನಿರ್ಣಯವು ಯಾರಿಗೆ ಬೇಕಾಗಿದೆ ?"

"ನೀವು ಮಾನಸಿಂಹರಾಜನಿಗೆ ನರೇಂದ್ರನ ವಿರುದ್ಧವಾಗಿ ಒಂದು ಒಕ್ಕಣಿಕೆಯನ್ನು ಬರೆದು ಹಾಕಿರಿ. ಅದರಲ್ಲಿ ನರೇಂದ್ರನು ಅಹಂಕಾರದ ಮದದಿಂದ ಉದ್ದಾಮನಾಗಿ ನಿಮ್ಮ ಕಾರಭಾರಕ್ಕೆ ಪ್ರತಿಕೂಲನಾಗಿ ವರ್ತಿಸುವ ದಲ್ಲದೆ ಊರಲ್ಲಿಯ ಕೆಲ ಜನರನ್ನು ಕೂಡಿಕೊಂಡು ಬಾದಶಹನ ವಿರುದ್ಧ ವಾಗಿ ಬಂಡುಮಾಡುವ ಪ್ರಯತ್ನದಲ್ಲಿ ಇರುವನೆಂದು ಬರೆದು, ಇನ್ನು ಮುಂದೆ ನರೇಂದ್ರನನ್ನು ಸುಭೇದಾರರು ಬೀರನಗರದಲ್ಲಿಯೇ ಇಡುವದಾದರೆ ನಿಮ್ಮಿಂದ ಬೀರನಗರದ ವ್ಯವಸ್ಥೆಯ ಕೆಲಸವು ಆಗದೆಂದು ತಿಳಿಸಿರಿ. ನಾನು ಹೇಳಿದ ಸೂಚನೆಯು ಸತ್ಯವಾಗಿರಲಿ ಅಸತ್ಯವಾಗಿರಲಿ, ಮಾನಸಿಂಹನಿಗೆ ಕೂಡ ಸ್ವತಂತ್ರವಾಗಿ ನರೇಂದ್ರನನ್ನು ಕ್ಷಮಿಸುವ ಅಧಿಕಾರವಿಲ್ಲ. ಮೇಲಾಗಿ ಬಂಡಿನ ಆರೋಪವು ರಾಜಕಾರಣದ್ದಾದ್ದರಿಂದ ಅದರ ಬಗ್ಗೆ ಬಹಿರಂಗವಾದ ವಿಚಾರಣೆ ನಡೆಯಲಾರದು. ಇನ್ನು ಅಂತರಂಗದ ಸ್ಥಿತಿಯನ್ನು ಸರಕಾರಕ್ಕೆ ತಿಳಿಸುವವರು ನಾವೇ. ಅಂದ ಮೇಲೆ ನಾವು ಬರೆದದ್ದು ಎಂದಿಗೂ ಸುಳ್ಳಾಗಲಾರದು."

ನವಕುಮಾರನಿಗೆ ಈ ಸೂಚನೆಯು ಪ್ರಶಸ್ತವಾಗಿ ಕಂಡದ್ದರಿಂದ ಅವನು ಸಮಾಧಾನದ ಉಸುರುಗರೆದು "ಗೋಕುಲದಾಸ, ನಾವು ಬರೆದದ್ದ ರಿಂದ ನರೇಂದ್ರನಿಗೆ ಏನಾದೀತು ?" ಎಂದು ತುಸು ವ್ಯಗ್ರನಾಗಿಯೂ ಕೇಳಿದನು.

"ಹತ್ತೆಂಟು ವರುಷ ಕಾರಾಗೃಹದ ಬಹುಮಾನವಾದೀತು. ಅದರ ಗೊಡವೆ ನಮಗೇಕೆ ?"

ಈ ಪ್ರಕಾರವಾಗಿ ಒಳಗಿಂದೊಳಗೆ ಕಾರಸ್ಥಾನಗಳು ನಡೆದವು.

---

## ಹದಿನೇಳನೆಯ ಅಧ್ಯಾಯ

## ಪ್ರೇಮಿಗಳ ವಿಯೋಗವು

ಒಂದು ದಿವಸ ನರೇಂದ್ರನಾಥನು ಅನೇಕ ವಿಚಾರಗಳಿಂದ ಗ್ರಸ್ತನಾಗಿ ಧ್ಯಾನಿಸುತ್ತ ಕುಳಿತಾಗ ರಾಜಪುರುಷನಾದ ರಾವುತನೊಬ್ಬನು ಅವನ ಬಳಿಗೆ ಬಂದು ಪ್ರಣಾಮ ಮಾಡಿ ಸುಭೇದಾರರ ಆಜ್ಞಾಪತ್ರವನ್ನು ಸ್ವೀಕರಿಸ ಬೇಕೆಂದು ಹೇಳಿ ಒಂದು ಪತ್ರವನ್ನು ಅವನ ಸ್ವಾಧೀನ ಮಾಡಿ ಹೊರಟು ಹೋದನು. ನವಕುಮಾರನ ಮುಖಾಂತರದಿಂದಲ್ಲದೆ ತನಗೇ ಸುಭೇದಾರರು ಬೇರೆ ಆಜ್ಞಾಪತ್ರವನ್ನು ಯಾಕೆ ಬರೆಸಿದರೆಂದು ನರೇಂದ್ರನು ಲಗಬಗೆಯಿಂದ ಅದನ್ನು ಒಡೆದು ಓದಿದನು. ಆದರ ಅಭಿಪ್ರಾಯವು ಕೆಳಗೆ ಬರೆದಂತೆ ಇತ್ತು :

ರಾಜಶ್ರೀ ನರೇಂದ್ರನಾಥರಾಯ,
ಜಮೀನದಾರ ಬೀರನಗರ ಇವರಿಗೆ—

ಆಜ್ಞಾಪತ್ರವೇನಂದರೆ : ಜಗನ್ನಿಯಾಮಕನಾದ ಪರಮಾತ್ಮನ ಪ್ರತಿನಿಧಿಗಳಾಗಿ ಬಂದ ಪುಣ್ಯಪ್ರತಾಪರೂ, ಮಹಾಪರಾಕ್ರಮಿಗಳೂ, ಅನೇಕ ರಾಷ್ಟ್ರಗಳ ಅಧಿಪತಿಗಳೂ, ನೃಪಮಂಡಲಕ್ಕೆ ಸಾರ್ವಭೌಮರೂ ಆದ ಶ್ರೀಮಂತ ಅಕಬರಶಹಾ ಬಾದಶಹರ ಮುಖ್ಯ ಸೇನಾಪತಿಗಳೂ, ಅಂಬರದ ರಾಜರೂ, ಬಂಗಾಲದ ಸುಭೇದಾರರೂ ಆದ ರಾಜಾ ಮಾನಸಿಂಹರವರು ತಿಳಿಸುವದೇನಂದರೆ :

"ನಿಮ್ಮ ಪೂರ್ವಜರು ಪರಾಕ್ರಮಶಾಲಿಗಳೂ, ರಾಜನಿಷ್ಠರೂ ಆಗಿದ್ದದ್ದನ್ನು ಅವಲೋಕನದಲ್ಲಿ ತಂದದ್ದಲ್ಲದೆ ನಾವು ಸ್ವತಃ ನಿಮ್ಮ ಪರಾ ಕ್ರಮವನ್ನೂ, ಚಾತುರ್ಯವನ್ನೂ ಕಂಡು ನಿಮ್ಮನ್ನು ಬಾದಶಹರ ಸೇನೆ ಯಲ್ಲಿ ಫೌಜದಾರರನ್ನಾಗಿ ನಿಯಮಿಸಿದ್ದೇವೆ. ಈ ಆಜ್ಞಾಪತ್ರವು ನಿಮಗೆ ತಲ್ಪಿದ ನಾಲ್ಕನೆಯ ದಿವಸ ಪ್ರಾತಃಕಾಲದಲ್ಲಿಯೇ ನೀವು ರಾಜಮಹಾಲಿಗೆ ಬಂದು ನಮ್ಮ ದರ್ಶನವನ್ನು ಹೊಂದಬೇಕು. ತಪ್ಪಿದರೆ ನೀವು ಬಾದಶಹ ರವರ ದ್ರೋಹಿಗಳೆಂದು ತಿಳಿದು ನಿಮಗೆ ತಕ್ಕ ಶಾಸನವಾಗುವದು."

ನರೇಂದ್ರನು ಆ ಪತ್ರವನ್ನು ತೆಗೆದುಕೊಂಡವನೇ ನೆಟ್ಟಗೆ ನವಕುಮಾರನಿದ್ದಲ್ಲಿಗೆ ಬಂದನು. ಆ ಸಮಯದಲ್ಲಿ ನವಕುಮಾರನಾದರೂ ಮಾನಸಿಂಹರಾಜರ ಕಡೆಯಿಂದ ತನಗೆ ಬಂದಿದ್ದ ಆಜ್ಞಾಪತ್ರವನ್ನು ಓದುತ್ತ ಕುಳಿತಿದ್ದನು. ಅವನು ನರೇಂದ್ರನನ್ನು ಕಾಣುತಲೆ ತನ್ನ ಕೈಯಲ್ಲಿದ್ದ ಪತ್ರವನ್ನು ಬಚ್ಚಿ ಇಟ್ಟು, "ಯಾರು ! ನರೇಂದ್ರನಾಥನೇನು ? ಬಾ. ಏನು ಸಮಾಚಾರ ? " ಎಂದು ಕೇಳಿದನು.

"ಮಾವನವರೇ, ಸಮಾಚಾರವೇನು. ಇದು ನೋಡಿರಿ. ಮಾನಸಿಂಹರಾಜನ ಆಜ್ಞಾಪತ್ರ. ಇದರ ಉತ್ಪತ್ತಿಯು ನಿಮ್ಮ ಕಾರಸ್ಥಾನದಲ್ಲಿಯೇ ಇರುವದೆಂಬ ಬಗ್ಗೆ ಸಂದೇಹವಿಲ್ಲ. " ಎಂದು ಹೇಳಿ ಪತ್ರವನ್ನು ಅವನ ಸ್ವಾಧೀನ ಮಾಡಿದನು.

ನವಕುಮಾರನು ಆ ಆಜ್ಞಾಪತ್ರವನ್ನೋದಿ ಮತ್ತೆ ನರೇಂದ್ರನ ಸ್ವಾಧೀನ ಮಾಡಿ ಅವನ ಮೋರೆಯನ್ನು ಮಿಕಿಮಿಕಿ ನೋಡಿದನು.

"ಆಗಲಿ ಈ ಆಜ್ಞಾಪತ್ರವು ಈ ಸಮಯದಲ್ಲಿ ನನಗೆ ಇಷ್ಟವೇ ಆಗಿದೆ. ನಾನು ನಾಳೆ ಬೆಳಗಿನಲ್ಲಿಯೇ ರಾಜಮಹಾಲಿಗೆ ಹೊರಟೆನು. ನನ್ನ ಹಿಂದೆ ಜಗತ್ಸುಂದರಿಯೊರ್ವಳೆ ಇಲ್ಲಿ ಇರುವವಳು. ನಾನು ಅವಳ ಬಗ್ಗೆ ಬೇರೆ ವ್ಯವಸ್ಥೆ ಮಾಡುವವರೆಗೆ ದಯಮಾಡಿ ಅವಳ ಜೀವಕ್ಕೆ ಸಂತಾಪವಾಗುವಂತೆ ಮಾಡಬೇಡಿರಿ. ಈ ಮಾತು ನಿಮಗೆ ಸಾಧಿಸಿ ಹೇಳಬೇಕೆಂದೇ ನಾನು ಇಲ್ಲಿಗೆ ಬಂದಿದ್ದೇನೆ. ನಿಮಗೆ ಸ್ವಬುದ್ಧಿಯಿಲ್ಲ. ನೀಚನಾದ ಗೋಕುಲದಾಸನ ಕುಮಂತ್ರಗಳಿಗೆ ಒಳಗಾಗಿ ನೀವು ನಿರಪರಾಧಿಗಳ ಮೇಲೆ ಸಂಕಟಗಳನ್ನು ತಂದಿರುವಿರಿ. ನಿಮಗೆ ನಾನು ಈಗ ಬುದ್ಧಿವಾದವನ್ನು ಹೇಳಲಿಕ್ಕೆ ಬಂದಿಲ್ಲ. ನಾನು ಹೋದ ಬಳಿಕ ನಿರಾಧಾರಿಯಾದ ನಮ್ಮ ತಂಗಿಗೆ ನೀವೇನಾದರೂ ಅಪಾಯವನ್ನು ತಂದಿಡುವಿರೆಂಬ ಭೀತಿಯಿಂದ ಈಗ ನಿಮಗೆ ಸಾರಿ ಹೇಳಲಿಕ್ಕೆ ಬಂದಿದ್ದೇನೆ." ಎಂದು ಹೇಳಿ ನರೇಂದ್ರನಾಥನು ನವಕುಮಾರನನ್ನು ಈಗ ಹರಿದು ತಿನ್ನುವನೋ ಎಂಬಂತೆ ನೋಡಿದನು.

ನವಕುಮಾರನು ದಿಂಗುಬಡಿದಂತವನಾಗಿ " ನರೇಂದ್ರನಾಥ, ಏನು ಮಾತಾಡುವಿ ನೀನು ? ಮಗುವಾದ ಜಗತ್ಸುಂದರಿಗೆ ನಾನು ಅಪಾಯ

ಮಾಡುವೆನೇ ? ” ಎಂದು ಮೋರೆಯನ್ನು ಮೇಲಕ್ಕೆ ಎತ್ತಲಾರದೆ ನುಡಿದನು.

“ ನವಕುಮಾರ ಬೋಸ, ನೀವು ಕೇವಲ ತಿಳಿಗೇಡಿಗಳಾಗಿದ್ದು ಘಾತಕನಾದ ಗೋಕುಲದಾಸನ ಮಾತು ಕೇಳಿ ನಮ್ಮೆಲ್ಲರ ಘಾತವನ್ನು ಮಾಡಿ ಈ ದುರಾತ್ಮನ ಸ್ವಾರ್ಥಕ್ಕೆ ಅನುಕೂಲರಾಗಿರುವಿರಿ. ನೀವು ದುಷ್ಟ ಸ್ವಭಾವದವರಾಗಿದ್ದರೆ ಒಳ್ಳೇದಾಗುತ್ತಿತ್ತು. ದುಷ್ಟರಿಗೆ ದುಷ್ಟನಾಗಿ ನಡ ಕೊಂಡು ನಾನು ನಿಮ್ಮನ್ನು ಪಾತಾಳಕ್ಕೆ ಮೆಟ್ಟುತ್ತಿದ್ದೆನು. ಗೋಕುಲ ದಾಸನ ದುಷ್ಕೃತ್ಯಗಳನ್ನು ಸರಕಾರದ ಮುಂದಿಟ್ಟು ಅವರನ್ನು ಆನೆಯ ಕಾಲಿ ನಲ್ಲಿ ತುಳಿಸುವಷ್ಟು ಸಾಧನಗಳು ನನ್ನಲ್ಲಿ ಇವೆ. ಹಾಗೆ ಮಾಡಿದರೆ ನಿಮ್ಮ ಕುತ್ತಿಗೆಗೂ ಉರುಲು ಬರುವದೆಂದು ತಿಳಿದು ನಾನು ಸುಮ್ಮನಿದ್ದೇನೆ.”

ಈ ಮಾತು ಕೇಳಿ ಹೀನಸತ್ವನಾದ ನವಕುಮಾರನು ಥರಥರನೆ ನಡುಗಿ ಮೂರ್ಖನಂತೆ ನರೇಂದ್ರನನ್ನು ಮಿಕಿಮಿಕಿ ನೋಡಿ “ ಗೋಕುಲದಾಸನ ತಪ್ಪು ಗಳಾದರೂ ಏನು ? ”

“ ಶ್ರೀಶನೇನು ತಪ್ಪು ಮಾಡಿದನೆಂಬ ಮಾತು ನಿಮ್ಮ ಬಾಯಿಗೆ ಬಂದಿತ್ತೆ ? ಗೋಕುಲದಾಸನ ತಪ್ಪು ಕೇಳುತ್ತೀರಾ ? ಪ್ರಸಂಗ ಬಂದರೆ ಅವನ ತಪ್ಪುಗಳನ್ನು ಸರಕಾರಕ್ಕೆ ತಿಳಿಸುತ್ತೇನೆ. ನನಗಿನ್ನು ಅಪ್ಪಣೆ ಕೊಡಿರಿ, ಬಹಳ ಮಾಡಿ ಇದೇ ನಮ್ಮಾ ನಿಮ್ಮಾ ಕಡೆಯ ಭೆಟ್ಟಿ. ಹೋಗುವಾಗ ನಿಮಗೊಂದು ಹಿತದ ಮಾತು ಹೇಳುತ್ತೇನೆ, ಚನ್ನಾಗಿ ಲಕ್ಷದಲ್ಲಿಡಿರಿ. ”

“ ಏನು ಮಾತದು ? ”

“ ನೀವು ಶ್ರೀಶನನ್ನು ಹೊರಗೆ ಹಾಕಿದ್ದರಿಂದ ಗೋಕುಲದಾಸನ ಅರ್ಧ ಕೆಲಸವಾಯಿತು. ನನ್ನ ಮೇಲೆ ಗದೆ ತಂದಿರಿ. ಆದರಿಂದ ಆ ದುರಾತ್ಮನ ಕಾರ್ಯವು ಸಂಪೂರ್ಣವಾಗಿ ಸಾಧಿಸಿದಂತೆಯೇ ಇದೆ. ನಾನೂ ಶ್ರೀಶ ಚಂದ್ರನೂ ಇಬ್ಬರೂ ಇಲ್ಲದಾದ ಬಳಿಕಂತೂ ಆ ದುರಾತ್ಮನು ನಿಮ್ಮ ಗೋಣೇ ಮುರಿಯುವನು. ”

“ ಏನಂದಿರಿ ನರೇಂದ್ರನಾಥ ? ” ಎಂದು ನವಕುಮಾರನು ವ್ಯಗ್ರನಾಗಿ ಕೇಳಿದನು.

“ ಹೇಳುತ್ತೇನೆ ಕೇಳಿರಿ; ಶ್ರೀಶನು ಹೋದಂದಿನಿಂದ ನೀವು ನಿಪುತ್ರಿಕ

ರಾದಿರಿ. ನಾನು ಹೋದ ಬಳಿಕ ಹೇಮಲತೆಯ ಪತಿಯಾಗತಕ್ಕವನು ಹೊರಟುಹೋದಂತಾಯಿತು. ಇನ್ನು ಗೋಕುಲದಾಸನು ನಿಮ್ಮನ್ನು ವಂಚಿಸಿಯಾಗಲಿ ಮತ್ತೇನಾದರೂ ಮಾಡಿಯಾಗಲಿ ಹೇಮಲತೆಯು ಘನಶ್ಯಾಮನ ಹೆಂಡತಿಯಾಗುವಂತೆ ಮಾಡುವ ಆಲೋಚನದಲ್ಲಿ ಇದ್ದಾನೆ. ಘನಶ್ಯಾಮನು ಹೇಮಲತೆಯ ಪತಿಯಾದ ಬಳಿಕ ದೇವೀಪುರದ ಜಮೀನದಾರನೇ ಆಗುವನಲ್ಲೆ ? ಈ ಮಾತು ನಾನು ಕಲ್ಪಿಸಿ ಹೇಳುವದಿಲ್ಲ. ಘನಶ್ಯಾಮನೇ ತಾನು ಹೇಮಲತೆಯ ಪತಿಯಾಗತಕ್ಕವನೆಂದು ಕೆಲವರ ಮುಂದೆ ಆಡಿ ತೋರಿಸಿದ್ದಾನೆ. ಹೇಮಲತೆಯ ಸುಖದುಃಖಗಳ ವಿಚಾರ ಮಾಡತಕ್ಕವರು ನೀವು ನೋಡಿಕೊಳ್ಳಿರಿ.'' ಎಂದು ಹೇಳಿದವನೇ ನರೇಂದ್ರನು ತನ್ನ ಕೋಣೆಯ ಕಡೆಗೆ ನಡೆದನು.

ಅವನು ಹೋಗುವದನ್ನು ಕಂಡು ನವಕುಮಾರನು 'ಆತುರನಾಗಿ "ನರೇಂದ್ರರೇ, ತುಸು ನಿಲ್ಲಿರಿ'' ಎಂದು ಮೂರು ನಾಲ್ಕು ಬಾರಿ ಕೂಗಿಕೊಂಡರೂ ಆ ಮನಸ್ವಿಯು ಹಿಂದಿರುಗಿ ನೋಡಲಿಲ್ಲ.

ನರೇಂದ್ರನು ತನ್ನ ಕೋಣೆಗೆ ಬಂದವನೇ ರಾಜಮಹಾಲಿಗೆ ಹೊರಡಲಿಕ್ಕೆ ಸಿದ್ಧತೆ ಮಾಡತೊಡಗಿನು. ಸೇವಕನ ಕಡೆಯಿಂದ ತನ್ನ ಬಟ್ಟೆಗಳನ್ನೆಲ್ಲ ಪೆಟ್ಟಿಗೆಗಳಲ್ಲಿ ತುಂಬಿಸಿ ಇಡಿಸಿದನು. ಪುಸ್ತಕಗಳನ್ನು ಬಾಗಿಲಮಾಡದಲ್ಲಿಟ್ಟು ಬೀಗಹಾಕಿದನು. ಅವಶ್ಯವಾದ ಕಾಗದಪತ್ರಗಳನ್ನು ಒಯ್ಯುವದಕ್ಕಾಗಿ ಬೇರೆ ತೆಗೆದಿಟ್ಟನು. ಅವನ ವೆಚ್ಚಕ್ಕಾಗಿ ಅವನಿಗೆ ಸಲ್ಲತಕ್ಕ ಹಣದಲ್ಲಿ ಉಳಿದಷ್ಟು ಹಣವನ್ನು ಜಗತ್‌ಸುಂದರಿಯಗೋಸ್ಕರ ಸುಶೀಲಾದೇವಿಯ ಬಳಿಯಲ್ಲಿ ಕೊಟ್ಟು ಜಗತ್‌ಸುಂದರಿಯು ನಿಮಗೆ ಒಪ್ಪಿರುವಳೆಂದು ಹೇಳಿ ಸುಶೀಲಾದೇವಿಗೆ ಹೇಳಿಟ್ಟನು. ಇಷ್ಟೆಲ್ಲ ಸಿದ್ಧತೆಯಾದ ಬಳಿಕ ಅವನು ತನ್ನ ಕೋಣೆಗೆ ಬಂದು, ಪಲ್ಲಂಗದ ಮೇಲೆ ಚಿಂತಾಕ್ರಾಂತನಾಗಿ ಮಲಗಿಕೊಂಡು ವಿಚಾರದಲ್ಲಿ ನಿಮಗ್ನನಾದನು.

"ಸುಖಜೀವಿಗಳಾಗಿ ಹುಟ್ಟಿದವರು ಮೊದಲಿನಿಂದ ಕಡೆಯ ವರೆಗೆ ಸುಖಜೀವಿಗಳೇ ! ದುಃಖಭಾಗಿಗಳು ಮಾತ್ರ ಜನ್ಮದಾರಭ್ಯ ಸಾಯುವ ವರೆಗೆ ದುಃಖಭಾಗಿಗಳೇ ಅಲ್ಲವೆ ! ಇದೇನು ಭಗವಂತನಲ್ಲಿ ನ್ಯಾಯವಿಲ್ಲವೋ, ಏನು ನಾವು ಹೋದ ಜನ್ಮದಲ್ಲಿ ಮಾಡಿದ ದುಷ್ಕರ್ಮಗಳ ಪರಿಪಾಕವೊ ? ಹುಟ್ಟಿದ

ಸ್ವಲ್ಪ ದಿವಸಗಳಲ್ಲಿಯೇ ತಂದೆತಾಯಿಗಳನ್ನು ಕಳಕೊಂಡೆನು. ನನ್ನನ್ನು ಪಂಚಪ್ರಾಣವೆಂದು ತಿಳುಕೊಂಡು ಪ್ರೇಮದಿಂದ ಸಂರಕ್ಷಿಸುವ ಮುತ್ತಾತರು ಇನ್ನೊಂದು ನಾಲ್ಕುವರ್ಷ ಬದುಕಬಾರದಿತ್ತೆ? ಆದರೂ ಆಗಲಿ, ತೋಡರಮಲ್ಲನಂಥ ಜಾಣನು ನಮಗೆ ವೈರಿಯಾದ ಮೂರ್ಖನನ್ನೇ ನಮ್ಮ ಸಂರಕ್ಷಕನನ್ನಾಗಿ ಗೊತ್ತುಪಡಿಸಬಹುದೇ? ನಮ್ಮ ದುಷ್ಕರ್ಮಕ್ಕಾಗಿಯೇ ಹಿಂದುಸ್ಥಾನದ ಸಾಮ್ರಾಜ್ಯವನ್ನು ತೂಗುವಂಥ ಧೂರ್ತನು ಇಂಥ ತಪ್ಪು ಮಾಡಿದನು.

ಮನುಷ್ಯನಿಗೆ ತಂದೆತಾಯಿಗಳ ನಂತರ ಹಿತೈಷಿಣಿಯೆಂದರೆ ಹೆಂಡತಿಯು. ಹೇಮಲತೆಯಂಥ ಪ್ರೇಮಮಯಳಾದ ಕಾಮಿನಿಯು ನನ್ನ ಪರಿತಾಪಗಳನ್ನು ಪರಿಹರಿಸುವಳೆಂದು ಹಿರಿದಾದ ಆಶೆಯಿಂದ ನಾನಿರುವಷ್ಟರಲ್ಲಿಯೇ ಅದೂ ಬಯಲಾಗಿ ಹೋಯಿತೇ? ದುರಾಗ್ರಹಿಯಾದ ನವಕುಮಾರನೆ, ನನ್ನ ಮನೋರಥವನ್ನೆಲ್ಲ ಮುರಿದುಹಾಕಿದಿಯಾ? ಇನ್ನು ನನಗೆ ಈ ಜಮೀನದಾರಿಯಾಕೆ, ಈ ದೇಶಕೋಶಗಳ್ಯಾಕೆ?

ಹೇಮಲತೆಯು ನನಗೆ ಅಪ್ರಾಪ್ಯಳಾದರೂ ಅವಳನ್ನು ನಾನು ಮರೆದಿರುವದು ಹೇಗೆ? ಆ ಗುಣಮಣಿಗಾದರೂ ನನ್ನ ವಿಯೋಗವು ಸಹಿಸುವದೆ? ರಾಮನವಮಿಯ ಈಚೆಗಂತೂ ನನ್ನ ವಿಷಯವಾಗಿ ಅವಳಲ್ಲಿ ಪ್ರೇಮವು ಅತಿಶಯವಾಗಿ ಬೆಳೆದಿರುವದು. ನಾನು ತಿನ್ನದಿದ್ದರೆ ಆ ನನ್ನ ಹೃನ್ಮಣಿಯು ಬಾಯಿಯಲ್ಲಿ ನೀರು ಹಾಕುವದಿಲ್ಲ. ನಾನು ಚಿಂತಾಕುಲನಾದರೆ ಅವಳು ಕಣ್ಣೀರು ಸುರಿಸುವಳು. ಇದೇ ನನ್ನ ಸೆಲ್ಲೆಯನ್ನು ಕದ್ದೊಯ್ದು ಇದರ ಮೇಲೆ ಮನೋಹರವಾದ ಕಶೀದೆಯನ್ನು ತೆಗೆದು, ಇಲ್ಲಿ "ಹೇಮಲತೆಯ ಪ್ರೇಮನಿಧಾನ" ಎಂದು ಅನ್ಯರಿಗೆ ತಿಳಿಯದಂತೆ ಬರೆದಿದ್ದಾಳೆ. ಇಂಥವಳು ನಾನು ಹೋದ ಬಳಿಕ ಹೇಗೆ ಜೀವಿಸುವಳು? ಮೂಢಾ ನವಕುಮಾರಾ, ನನ್ನ ಮೇಲಿನ ದ್ವೇಷಕ್ಕಾಗಿ ನವಮಂಜರಿಗಳಿಂದ ಮೆರೆಯುತ್ತಿರುವ ಈ ನವಲತೆಯನ್ನು ಅನರ್ಥಕರವಾಗಿ ಬಾಡಿಸಿಬಿಡುವಿಯಲ್ಲವೆ?

ಪಾಪ! ಹೇಮಲತೆಯು ತನಗಾದ ದುಃಖವನ್ನು ಯಾರ ಮುಂದೆ ಹೇಳುವಳು? ಇದ್ದುಬಿದ್ದು ಜಗತ್ಸುಂದರಿಯೊಬ್ಬಳು ತನ್ನ ಗುಟ್ಟಿನವಳು. ಆದರೆ ಇಂಥ ಪ್ರಸಂಗದಲ್ಲಿ ಮುಗ್ಧೆಯಾದ ಆ ಕುಮಾರಿಯು ಏನು ಸಮಾಧಾನ

ಹೇಳಬಲ್ಲಳು ? ಆ ರಾತ್ರಿಯೆಲ್ಲ ಹೇಮಲತೆಯು ವಿಚಾರದಲ್ಲಿಯೇ ಕಳೆದಳು. "ನನ್ನ ಮನೋರಮಣನು ಹೋದನೆಂದರೆ ನಾನಿನ್ನು ಯಾರ ಮುಖವನ್ನು ನೋಡಿ ಸಂತೋಷಪಡಲಿ? ಯಾರ ವಿನೋದದ ಮಾತುಗಳನ್ನು ಕೇಳಿ ತೃಪ್ತಿಹೊಂದಲಿ ? ನರೇಂದ್ರನ ಮುಖವನ್ನು ಕಾಣದೆ ಒಂದು ಅರಗಳಿಗೆ ಹೋದ ಕೂಡಲೆ ನನ್ನ ಮನಸ್ಸು ವಿಹ್ವಲಗೊಳ್ಳುತ್ತಿತ್ತು. ಇನ್ನು ಅವನು ನನ್ನನ್ನು ಅಗಲಿಯೇ ಹೋಗುವನಲ್ಲ! ಅವನು ಹೋದ ಬಳಿಕ ತಂದೆಯು ಅನ್ಯರೊಡನೆ ನನ್ನ ಲಗ್ನಮಾಡುವನೆಂದು ಮದುವೆಯನ್ನು ಹೂಡಿಕೊಂಡು ಕುಳಿತರೆ ನಾನೇನು ಗತಿಮಾಡಲಿ! ಭಾವಿ ಕೆರಿ ಪಾಲಾಗುವದೇ ಸರಿ" ಹೀಗೆ ವಿಚಾರ ಮಾಡುತ್ತ ಮಲಗಿದ ಹೇಮಲತೆಗೆ ಬೆಳತನಕ ನಿದ್ದೆಯೇ ಇಲ್ಲ.

ಅವಳು ಪ್ರಾತಃಕಾಲದಲ್ಲೆದ್ದು ಇಂದು ನನ್ನ ಪ್ರಾಣಕಾಂತನು ಹೊರಟು ಹೋಗುವನು. ಹೋಗುವಾಗ ಅವನಿಗೆ ಏನಾದರೂ ಪ್ರೇಮದ ಕುರುಹು ಕೊಡಬೇಕೆಂದೆಣಿಸಿ ಅವಳು ಮೆಲ್ಲನೆ ಪುಷ್ಪೋದ್ಯಾನದ ಕಡೆಗೆ ನಡೆದಳು. ನರೇಂದ್ರನಾದರೂ ತಾನು ಹೋಗುವದಕ್ಕೆ ಮುಂಚಿತವಾಗಿ ತನ್ನ ಪ್ರಿಯತಮೆಯ ಮುಖವನ್ನು ನೋಡಬೇಕೆಂದು ಮನೆಯಲ್ಲೆಲ್ಲ ಸುಳಿದಾಡಿ ನೋಡಿದನು. ಆದರೆ ಆ ಶಶಿಮುಖಿಯು ಎಲ್ಲಿಯೂ ಕಾಣಲಿಲ್ಲ. ಅವನು ಮತ್ತೆ ತನ್ನ ಕೋಣೆಗೆ ಬಂದು ಚಿಂತಾಕ್ರಾಂತನಾಗಿ ಕಿಟಕಿಯಲ್ಲಿ ನಿಂತು ಸಿಳ್ಳು ಹಾಕುತ್ತಿರುವಾಗ ಹೇಮಲತೆಯು ಉದ್ಯಾನದ ಲತಾಮಂಟಪದಲ್ಲಿ ಸೇರಿದ್ದು ಕಂಡನು. ಸಂಗಡಲೆ ಅವನು ಧಡಧಡ ಪಾವಟಿಗೆಗಳನ್ನು ಇಳಿದು ಉದ್ಯಾನದ ಕಡೆಗೆ ನಡೆದನು.

ಹೇಮಲತೆಯು ಲತಾಮಂಟಪದಲ್ಲಿ ಕುಳಿತು ಬಲು ಮೆಲ್ಲಗೆ ಹಾಡುತ್ತ ಬಕುಲಮಾಲೆಯನ್ನು ಕಟ್ಟುತ್ತಿದ್ದಳು. ಅಷ್ಟರಲ್ಲಿ ಯಾರೋ ನೆಳಲು ಹಾಕಿದ್ದು ಕಂಡು ಚಕಿತಳಾಗಿ ಬಾಗಿಲದ ಕಡೆಗೆ ನೋಡುವಷ್ಟರಲ್ಲಿ ಪ್ರತ್ಯಕ್ಷ ಅವಳ ಮನೋಹರನೇ ಅಲ್ಲಿ ನಿಂತದ್ದು ಕಂಡು ವಿಸ್ಮಿತಳಾಗಿ ಎದ್ದುನಿಂತಳು. ನರೇಂದ್ರನು ಒಳಗೆ ಬಂದವನೇ ಆ ಸುಕುಮಾರಿಯ ಕೈಹಿಡಿದು ಮಂದ್ರವಾದ ಧ್ವನಿಯಿಂದ "ಹೇಮಲತಾ, ಹೋಗಿಬರುತ್ತೇನೆ! ನಮ್ಮದೂ ನಿಮ್ಮದೂ ಇದೇ ಕಡೆಯ ಭೆಟ್ಟಿಯಾಯಿತಲ್ಲೆ!" ಎಂದು ನುಡಿದು ಅವನು ಖಿನ್ನನಾಗಿ ನಿಂತುಕೊಂಡನು.

'ಕಡೆಯ ಭೆಟ್ಟಿ' ಎಂಬೆರಡು ಶಬ್ದಗಳನ್ನು ಕೇಳಿದಾಕ್ಷಣವೇ ಹೇಮ ಲತೆಯು ವ್ಯಾಕುಲಳಾಗಿ ಭರದಿಂದ ನರೇಂದ್ರನನ್ನು ಅಪ್ಪಿಕೊಂಡು ದುಃಖಿ ಸುತ್ತ ಕಣ್ಣೀರು ಸುರಿದಳು.

"ಪ್ರಿಯೇ, ವ್ಯರ್ಥವಾಗಿ ಹೀಗೆ ದುಃಖಿಸಿದರೆ ಏನಾಗುವುದು ?" ಎಂದು ನರೇಂದ್ರನು ತಾನೇ ದುಃಖಿತನಾಗಿ ನುಡಿದು ಹೇಮಲತೆಯ ಕಣ್ಣು ಗಳನ್ನು ತನ್ನ ಸೆಲ್ಲೆಯ ಸೆರಗಿನಿಂದ ಮೆಲ್ಲಗೆ ಒರಿಸಿದನು.

ನಿಟ್ಟುಸುರಿನ ಉಬ್ಬಸದಿಂದ ಬಿಗಿದಿರುವ ಅವಳ ಎದೆಯು ನರೇಂದ್ರನ ಎದೆಗೆ ಒಳಿತಾಗಿ ತಗಲಿ 'ಪ್ರಿಯನೆ, ನನ್ನನ್ನು ಅಗಲಿ ಹೀಗೆ ಹೋಗಲಿಕ್ಕೆ ನಿನಗೆ ತಿಳಿಯುವದಿಲ್ಲವೆ ?' ಎಂದು ಹೇಳಿ ಅವನನ್ನು ಪ್ರಣಯಕೋಪದಿಂದ ದೂಕಿದಳೋ ಎಂಬಂತೆ ಆ ಪ್ರಣಯಿನಿಯು ತೋರಿದಳು. ಅವಳ ಬಾಯಿ ಯಿಂದ ಒಂದು ಅಕ್ಷರವಾದರೂ ಹೊರಡಲೊಲ್ಲದು. ನವಲತೆಯು ಮಾಮರವನ್ನು ಸುತ್ತಿಕೊಂಡಿರುವಂತೆ ಅವಳು ತನ್ನ ಬಾಹುಪಾಶದಲ್ಲಿ ನರೇಂದ್ರನನ್ನು ಹಿಡಿದವಳು ಹಾಗೆಯೇ ನಿಂತುಕೊಂಡಳು. ನರೇಂದ್ರನು ಅವಳ ಮುದ್ದು ಮುಖವನ್ನು ಮೆಲ್ಲನೆ ಎತ್ತಿ ಹಿಡಿದು, "ಹೇಮಾ, ನೀನು ಮೃದುಹಾಸವನ್ನು ತಳೆದು ಹೋಗಿಬಾರೆಂದು ನನಗೆ ಹೇಳುವಿಯಲ್ಲವೆ ?" ಎಂದು ಕೇಳಿ ಅವಳ ಬಿಂಬಾಧರವನ್ನು ಚುಂಬಿಸಿದನು.

ಇಬ್ಬನ್ನಿಯಿಂದ ಕೂಡಿದ್ದರೂ ಪ್ರಫುಲ್ಲಿತವಾದ ಕಮಲವು ಕಂಗೊಳಿಸು ವಂತೆ ಹೇಮಲತೆಯು ಅಶ್ರುಗಳಿಂದ ಯುಕ್ತವಾದ ತನ್ನ ಮುಖದಲ್ಲಿ ಮಂದ ಹಾಸವನ್ನು ತೋರಿ ನರೇಂದ್ರನ ಮುಖವನ್ನು ಯಥೇಷ್ಟವಾಗಿ ನೋಡಿ ಕೊಂಡು "ಕಡೆಯ ಭೆಟ್ಟಿ ಎಂಬ ಅಭದ್ರವಾದ ನುಡಿಯಾಕೆ ?" ಎಂದು ಕೇಳಿದಳು.

"ಹೇಮಲತಾ, ನವಕುಮಾರ ಮಾವಂದಿರು ನಿನ್ನನ್ನು ನನಗೆ ಕೊಡುವದಿಲ್ಲೆಂದು ನಿಶ್ಚಯಿಸಿಕೊಂಡಿರುವರು. ನನಗಂತೂ ಈಗಲೇ ಹೊರಟುಹೋಗಬೇಕಾಯಿತು. ಮರಳಿ ಇಲ್ಲಿಗೆ ಬರುವೆನೋ ಇಲ್ಲವೋ ಕಾಣೆನು. ಬಂದರೂ ಅಷ್ಟರಲ್ಲಿ ನೀನು ಅನ್ಯರ ಸತಿಯಳಾಗಿರುವಿ. ಅಂದ ಮೇಲೆ ಇದು ಕಡೆಯ ಭೆಟ್ಟಿಯೇ ಅಲ್ಲವೆ ?"

"ಪ್ರಿಯರೆ, ದೈವದಲ್ಲಿದ್ದರೆ ನಾನು ಈ ಚರಣಗಳ ದಾಸಿಯೇ ಆಗು

ವೆನು. ಇಲ್ಲದಿದ್ದರೆ ಸನ್ಯಾಸಿನಿಯಾಗುವೆನು ಎಂದು ನಿಶ್ಚಯಿಸಿಕೊಂಡಿರುವ ಈ ಹೇಮಲತೆಯು ಎಂದಿಗಾದರೂ ಪರಸ್ತ್ರೀಯಾಗಬಲ್ಲಳೇ ? ನೀವು ಅಂಥ ವಿಚಾರಕ್ಕೆ ಒಳಗಾಗಬೇಡಿರಿ."

ನರೇಂದ್ರನು ಆ ಲಲಿತಾಂಗಿಯನ್ನು ಮತ್ತೆ ಭರದಿಂದಪ್ಪಿಕೊಂಡು "ಇದು ನಿಶ್ಚಯವೇ ?" ಎಂದು ಕೇಳಿದನು.

"ಸಂಶಯಕ್ಕೆ ಆಸ್ಪದವಿದ್ದರೆ ಇಂಥ ಮಾತುಗಳನ್ನಾಡಬೇಕು." ಎಂದು ಹೇಮಲತೆಯು ಮಂದಹಾಸಗೈದು ತನ್ನ ರಮಣನ ಮುಖವನ್ನು ನೋಡಿ ನುಡಿದಳು.

"ಹೇಮಾ, ಹಾಗೆ ಪ್ರಶ್ನಮಾಡಿದ್ದಕ್ಕೆ ನನ್ನನ್ನು ಕ್ಷಮಿಸು. ಈ ಔಧ್ಧ್ಯತ್ಯಕ್ಕಾದರೂ ನನ್ನನ್ನು ಕ್ಷಮಿಸು !" ಎಂದು ನುಡಿದನು. ಹೇಮ ಲತೆಯು ಲಜ್ಜಾವನತಮುಖಿಯಾಗಿ ಸುಮ್ಮನೆ ನಿಂತಳು.

"ಪ್ರಿಯೇ, ಇನ್ನು ಹೊತ್ತಾಯಿತು. ಅಪ್ಪಣೆ ಕೊಡು" ಎಂದು ನರೇಂದ್ರನು ಮೆಲ್ಲನೆ ಅವಳ ಬಾಹುಪಾಶಗಳನ್ನು ಬಿಡಿಸಿಕೊಳ್ಳಲಾರಂಭಿಸಿದನು.

ಹೇಮಲತೆಯು ತಾನು ಕಟ್ಟಿದ ಬಕುಲಮಾಲೆಯನ್ನು ಪ್ರೇಮದಿಂದ ನರೇಂದ್ರನ ಕೊರಳಿಗೆ ಹಾಕಿ "ಇದು ನನ್ನ ಪ್ರೇಮದ ಕುರುಹು. ಈ ಮಾಲೆಯು ಒಣಗಿದರೂ ಇದು ತನ್ನ ಸುಗಂಧವನ್ನು ಕಳಕೊಳ್ಳುವದಿಲ್ಲ. ಇದನ್ನು ನೋಡಿದಾಗ ಈ ದಾಸಿಯ ಸ್ಮರಣವು ತಮಗಾದರೆ ನಾನು ಧನ್ಯಳೆಂದೆಣಿಸುವೆನು." ಎಂದು ಹೇಳಿ ಪಳಪಳ ಕಣ್ಣೀರು ಸುರಿಸಿದಳು.

ನರೇಂದ್ರನು ತನ್ನ ಬಳಿಯಲ್ಲಿದ್ದ ವಜ್ರದ ಉಂಗುರವನ್ನು ಆ ಕೋಮಲಾಂಗಿಯ ಬೆರಳಿನಲ್ಲಿ ಇಟ್ಟು "ಪ್ರಿಯೇ, ಈ ನಿನ್ನ ಬಕುಲ ಮಾಲೆಯ ಯೋಗ್ಯತೆಯು ಈ ಉಂಗುರಕ್ಕೆ ಬಾರದಿದ್ದರೂ ಇದರ ತೇಜವು ಕೃತಕವಾದದ್ದಲ್ಲ. ಇವನ್ನು ಕಂಡು ನಿನಗೆ ನರೇಂದ್ರನ ಸ್ಮರಣೆಯಾಗುವದೆ ?" ಎಂದು ಕೇಳಿದ ಆ ಧೀರನ ಕಣ್ಣುಗಳಲ್ಲಿ ಅಶ್ರುಬಿಂದುಗಳು ಕಂಡವು.

ವಾಚಕರೆ, ಪ್ರಣಯಿಗಳ ಸಲ್ಲಾಪಕ್ಕೆ ಮಿತಿಯುಂಟೆ ? ಅನಿವಾರ್ಯಹಕ್ಕಾಗಿ ಅವರು ಬೇಗನೆ ಅಗಲಿದರೆಂದು ಕಲ್ಪಿಸಲಿಕ್ಕೆ ಆಧಾರವುಂಟು.

ಯಾಕೆಂದರೆ ನರೇಂದ್ರನು ಒಂದು ಪ್ರಹರ ಹೊತ್ತೇರುವದರ ಒಳಗ.ಗಿಯೇ ಉಪಹಾರವನ್ನು ತೀರಿಸಿಕೊಂಡು ರಾಜಮಹಾಲಿನ ಮಾರ್ಗ ಹಿಡಿದು ನಡೆದಿದ್ದನು.

## ಹದಿನೆಂಟನೆಯ ಅಧ್ಯಾಯ

## ರಾಜಮಹಾಲಿಗೆ ಆಗಮನವು

ನರೇಂದ್ರನಾಥನು ರಾಜಮಹಾಲಿಗೆ ಬಂದು ಶ್ರೀಶಚಂದ್ರನ ಮನೆಯಲ್ಲಿ ಉಳುಕೊಂಡನು. ಶ್ರೀಶನು ದೊಡ್ಡ ಅಧಿಕಾರಸ್ಥನಾಗಿ ಮಾನಸಿಂಹರಾಜನ ಆದರಕ್ಕೆ ಪಾತ್ರನಾಗಿದ್ದನು. ನರೇಂದ್ರನು ಬಂದಿರುವ ವರ್ತಮಾನವನ್ನು ಆಗಲೆ ಶ್ರೀಶನು ಮಾನಸಿಂಹನ ಬಳಿಗೆ ಹೋಗಿ 'ನರೇಂದ್ರನು ತಮ್ಮ ಆಜ್ಞೆಯನ್ನು ಪ್ರತಿಪಾಲಿಸುತ್ತಿರುವ'ನೆಂದು ಹೇಳಿದನು.

ನವಕುಮಾರನ ಬರಹದ ಮೇಲಿಂದ ನರೇಂದ್ರನು ಬಂಡುಗಾರ ನಾಗಿರುವನೆಂಬ ಶಂಕೆಯಿಂದ ಮಾನಸಿಂಹರಾಜನು ಅವನನ್ನು ಜಾಗ್ರತೆ ಯಾಗಿ ರಾಜಮಹಾಲಿನಲ್ಲಿ ತಂದಿಡಬೇಕೆಂದೆಣಿಸಿ ನರೇಂದ್ರನಿಗೆ ಮೂರೇ ದಿವಸಗಳ ಅವಧಿಯನ್ನು ಕೊಟ್ಟು ತನ್ನ ಬಳಿಗೆ ಬರಲು ಆಜ್ಞಾಪತ್ರವನ್ನು ಕಳಿಸಿದ್ದನು. ಆದರೆ ಆ ತರುಣನಾದ ಜಮಿಾನದಾರನು ಮೂರು ದಿವಸದ ಅವಧಿಬಿಟ್ಟು ಮೂರು ಪ್ರಹರಗಳ ಅವಧಿಯನ್ನು ತೆಗೆದುಕೊಳ್ಳದೆ ಬಂದು ಬಿಟ್ಟನೆಂಬ ವರ್ತಮಾನವನ್ನು ಕೇಳಿ ಆ ರಾಜನಿಗೆ ಒಳ್ಳೇ ಸಮಾಧಾನವಾಗಿ "ಬೀರನಗರದ ಚಕ್ರವು ವಿರುದ್ಧವಾಗಿ ತಿರುಗುತ್ತಿರುವಂತೆ ಕಾಣುತ್ತದೆ. ಈ ಪೋರನಾದ ನರೇಂದ್ರನಾಥನು ಬಂಡುಗಾರನೆ ? ಇತಿಹಾಸಜ್ಞನಾದ ನರೇಂದ್ರನು, ಪೃಥ್ವಿಮಂಡಲವನ್ನು ನಡುಗಿಸಿಕೊಡುವ ಸಾರ್ವಭೌಮನಾದ ಪ್ರತ್ಯಕ್ಷ ಅಕಬರ ಬಾದಶಹನ ಮೇಲೆ ಬಂಡುಮಾಡುವ ವಿಚಾರದಲ್ಲಿರುವ ನೆಂದು ಸಂಶಯ ತೆಗೆದುಕೊಳ್ಳುವವನೇ ಮೂರ್ಖನು. ಬಂಡುಗಾರನು ನಮ್ಮ



ಆಜ್ಞಾಪತ್ರವನ್ನು ಮನ್ನಿಸಿ ಹೀಗೆ ನಿಂತಕಾಲ ಮೇಲೆ ಹೊರಟಿದ್ದು ಬರುವನೆ? ಶ್ರೀಶಚಂದ್ರ, ನರೇಂದ್ರನಾಥನು ಬಂದದ್ದು ಕಂಡು ನಮಗೆ ಸಂತೋಷ ವಾಯಿತು. ನಾಳೆ ಪ್ರಾತಃಕಾಲದಲ್ಲಿಯೇ ಅವನಿಗೆ ಫೌಜದಾರಿಯ ಪೋಷಾಕು ತೊಡಿಸಿಕೊಂಡು ನಮ್ಮ ಕಡೆಗೆ ಕರಕೊಂಡು ಬಾ! " ಎಂದು ಹೇಳಿ ಶ್ರೀಶನಿಗೆ ಹೋಗಲಪ್ಪಣೆ ಕೊಟ್ಟನು.

ಸುಂದರನೂ, ದೃಢಾಂಗನೂ, ವರ್ಚಸ್ವಿಯೂ ಆದ ನರೇಂದ್ರನಿಗೆ ಫೌಜದಾರಿಯ ಪೋಷಾಕು ಬಹು ಚನ್ನಾಗಿ ಒಪ್ಪುತ್ತಿರುವದನ್ನು ಕಂಡು ಮಾನಸಿಂಹರಾಜನಿಗೆ ಬಹಳೇ ಸಂತೋಷವಾಯಿತು. ವೃದ್ಧನಾದ ಆ ವೀರಾಗ್ರೇಸರನಿಗೆ ಆ ಹೊಸ ಕ್ಷಾತ್ರಬೀಜದ ಮೇಲೆ ಮೊದಲಿಗೇ ಅಭಿಮಾನ ವುಂಟಾಗಿತ್ತು; ಈಗಂತೂ ಅವನು ತನ್ನ ಕೈಕೆಳಗೆ ಅಧಿಕಾರಿಯಾದದ್ದು ಕಂಡು ಮಾನಸಿಂಹನು ಹಿಗ್ಗಿ ನರೇಂದ್ರನ ಬೆನ್ನು ಚಪ್ಪರಿಸಿ ಶ್ರೀಶನನ್ನು ಕುರಿತು "ಶ್ರೀಶ, ಈ ಫೌಜದಾರರು ಮುಂದೆ ಒಳ್ಳೇ ಪರಾಕ್ರಮವನ್ನು ತೋರಿಸಿ ಅಕಬರಬಾದಶಹನಿಂದ ಸನ್ಮಾನವನ್ನು ಹೊಂದದೆ ಇರರು!" ಎಂದು ಹೇಳಿದನು.

ಮುಂದೆ ನಾಲ್ಕಾರು ದಿವಸಗಳಲ್ಲಿಯೇ ಕೆಲ ಜನ ರಾವುತರೂ, ಕಾಲಾಳುಗಳೂ, ನಾಲ್ಕಾರು ಜನ ದಾಸಿಯರೂ, ಮೇಣೆಯನ್ನು ತೆಗೆದು ಕೊಂಡು ಹದಿನಾರು ಜನ ಬೋಯಿಗಳೂ ಜಗತ್‌ಸುಂದರಿಯನ್ನು ಕರೆಯು ಲಿಕ್ಕೆ ಬೀರನಗರಕ್ಕೆ ಬಂದರು. ನರೇಂದ್ರನ ಕೈಕೆಳಗಿನ ಒಬ್ಬ ಅಮಲದಾರನು ಜಗತ್‌ಸುಂದರಿಯನ್ನು ಕರೆಯಲಿಕ್ಕೆ ಬಂದನೆಂಬ ವರ್ತಮಾನವನ್ನು ಕೇಳಿ ಸುಶೀಲಾದೇವಿಗೆ ವ್ಯಸನವಾಯಿತು.

"ಶ್ರೀಶ ಹೋದ, ನರೇಂದ್ರನೂ ಹೋದ! ಇನ್ನು ಜಗತ್‌ ಸುಂದರಿಯೂ ನಮ್ಮನ್ನು ಅಗಲಿ ಹೋಗುವಾಕೆಯಾದಳು. ಭಣ ಭಣ ಸುರಿಯುವ ಈ ಮನೆಯಲ್ಲಿ ನಾನು ಇನ್ನು ಹೇಗೆ ಇರಲಿ?" ಎಂದು ಸುಶೀಲಾದೇವಿಯು ಚಿಂತಿಸಿ ಪ್ರಾಣಾಚಾರಿಯಾಗಿ ಬಿದ್ದುಕೊಂಡಳು.

ಹೇಮಲತೆಯು ಜಗತ್‌ಸುಂದರಿಯನ್ನು ಕುರಿತು: "ಜಗತ್‌ಸುಂದರೀ, ನೀನೂ ನಡೆದಿಯಾ! ನಾನಿನ್ನು ಯಾರ ಜೊತೆಯಲ್ಲಿ ಕಾಲ ಹಾಕಲಿ? ನಿನ್ನ ಮುಂದಾದರೂ ನಾಲ್ಕು ಸುಖದುಃಖದ ಮಾತುಗಳನ್ನಾಡುತ್ತ ನನಗಾದ

ವ್ಯಸನವನ್ನು ಮರೆಯುತ್ತಿದ್ದೆನು. ಇನ್ನು ನಾನೇ ನಾನು! ನನ್ನ ಮನಸ್ತಾಪವೇ ಮನಸ್ತಾಪವು!" ಎಂದು ಹೇಳಿ ಕಣ್ಣೀರು ಸುರಿಸಿದಳು.

"ಏನು ಮಾಡಲಿ ಹೇಮಾ, ನರೇಂದ್ರನು ನನಗೆ ನಿಲ್ಲದೆ ಹೊರಟಿದ್ದು ಬಾರೆಂದು ಪತ್ರ ಬರೆದಿದ್ದಾನೆ. ನಿನ್ನನ್ನು ಬಿಟ್ಟು ಹೋಗಲಿಕ್ಕೆ ನನ್ನ ಜೀವಕ್ಕೆ ಉರ್ಲೇ ಬಂದಂತಾಗಿದೆ" ಎಂದು ಜಗತ್ಸುಂದರಿಯು ನುಡಿದಳು.

"ಹೋಗಬೇಡೆಂದರೆ ನೀನು ಬಿಡುವಿಯಾ? ಶ್ರೀಶನ ವಿರಹದಿಂದ ಕೊರಗುತ್ತಿರುವಾಕೆಯಾದ ನಿನಗೆ ಈಗ ಕರೆಯಲಿಕ್ಕೆ ಬಂದದ್ದು ತೂಕಡಿಸುವವರಿಗೆ ಹಾಸಿಗೆ ಹಾಕಿ ಕೊಟ್ಟಂತಾಯಿತು. ಹೋಗು ನಿನ್ನೊಬ್ಬಳದಾದರೂ ಕಲ್ಯಾಣವಾಗಲಿ!" ಎಂದು ನುಡಿದ ಹೇಮಲತೆಯ ಬಾಡಿದ ಮುಖದಲ್ಲಿ ಎಳೆನಗೆಯು ಬಹು ಆಲ್ಹಾದಕರವಾಗಿ ಕಂಡಿತು.

ಇಲ್ಲಿ ನವಕುಮಾರನನ್ನು ನೋಡಬನ್ನಿರಿ! ಇವನೇನು ನವಕುಮಾರನೋ, ಪ್ರತ್ಯಕ್ಷ ಭ್ರಾಂತಿಯ ಮೂರ್ತಿಯೋ ತಿಳಿಯದು. 'ಆ' ಎಂದು ಬಾಯಿ ತೆರೆದುಕೊಂಡು ಆಂಗಾತು ಬಿದ್ದಾನೆ! ಮೋರೆಯ ಮೇಲೆ ದ್ರವವೇ ಇಲ್ಲ! ಕಣ್ಣು ಪಿಳುಕಿಸದೆ ಜಂತೆಯನ್ನು ಹೇಗೆ ನೋಡುತ್ತಿರುವನು ನೋಡಿರಿ! ಕೈಯಲ್ಲಿ ತಾನೊಂದು ಪತ್ರವನ್ನು ಹಿಡುಕೊಂಡದ್ದು ಅವನಿಗೆ ಗೊತ್ತಿದೆಯೋ ಇಲ್ಲವೋ? ಇಷ್ಟು ಚಿಂತೆ ಯಾಕಪ್ಪಾ ನವಕುಮಾರಾ? ಬಾಯಿಯಲ್ಲಿ ನೊಣ ಹೊಕ್ಕು-ಗಿಕ್ಕಾವು ಮುಚ್ಚಿಕೊಳ್ಳಬಾರದೆ!

"ಏನು ಮಾಡಲಿ? ದುರ್ಲೌಕಿಕವಾಗಿಹೋಯಿತು! ನಾನು ಅಧಮನೂ ವಿಶ್ವಾಸಕ್ಕೆ ಅಯೋಗ್ಯನೂ ಎಂದು ತಿಳಿದೇ ನರೇಂದ್ರನು ಜಗತ್ಸುಂದರಿಯನ್ನು ಕರಿಸಿಕೊಂಡನಲ್ಲೆ? ಆ ಮಗುವಿಗೆ ನಾನೇನು ಮಾಡುತ್ತಿದ್ದೆನು?...." ಎಂದು ನವಕುಮಾರನು ನುಡಿಯುತ್ತಿರುವಷ್ಟರಲ್ಲಿಯೇ "ಗೋಕುಲದಾಸನು ಏನು ಮಾಡಹೇಳುವನೋ ಅದನ್ನು." ಎಂದು ಅದೇ ಸಮಯಕ್ಕೆ ಬಂದ ಹೇಮಲತೆಯು ನುಡಿದಳು.

"ಯಾರು?" ಎಂದು ಅವನು ತಲೆಯೆತ್ತಿ ನೋಡುತ್ತಾನೆ, ತನ್ನ ಮರ್ಮವನ್ನು ಹೀಗೆ ನಿರ್ದಯವಾಗಿ ಭೇದಿಸಿದವಳು ಪ್ರತ್ಯಕ್ಷ ತನ್ನ ಮಗಳೇ.

"ಹೇಮಾ, ನೀನು ಕೂಡ ನನ್ನನ್ನು ನಿಂದಿಸುತ್ತಿರುವಿಯಾ?" ಎಂದು ಅವನು ದೀನನಾಗಿ ಕೇಳಿದನು.

"ಅಪ್ಪಾ, ತಮ್ಮ ಸುತ್ತಲೂ ತಾವೇ ಗಿಮಿಗಿಮಿ ತಿರುಗಿದವರಿಗೆ ಜಗತ್ತೇ ತಿರುಗುತ್ತಿರುವಂತೆ ದೃಷ್ಟಿಭ್ರಮವಾಗುವದಿಲ್ಲವೆ?"

"ಅಮ್ಮಾ, ನಿಮ್ಮೆಲ್ಲರಿಗೂ ನಾನು ಹೀಗೆ ಬೇಸರಾದ ಬಳಿಕ ನನಗೆ ಈ ಸಂಸಾರವೇ ಸಾಕು. ವನವಾಸಕ್ಕೆ ಎದ್ದು ಹೋಗುವೆನು."

"ಅಪ್ಪಾ, ಜನರಹಿತವಾದ ಈ ಮನೆಯೇ ವನವಾಸವಾಗಿರಲು ಎದ್ದು ಹೋಗುವ ಶ್ರಮವೇಕೆ?"

ನವಕುಮಾರನು ತನ್ನ ಎರಡೂ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು "ಗೋಕುಲದಾಸ! ಗೋಕುಲದಾಸ!! ಏನು ತಂದಿಟ್ಟೆ ಅಯ್ಯೋ! ನಾನೇ ಅವಿಚಾರಿಯು!! ಅನ್ಯರನ್ನು ಹಳಿದರೇನಾಗುವದು?" ಎಂದನು.

ಬಳಿಕ ಹೇಮಲತೆಯು ಮೆಲ್ಲನೆ ತನ್ನ ತಂದೆಯ ತೋಳಿನ ಮೇಲೆ ಕೈಯಿಟ್ಟು "ಅಪ್ಪಾ, ಜಗತ್ಸುಂದರಿಯು ಹೊರಟು ನಿಂತಿದ್ದಾಳೆ. ಅವಳಿಗೆ ತಕ್ಕ ಉಡುಗರೆಗಳನ್ನು ಕೊಟ್ಟು, ನಾಲ್ಕು ಒಳ್ಳೇ ಮಾತುಗಳನ್ನು ಹೇಳಿ, ಹೋಗಲು ಅಪ್ಪಣೆ ಕೊಡಬನ್ನಿರಿ. ಏಳಿರಿ, ಅವ್ವನು ನಿಮ್ಮನ್ನು ಕರೆದಿದ್ದಾಳೆ" ಎಂದು ವಿನಯದಿಂದ ಹೇಳಿದಳು.

"ಉಡುಗರೆ ಮಾಡುವದರಲ್ಲಿ ನನ್ನದೇನಿದೆ? ಅವಳಿಗೇ ಬೇಕಾದದ್ದು ಕೊಡೆಂದು ಹೇಳು. ಇಕೋ, ಈ ಬೀಗದ ಕೈ ತೆಗೆದುಕೋ. ಆ ದೊಡ್ಡ ಪೆಟ್ಟಿಗೆಯಲ್ಲಿ ಜಗತ್ಸುಂದರಿಯ ತಾಯಿಯ ಆಭರಣದ ಚಿಕ್ಕ ಪೆಟ್ಟಿಗೆಯಿದೆ. ಅದನ್ನು ಅವಳ ಸ್ವಾಧೀನ ಮಾಡಿರಿ. ನಾನೀಗಲೆ ಬಂದೆನು" ಎಂದು ಹೇಳಿ ಕಳಿಸಿದನು.

ಕೇಸರಿಯ ಬಣ್ಣದ, ಜರದ ಸೀರೆಯನ್ನುಟ್ಟು ಕಿಂಚಿತ್ ಪಾಟಲವರ್ಣದ ರೌಕೆಯನ್ನು ತೊಟ್ಟು ಸರ್ವಾಭರಣಭೂಷಿತೆಯಾಗಿ ನಿಂತಿದ್ದ ಜಗತ್ ಸುಂದರಿಯು, ಜಗತ್ಸುಂದರಿಯೇ. ಅವಳು ನವಕುಮಾರನಿಗೆ ನಮಸ್ಕಾರ ಮಾಡಿ ನಿಂತ ಬಳಿಕ ಅವನು "ಮಗಳೇ, ಸ್ಥಿರವಾದ ಸೌಭಾಗ್ಯವು ನಿನಗಾಗಲಿ!" ಎಂದು ಹರಸಿ ಚಿಂತಾಕ್ರಾಂತನಾಗಿ ನಿಂತುಕೊಂಡನು.

ಸುಶೀಲಾದೇವಿಯು ತನ್ನ ಕೊರಳಲ್ಲಿಯ ಪಚ್ಚದ ಪದಕವುಳ್ಳ ಮುಕ್ತಾ

ಹಾರವನ್ನು ಜಗತ್‌ಸುಂದರಿಯ ಕೊರಳಿಗೆ ಹಾಕಿ "ಜಗತಾ, ಶ್ರೀಶನ ಹೆಂಡತಿಯಾಗಿ ಬೇಗನೆ ನಮ್ಮ ಮನೆಗೆ ಬರುವಾಕೆಯಾಗು ಗೃಹಲಕ್ಷ್ಮೀ!" ಎಂದು ಹರಸಿ ಅವಳ ಹಣೆಗೆ ಕುಂಕುಮವನ್ನು ಹಚ್ಚಿದಳು.

"ಹೋಗಿ ಬಾ, ಬಾಗಿ ಬಾ, ಬರುವ ಮುಂದೆ ಬಸುರಾಗಿ ಬಾ." ಎಂದು ವಿನೋದದಿಂದ ನುಡಿದು ನಗುತ್ತಿರುವ ಹೇಮಲತೆಯ ಕಣ್ಣುಗಳಲ್ಲಿ ಅಶ್ರುಗಳೊತ್ತಿ ಬಂದವು.

ನರೇಂದ್ರನು ಜಗತ್‌ಸುಂದರಿಯನ್ನು ಶ್ರೀಶಚಂದ್ರನಿಗೆ ಕೊಟ್ಟು ಮದಿವೆ ಮಾಡಿಕೊಟ್ಟನು. ಶ್ರೀಶನೂ, ಜಗತ್‌ಸುಂದರಿಯೂ, ನರೇಂದ್ರನೂ ಒಂದೇ ಮನೆಯಲ್ಲಿದ್ದು ಆನಂದದಿಂದ ಕಾಲಕಳೆಯಲಾರಂಭಿಸಿದರು. ನವ ವಧುವಾದ ತನ್ನ ಹೆಂಡತಿಯೊಡನೆ ಆನಂದದ ಉಬ್ಬಿನಲ್ಲಿರುವ ಶ್ರೀಶನಿಗೆ ಬೀರನಗರದ ನೆನಪೇ ಆಗಲಿಲ್ಲ. ಮಾತ್ರ ಆಗಾಗ್ಗೆ ಅವನು ಸುಶೀಲಾದೇವಿ ಯನ್ನು ನೆನೆದೂ ದುಃಖಿತನಾಗುವನು.

ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಪಠಾಣ ಜನರು ಪಂಜಾಬ, ಕಂದಾ ಹಾರದಲ್ಲಿ ಬಂಡು ಎಬ್ಬಿಸುವ ವಿಚಾರದಲ್ಲಿರುವರೆಂಬ ವರ್ತಮಾನವು ಬಂದದ್ದ ರಿಂದ ಮಾನಸಿಂಹನು ತನಗೆ ಅತ್ತಕಡೆಗೆ ಹೋಗಬೇಕಾದೀತೆಂದು ನೆನೆಸಿ ಬಾದಶಹನ ಆಜ್ಞೆಯಾದ ಕೂಡಲೆ ಅತ್ತ ಹೊರಡಲಿಕ್ಕೆ ವಿಲಂಬವಾಗಕೂಡ ದೆಂದು ಅವನು ಈಗಲೇ ಸಿದ್ಧತೆ ಮಾಡತೊಡಗಿದನು. ತಾವು ಬೇಗನೆ ಆಗ್ರಾಪಟ್ಟಣದ ಕಡೆಗೆ ಹೋದರೆ ಹೇಮಲತೆಯ ಭೆಟ್ಟಿಯಾಗಲಿಕ್ಕಿಲ್ಲವೆಂದು ತಾರಾದೇವಿಯು ತನ್ನ ಗೆಳತಿಗೆ ಒಂದು ಪತ್ರ ಬರೆದು ಒಳ್ಳೇ ಸನ್ನಾಹದಿಂದ ಅವಳನ್ನು ಕರೆಕಳಿಸಿದಳು.

ಈ ಸನ್ನಾಹದಿಂದ ಹೋದ ಅಮಲದಾರನು ನವಕುಮಾರನಿಗೊಂದು ಪತ್ರವನ್ನು ಕೊಟ್ಟು ತಾನು ಬಂದ ಕಾರ್ಯವನ್ನು ಅವನಿಗೆ ತಿಳಿಸಿದನು. ಹೇಮಲತೆಗೆ ಬರೆದ ಪತ್ರವು ಅವಳ ಕೈಯಲ್ಲಿ ಬಂದ ಕೂಡಲೆ, ಅವಳು ಅದನ್ನು ಆನಂದ, ಆಶ್ಚರ್ಯ ಮುಂತಾದ ವಿಕಾರಗಳೊಂದಿಗೆ ಓದುತ್ತಿದ್ದಳು. ಅದರ ಅಭಿಪ್ರಾಯ :

ಪ್ರಿಯ ಹೇಮಲತಾ,

ರಾಮನವಮಿಯಾದ ಕೂಡಲೆ ಸುಶೀಲಾದೇವಿಯವರು ನಿನ್ನನ್ನು

ರಾಜಮಹಾಲಿಗೆ ಕಳಿಸುವೆವೆಂದು ಹೇಳಿದ್ದರಷ್ಟೆ? ಇನ್ನೇನು ನೆವ ಉಳಿಯು ಲಿಲ್ಲವಲ್ಲ! ನೀನು ಅವಶ್ಯವಾಗಿ ಹೊರಟು ಬರಬೇಕು. ಇಲ್ಲಿ ಏನೇನು ಚಮತ್ಕಾರಗಳಾಗಿವೆ ನಿನಗೆ ಗೊತ್ತುಂಟೇನು? ಜಗತ್‌ಸುಂದರಿಯು ಶ್ರೀಶ ಚಂದ್ರರ ಅರ್ಧಾಂಗಿಯಾಗಿ ಹದಿನೈದು ಇಪ್ಪತ್ತು ದಿವಸಗಳಾದವು. ಈಗ ಅವಳ ಜಂಬವನ್ನು ಹಿಡಿದವರಿಲ್ಲ. ನಮ್ಮ ಭೆಟ್ಟಿಗೆ ಬರಬೇಕೆಂದು ನಾನೂ ರಾಣಿಯವರೂ ಹೇಳಿಕಳಿಸಿದರೆ ಅವಳಿಗೆ ಅವಕಾಶವಿಲ್ಲಂತೆ! ಶ್ರೀಶಚಂದ್ರರು ಅವಳನ್ನು ಪ್ರೋಣಿಸಿ ಕೊರಳಿಗೆ ಕಟ್ಟಿಕೊಂಡಿದ್ದಾರೋ ತಿಳಿಯದು!

ಜಗತ್‌ಸುಂದರಿಯು ನಿನ್ನ ವಿಷಯವಾಗಿ ಎಷ್ಟಾದರೂ ಸಂಗತಿಗಳನ್ನು ಹೇಳಿರುವಳು? ಗೈಯಾಳಿ, ಓಕಳೀ ಹಾಕಲಿಕ್ಕೆ ಗಂಡಸರ ಮೈಮೇಲೆ ಹೋಗಬಹುದೆ? ನರೇಂದ್ರನಾಥರು ಆಗ್ಗೆ ನಿನ್ನ ಶಾಸನವನ್ನು ಚನ್ನಾಗಿ ಮಾಡಿದರು! ಹೀಗೇ ಆಗಬೇಕು ನಿನಗೆ! ರಾಮನವಮಿಯು ದಿವಸ ನಿನ್ನ ಮುಖವು ಹುಚ್ಚುಸುರಿಯುತ್ತಿತ್ತಂತೆ. ಯಾಕೆ? ಯಾರೇನು ಮಾಡಿದ್ದರು ನಿನಗೆ? ಈ ಸಂಗತಿಗಳನ್ನು ಯಾರ ಮುಂದಾದರೂ ಹೇಳಕೂಡದೆಂದು ಜಗತ್‌ಸುಂದರಿಯು ನನ್ನ ಕಡೆಯಿಂದ ಆಣೆ ಮಾಡಿಸಿಕೊಂಡಿದ್ದಾಳೆ, ಆದರೆ ನಿನ್ನ ಸುದ್ದಿಯನ್ನು ನಿನ್ನ ಮುಂದೆಯೇ ಹೇಳಲಿಕ್ಕೆ ಬಾಧಕವೇನು? ನೀನು ಮಾತ್ರ ಯಾರ ಮುಂದಾದರೂ ಹೇಳಬೇಡ ಕಂಡಿಯಾ.

ನರೇಂದ್ರನಾಥ ಫೌಜದಾರರು ನಮ್ಮ ರಾಜರಿಗೆ ಅಭಿಮತರಾಗಿ ಇಲ್ಲಿ ವೈಭವದಿಂದ ಮೆರೆಯುತ್ತಾರೆ. ಲಷ್ಕರೀ ಪೋಷಾಕು ಹಾಕಿಕೊಂಡಾಗ ಅವರೆಷ್ಟು ಸುಂದರರಾಗಿ ಕಾಣುತ್ತಾರೆಂಬದನ್ನು ನೋಡುವದು ನಿನ್ನ ಅಪೇಕ್ಷೆ ಇದ್ದದ್ದಾದರೆ ನಿಲ್ಲದೆ ಹೊರಟು ಬಾ. ಇಂದು-ನಾಳೆ ಅವರು ಆಗ್ರಾಪಟ್ಟಣಕ್ಕೆ ಹೋಗುವವರಿದ್ದಾರೆ. ಬಾದಶಹರು ನಾಯಬ ಸರಲಷ್ಕರರ ಅಧಿಕಾರವನ್ನು ಕೊಡುವವರಿದ್ದಾರಂತೆ.

ನಾನೂ ರಾಣಿಯವರೂ ನಮ್ಮ ರಾಜನೊಡನೆ ಇನ್ನೊಂದು ಹದಿನೈದು ದಿವಸಗಳಲ್ಲಿ ಆಗ್ರಾಕ್ಕೆ ಹೋಗುವ ಸಂಭವವದೆ. ನೀನು ದಯಮಾಡಿ ಬಂದರೆ ನಾವೆಲ್ಲರೂ ಕೂಡಿ ನಾಲ್ಕು ದಿವಸ ಆನಂದದಲ್ಲಿ ಕಳೆಯೋಣಂತೆ.

—ತಾರಾದೇವಿ.

ಜಗತ್‌ಸುಂದರಿಯು ಶ್ರೀಶನ ಹೆಂಡತಿಯಾದ ಸಂಗತಿಯನ್ನರಿತು

ಸುಶೀಲಾದೇವಿಗೆ ಮಿತಿಮಿರಿದ ಹರ್ಷವಾಯಿತು. ನನ್ನ ಮಗನು ನನಗೆ ಅಲ್ಲದವನಾಗಿ ಎಲ್ಲಿಯಾದರೂ ಸುಖದಿಂದ ಇರಲಿ! ಕಾಲೀಮಾತೆ, ನಿನ್ನ ಭಕ್ತಳಾದ ನನ್ನ ಮಾತು ಒಂದಾದರೂ ನಡಿಸಿದಿ ಸಾಕು! ಶ್ರೀಶನು ನನ್ನ ಮನೆಗೆ ಪತ್ನೀಸಮೇತನಾಗಿ ತಿರಿಗಿ ಬಂದರೆ, ದುರ್ಗೆ, ನಿನಗೆ ಈ ಚಂದ್ರಹಾರವನ್ನು ಸಮರ್ಪಿಸುವೆನು.'' ಎಂದು ನುಡಿದು ಆ ಮಮತಾಳುವು ಆಗಲೇ ಚಂದ್ರಹಾರವನ್ನು ಬಳಿದ ಗಂಟಿಂದು ತೆಗೆದಿಟ್ಟಳು.

ಮಾನಸಿಂಹನ ರಾಣಿಯು ಆಗ್ರಹದ ಪತ್ರಕ್ಕಾಗಿಯೂ, ಹೇಮಲತೆಯು ತಾನು ರಾಜಮಹಾಲಿಗೆ ಹೋಗುವೆನೆಂದು ತೊಟ್ಟ ಹಟಕ್ಕಾಗಿಯೂ ನವ ಕುಮಾರನು ಅವಳನ್ನು ರಾಜಮಹಾಲಿಗೆ ಕಳಿಸಲು ಒಪ್ಪಿಕೊಂಡನು. ಹೇಮಲತೆಯು ಚಿಂತಾಕ್ರಾಂತಳಾಗಿರುವದನ್ನು ನೋಡಲಾರದೆ ಸುಶೀಲಾದೇವಿಯೂ ಅವಳಿಗೆ ಹೋಗಲು ಅನುಮೋದನವನ್ನು ಕೊಟ್ಟಳು.

## ಹತ್ತೊಂಭತ್ತನೆಯ ಅಧ್ಯಾಯ

## ಮುಂದೆ ಆಗ್ರಾಕ್ಕೆ ಪ್ರಯಾಣವು

ಅಮೀರಖಾನ ಪಠಾಣನೆಂಬ ಬಂಡುಗಾರನು ದಿನೇ ದಿನೇ ಪ್ರಬಲನಾಗುತ್ತ, ಇನ್ನು ನಿಶ್ಚಯವಾಗಿ ದೊಡ್ಡದೊಂದು ಬಂಡುಮಾಡುವನೆಂಬ ವರ್ತಮಾನವನ್ನರಿತು ಬಾದಶಹನು ರಾಜಾ ಮಾನಸಿಂಹನಿಗೆ ಆ ಬಗ್ಗೆ ಬೇಗನೆ ಆಗ್ರಾಕ್ಕೆ ಬರಬೇಕೆಂದು ಆಜ್ಞೈಸಿದನು. ಅದಕ್ಕಾಗಿ ಮಾನಸಿಂಹ ರಾಜನು ನರೇಂದ್ರನನ್ನು ಆಗಲೇ ಆಗ್ರಾಕ್ಕೆ ಅಟ್ಟಿ ತಾನೂ ಒಂದೆರಡು ದಿವಸಗಳಲ್ಲಿ ಹೊರಡುವವನಾಗಿದ್ದನು.

ತಾರಾದೇವಿಯು ಹೇಮಲತೆಯನ್ನು ರಾಜಮಹಾಲಿಗೆ ಕರಿಸಿರುವಳೆಂದು ನರೇಂದ್ರನಿಗೆ ಜಗತ್ಸುಂದರಿಯು ಹೇಳಿದ್ದಳು. ತಾನಿನ್ನು ಆಗ್ರಾಪಟ್ಟಣಕ್ಕೆ ಹೊರಡುವದರೊಳಗಾಗಿ ತನ್ನ ಮೋಹನಾಂಗಿಯ ಮುಖವನ್ನು ಆಯತ್ತವಾಗಿ ನೋಡಿಕೊಂಡು ಹೋಗುವೆನೆಂದು ಅವನು ಆನಂದದಲ್ಲಿದ್ದನು. ಅಷ್ಟ

ರಲ್ಲಿಯೇ ಮಾನಸಿಂಹನು ಅವರಿಗೆ ಆಗ್ರಾಕ್ಕೆ ಆಗಿಂದಾಗೆಯೇ ಹೋಗ ಬೇಕೆಂದು ಆಜ್ಞೆಯನ್ನು ವಿಧಿಸಿದ್ದರಿಂದ ಅವನು ಬಹಳೇ ವ್ಯಸನಾಕುಲ ನಾದನು. ಆದರೆ ಸೈನ್ಯದ ಕಟ್ಟಳೆಯನ್ನು ಮೀರುವದು ಸರ್ವಥಾ ಆಗದ ಮಾತಾದ್ದರಿಂದ ಅನಿರ್ವಾಹಕ್ಕಾಗಿ ಅವನು ಹೊರಟು ಹೋದನು.

ಮರುದಿವಸವೇ ಹೇಮಲತೆಯು ಮೇಣೆಯನ್ನೇರಿಕೊಂಡು ಆನಂದದ ಭರದಲ್ಲಿ ಮಾನಸಿಂಹರಾಜನ ಮನೆಯ ಅಂತಃಪುರಕ್ಕೆ ಬಂದು ಮುಟ್ಟಿದಳು. ಬೋಯಿಗಳು ಕೂಗುತ್ತ ತಮ್ಮ ಅರಮನೆಯ ಬಾಗಿಲಕ್ಕೆ ಬಂದು ನಿಂತದ್ದು ಕೇಳಿ ಹೇಮಲತೆಯು ಬಂದಳೆಂಬ ಹಿಗ್ಗಿನಿಂದ ತಾರಾದೇವಿಯು ಆವಳನ್ನು ಇದಿರುಗೊಂಡು ಕೈಹಿಡಿದು ಉಪ್ಪರಿಗೆಯ ಮೇಲೆ ಕರಕೊಂಡು ಹೋದಳು. ತಾರಾದೇವಿಯ ತಾಯಿಗೂ ಹೇಮಲತೆಯನ್ನು ಕಂಡು ಸಂತೋಷವಾಯಿತು. ಅವಳು ಸುಶೀಲಾದೇವಿಯ ಸಮಾಚಾರವನ್ನು ಹೇಮಲತೆಯ ಮುಖದಿಂದ ಕೇಳಿಕೊಂಡಳು. ಉಪಹಾರವಾದ ಬಳಿಕ ಹೇಮಲತೆಯು ಉತ್ಸುಕತೆಯಿಂದ ರಾಜಮಹಾಲಿನಲ್ಲಿಯ ವಿಶೇಷವಾದ ಸಂಗತಿಗಳೇನೆಂದು ತಾರೆಯನ್ನು ಕೇಳಿ ದಳು.

ತಾರೆಯು ಜಗತ್ಸುಂದರಿಯ ಸಂಸಾರದ ಸುಖದ ವರ್ಣನೆಯನ್ನೂ, ಶ್ರೀಶಚಂದ್ರನು ರಾಜಮಾನ್ಯನಾದ ಅಧಿಕಾರಿಯಾಗಿರುವನೆಂದೂ ಹೇಳಿದಳೇ ಹೊರತಾಗಿ ನರೇಂದ್ರನ ವಿಷಯವಾಗಿ ಒಂದು ಚಕಾರಶಬ್ದ ತೆಗೆಯಲಿಲ್ಲ; ನರೇಂದ್ರನು ಅಕಸ್ಮಾತ್ತಾಗಿ ಹೊರಟುಹೋದನೆಂಬ ವರ್ತಮಾನವನ್ನು ಹೇಳಿ ದರೆ ಹೇಮಲತೆಗೆ ವಿಷಾದವಾದೀತೆಂದು ತಾರೆಯು ಸುಮ್ಮನಿದ್ದಳು. ತಾರಾ ದೇವಿಯು ವಿನೋದಕ್ಕಾಗಿ ನರೇಂದ್ರನ ಮಾತು ತೆಗೆಯಲಿಲ್ಲವೆಂದು ನೆನಿಸಿ ಹೇಮಲತೆಯೂ ಆ ಕಾಲಕ್ಕೆ ಸುಮ್ಮನಿದ್ದಳು.

ಜಗತ್ಸುಂದರಿಯು ಮಧ್ಯಾಹ್ನದ ಮೇಲೆ ಹೇಮಲತೆಯ ಭೆಟ್ಟಿಗಾಗಿ ತಾರಾದೇವಿಯ ಮನೆಗೆ ಬಂದಳು. ಮೂವರು ಆನಂದದಿಂದ ಮಾತಾಡು ತ್ತಲೂ, ನಗುತ್ತಲೂ, ಕೆಲೆಯುತ್ತಲೂ ಕೆಲಹೊತ್ತು ಕಳೆದ ಬಳಿಕ, ಜಗತ್ ಸುಂದರಿಯು ಹೇಮಲತೆಯನ್ನು ಕುರಿತು “ಹೇಮಾ, ನಿನ್ನೆಯೇ ಬರಲಿಕ್ಕೆ ಏನಾಗಿತ್ತು? ಬಂದಿದ್ದರೆ ನಿನ್ನ ಮನೋರಮಣನ ಮುಖವನ್ನಾದರೂ ನೋಡು ತ್ತಿದ್ದಿ.” ಎಂದು ನುಡಿದಳು.

“ ಯಾಕೆ ? ಅವರೆಲ್ಲಿಗೆ ಹೋದರು ? ” ಎಂದು ಹೇಮಲತೆಯು ವಿಹ್ವಲಳಾಗಿ ಕೇಳಿದಳು.

“ ನಿನ್ನೆಯೇ ನರೇಂದ್ರನು ಆಗ್ರಾಕ್ಕೆ ಹೊರಟು ಹೋದನಲ್ಲ ! ತಾರೆ, ನೀನು ಈ ಮಾತು ಇವಳಿಗೆ ಹೇಳಲಿಲ್ಲೇನು ? ”

“ ಏನೆಂದು ಹೇಳಲಿ? ನಿನ್ನ ಮನೋರಮಣನ ಮುಖವನ್ನು ನೀನು ಕಾಣುವಿಯೆಂದು ಆಶೆ ತೋರಿಸಿ ನಾನಿವಳಿಗೆ ಬಾರೆಂದು ಪತ್ರ ಬರೆದಿದ್ದೆನು. ಈ ಪ್ರಮದೆಯು ಬರುವದರೊಳಗಾಗಿಯೇ ಇವಳ ಪುರುಷನು ಹೊರಟು ಹೋಗಿದ್ದನು. ಹೇಳಲಿಕ್ಕೆ ನನಗೇ ಮನಸ್ಸಾಗಲಿಲ್ಲ. ”

“ ಸಖಿಯರೆ, ನನ್ನ ದೈವದಲ್ಲಿ ಇದ್ದಂತಾಗುವದು. ನೀವೇಕೆ ಚಿಂತಿಸುವಿರಿ. ನನ್ನಲ್ಲಿ ದೃಢನಿಶ್ಚಯವಿದ್ದರೆ ದೇವರು ಎಷ್ಟು ದಿವಸ ನನ್ನ ಸತ್ವವನ್ನು ನೋಡುವನು ? ನನ್ನ ದೈವದಲ್ಲಿ ಸುಖವೇ ಇದ್ದರೆ ಅದು ನನ್ನನ್ನು ಬಿಟ್ಟು ಹೋಗಲಾರದು. ”

“ ಶಾಬಾಸ್ ! ಹೇಮಲತಾ, ಶಾಬಾಸ್ ! ನಿನ್ನಂಥ ದೃಢನಿಶ್ಚಯದವಳೇ ಕಡೆಗೆ ಶಾಶ್ವತವಾದ ಸುಖವನ್ನು ಹೊಂದುವಳು. ನಮ್ಮ ರಜಪುತಸ್ಥಾನದಲ್ಲಿ ನಿನ್ನಂತೆಯೇ ನಿಶ್ಚಯವನ್ನು ತಳೆದು ಕಡೆಗೆ ಸುಖವನ್ನು ಹೊಂದಿದ ಅನೇಕ ನಾರೀಶಿರೋಮಣಿಗಳ ಕಥೆಗಳುಂಟು. ” ಎಂದು ತಾರಾದೇವಿಯು ಹೇಳಿ ಹೇಮಲತೆಯ ಬೆನ್ನು ಮೇಲೆ ಕೈಯಾಡಿಸಿದಳು. ಬಳಿಕ ಮೂವರೂ ಅನೇಕ ಸಂಗತಿಗಳನ್ನು ಕುರಿತು ಮಾತಾಡಿದ ಮೇಲೆ ಜಗತ್ಸುಂದರಿಯು ತನ್ನ ಮನೆಗೆ ಹೊರಟು ನಡೆದಳು.

ಮಾನಸಿಂಹರಾಜನೂ ಒಂದೆರಡು ದಿವಸಗಳಲ್ಲಿ ಪಂಜಾಬದ ಬಂಡು ಮುರಿಯುವದಕ್ಕೆ ಹೊರಡತಕ್ಕವನು. ಅವನು ತನ್ನ ಹೆಂಡಿರುಮಕ್ಕಳನ್ನು ಆಗ್ರಾಪಟ್ಟಣದಲ್ಲಿಟ್ಟು ಮುಂದೆ ತಾನು ಪಂಜಾಬಕ್ಕೆ ಹೋಗಬೇಕೆಂದು ಹೇಳಿ ರಾಣಿಗೆ ಸಿದ್ಧತೆ ಮಾಡಹೇಳಿದನು. ಆಗ ಮಾನಸಿಂಹನ ರಾಣಿಯು ಹೇಮಲತೆಗೆ ‘ ಆಗ್ರಾಪಟ್ಟಣಕ್ಕೆ ನಡೆ ’ ಎಂದು ಬಹಳೇ ಆಗ್ರಹತೊಟ್ಟಳು. ತಾರಾದೇವಿಯೂ ತನ್ನ ತಿಳುವಳಿಕೆಯ ಮೇರೆಗೆ ಬೇರೆ ರೀತಿಯಿಂದ ಹೇಮಲತೆಗೆ ಆಗ್ರಾಕ್ಕೆ ಅಗತ್ಯವಾಗಿ ಬರಬೇಕೆಂದು ಸೂಚಿಸಿದಳು.

“ ತಾರಾದೇವಿ, ನಾನೇನು ಸ್ವತಂತ್ರಳೆ ? ನಿಮ್ಮ ಸಂಗಡ ಆಗ್ರಾಕ್ಕೆ

ಹೋಗಲಿಕ್ಕೆ ತಂದೆತಾಯಿಗಳನ್ನು ಕೇಳದೆ ಹೇಗೆ ಬರಲಿ? ಮೇಲಾಗಿ ಬೀರನಗರದಲ್ಲಿ ಅವ್ವನು ಒಬ್ಬಳೇ ಆಗಿರುವಳು. ನನ್ನನ್ನು ಅಗಲಿ ಆಕೆ ಹೇಗಿದ್ದಾಳು?"

"ಹೇಮಾ, ಹೇಗೆ ಸುಶೀಲಾದೇವಿಯವರು ನಿನ್ನ ಮಾತೆಯರೋ ಹಾಗೆಯೇ ನಾನೆಂದು ತಿಳಿದುಕೊ. ನಾನು ಪರಕೀಯಳೆಂದು ನೀನು ತಿಳಿಯಬೇಡ. ನೀನು ಬರಲಿಕ್ಕೆ ಸ್ವತಂತ್ರಳಿಲ್ಲದಿದ್ದರೂ ನಾನು ಕರಕೊಂಡು ಹೋಗಲಿಕ್ಕೆ ಸ್ವತಂತ್ರಳಿದ್ದೇನೆ. ಬಂಗಾಲದ ಶೋಭೆಗಿಂತಲೂ ಆಗ್ರಾಪಟ್ಟಣದ ಶೋಭೆಯು ಮಿಗಿಲಾದದ್ದು. ಮಧುರಾ, ಗೋಕುಲ, ವೃಂದಾವನ ಮೊದಲಾದ ಶ್ರೀಕೃಷ್ಣನ ಲೀಲಾಸ್ಥಾನಗಳು ಪರಮಪವಿತ್ರವಾಗಿರುವವಲ್ಲದೆ ರಮಣೀಯವಾಗಿಯೂ ಇವೆ. ನಾನು ಆಗ್ರಾ ಪ್ರಾಂತಕ್ಕೆ ಹೋದ ಕೂಡಲೆ ಅಲ್ಲಿಯ ಪವಿತ್ರವಾದ ಸ್ಥಳಗಳನ್ನು ನೋಡಲಿಕ್ಕೆ ಹೋಗತಕ್ಕವಳಿದ್ದೇನೆ. ತಿಂಗಳೆರಡು ತಿಂಗಳ ನಮ್ಮ ಹತ್ತರ ನೀನಿದ್ದರೆ ಸುಶೀಲಾದೇವಿಯವರು ಬೇಡೆನ್ನಲಿಕ್ಕಿಲ್ಲ." ಎಂದು ರಾಣಿಯು ಆಗ್ರಹದಿಂದ ಹೇಳಿದಳು.

"ಮೇಲಾಗಿ ನರೇಂದ್ರನಾಥನನ್ನು ನೀನು - ಆಗ್ರಾಪಟ್ಟಣದಲ್ಲಿ ಯಂತೂ ಕಂಡೇ ಕಾಣುವಿ" ಎಂದು ತಾರಾದೇವಿಯು ಮೆಲ್ಲಗೆ ಹೇಮಲತೆಯ ಕಿವಿಯಲ್ಲಿ ಹೇಳಿದಳು.

"ಹೀಗೆ ಮೃಗಜಲದ ಬೆನ್ನು ಹತ್ತಿ ನನಗೆ ನೀನು ಓಡೆನ್ನುವಿಯಲ್ಲೆ ತಾರಾ!" ಎಂದು ಹೇಮಲತೆಯೂ ತಾರಾದೇವಿಯ ಕಿವಿಯಲ್ಲಿ ನುಡಿದು ಮೃದುಸ್ಮಿತೆಯಾದಳು.

"ಯಾಕೆ ಹೇಮಾ, ಸುಮ್ಮನೆ ಕುಳಿತಿ? ನಾನೇನು ಹೇಳುತ್ತೇನೆ?" ಎಂದು ರಾಣಿಯು ಮತ್ತೆ ಕೇಳಿದಳು.

"ನಾನೇನು ಹೇಳಲಿ! ನಿಮ್ಮ ಅಧೀನಳೇ ಇರುವೆನು. ಬೇಕಾದ ಹಾಗೆ ಮಾಡಿರಿ."

"ಬೇಕಾದರೆ ಈಗ ಶ್ರೀಶಚಂದ್ರನನ್ನು ಕರೆಸುತ್ತೇನೆ. ಅವನು ಸಮ್ಮತಿಪಟ್ಟರೆ ಆಯಿತೋ ಇಲ್ಲವೊ?" ಎಂದು ರಾಣಿಯು ಮತ್ತೆ ಕೇಳಿದಳು.

"ತಮ್ಮ ಆಜ್ಞೆಯಾದ ಬಳಿಕ ಆಯಿತು. ಶ್ರೀಶನ ಸಮ್ಮತಿ ಇದ್ದಂತೆಯೇ." ಎಂದು ಹೇಮಲತೆಯು ನುಡಿದಳು.

"ನಾನು ಇದಕ್ಕೂ ಮೊದಲೆಯೇ ಜಗತ್ಸುಂದರಿಯ ಮುಖಾಂತರವಾಗಿ ಶ್ರೀಶಚಂದ್ರನ ಸಮ್ಮತಿಯನ್ನು ತೆಗೆದುಕೊಂಡಿದ್ದೇನೆ. ಹೇಮಲತೆಯನ್ನು ಕರಕೊಂಡು ಹೋಗಬಹುದೆಂದು ಜಗತ್ಸುಂದರಿಯು ಹೇಳಿದ್ದಾಳೆ." ಎಂದು ತಾರಾದೇವಿಯು ಹೇಳಿದಳು.

"ಹೇಮಾ, ನಾನು ನವಕುಮಾರರಿಗೆ ನಿನ್ನನ್ನು ಕರಕೊಂಡು ಹೋಗುವೆನೆಂದು ಪತ್ರ ಬರೆದು ಅವರ ಸಮ್ಮತಿಯನ್ನೂ ಸುಶೀಲಾದೇವಿಯರ ಸಮ್ಮತಿಯನ್ನೂ ಪಡಕೊಳ್ಳುವೆನು. ಆಮೇಲಾದರೂ ನಿನ್ನ ಮನಸ್ಸು ಪ್ರಶಸ್ತವಾಗುವದಷ್ಟೆ?" ಎಂದು ರಾಣಿಯು ಹೇಳಿ ಸಂದೇಹದಲ್ಲಿದ್ದ ಹೇಮಲತೆಯನ್ನು ಸಮಾಧಾನಗೊಳಿಸಿ ತಾರೆಯನ್ನು ಕುರಿತು, "ತಾರಾ, ನವಕುಮಾರರಿಗೆ ಪತ್ರದ್ವಾರಾ ನಮ್ಮ ಇಚ್ಛೆಯನ್ನು ತಿಳಿಸಲಿಕ್ಕೆ ನಿನ್ನ ಅಣ್ಣನಿಗೆ ಹೇಳು." ಎಂದು ಹೇಳಿ ಒಳಗೆ ಹೋದಳು.

## ಇಪ್ಪತ್ತನೆಯ ಅಧ್ಯಾಯ

## ಶಾಬಾಸ್, ಬಹಾದ್ದರ್!

मणिः शाणोल्लीढः समरविजयी हेतिनिहतो
—ಭರ್ತೃಹರಿ.

ಯುದ್ಧದಲ್ಲಿ ಸಂಘಶಕ್ತಿಯೂ ಸುವ್ಯವಸ್ಥೆಯೂ ಒಂದು ಪಾಲು; ಸೇನಾನಾಯಕನ ದರ್ಪವೂ ಒಂದು ಪಾಲು. ಪಂಜಾಬದಲ್ಲಿಯ ಬಂಡನ್ನು ಮುರಿಯುವದಕ್ಕಾಗಿ ಸ್ವತಃ ರಾಜಾ ಮಾನಸಿಂಹನೇ ಬರುವನೆಂಬ ವಾರ್ತೆಯನ್ನು ಕೇಳಿದ ಕೂಡಲೆ ಬಂಡುಗಾರರು ಹೆಡೆ ಚಲ್ಲಿದರು. ಆದರೂ ಬಂಡುಗಾರರ ಮುಖ್ಯನಾಯಕನಾದ ಅಮೀರಖಾನನೆಂಬವನು ಅಸಾಧಾರಣವಾದ ಶೂರನೂ, ವಿಲಕ್ಷಣವಾದ ಸಾಹಸವುಳ್ಳವನೂ ಆಗಿರುವದರಿಂದ ಅವನು ಮೂರು ನಾಲ್ಕು ಸಾವಿರ ಜನ ಕಂದಾಹಾರದ ಪಠಾಣರನ್ನೂ, ಎರಡು

ಮೂರು ಸಾವಿರ ಜನ ಪಂಜಾಬೀ ಜನರನ್ನೂ ಕಟ್ಟಿಕೊಂಡು ಲಾಹೋರ, ಅಮೃತಸರ ಮುಂತಾದ ಕೋಟೆಗಳನ್ನು ಹಿಡುಕೊಂಡು ಮಿಾರಿದವನಾಗಿ ನಿಂತಿದ್ದನು.

ಸಂಗ್ರಾಮಕೇಸರಿಯಾದ ಮಾನಸಿಂಹ ಸೇನಾಪತಿಯು ಪಂಜಾಬದಲ್ಲಿ ಹೊಕ್ಕವನೇ ಲಾಹೋರದ ಕೋಟೆಗೆ ಮುತ್ತಿಗೆ ಹಾಕಿ ಹದಿನೈದು ದಿವಸಗಳಲ್ಲಿಯೇ ಒಳಗಿದ್ದ ಬಂಡುಗಾರರನ್ನೆಲ್ಲ ಕಡಿದು ಚಲ್ಲಿ ಕೋಟೆಯನ್ನು ತನ್ನ ಸ್ವಾಧೀನ ಮಾಡಿಕೊಂಡನು. ಈ ಮುತ್ತಿಗೆಯ ಕೆಲಸ ನಡೆದಾಗ ನರೇಂದ್ರನಾಥನು ಅನೇಕ ಪ್ರಸಂಗಗಳಲ್ಲಿ ಒಳ್ಳೇ ಸಾಹಸದಿಂದ ಕಾದಿ ತನ್ನ ಪರಾಕ್ರಮವನ್ನು ತೋರಿಸಿದ್ದರಿಂದ ವೀರಾಭಿಮಾನಿಯಾದ ಮಾನಸಿಂಹರಾಜನು ಸಂತುಷ್ಟನಾಗಿ ಸೈನ್ಯದ ಒಂದು ಭಾಗದ ಸ್ವತಂತ್ರವಾದ ಅಧಿಕಾರವನ್ನು ನರೇಂದ್ರನಿಗೆ ಕೊಟ್ಟು ಬಂಡುಗಾರರು ಹಿಡುಕೊಂಡಿದ್ದ ಬೇರೊಂದು ಕೋಟೆಗೆ ಮುತ್ತಿಗೆ ಹಾಕಲು ಅವನಿಗೆ ಅಪ್ಪಣೆಕೊಟ್ಟು ತಾನು ಅಮೃತಸರದ ಮೇಲೆ ಸಾಗಿ ಹೋದನು.

ಸ್ವತಂತ್ರವಾದ ಅಧಿಕಾರವು ಸಿಕ್ಕಿದ್ದರಿಂದ ಉತ್ತೇಜಿತನಾಗಿ ನರೇಂದ್ರನು ಅಟ್ಟಹಾಸದಿಂದ ಶತ್ರುಗಳಿದ್ದ ಕೋಟೆಗೆ ಹೋಗಿ ಒಳ್ಳೇ ವ್ಯವಸ್ಥೆಯಿಂದ ಅದಕ್ಕೆ ಮುತ್ತಿಗೆ ಹಾಕಿದನು. ಕೋಟೆಯೊಳಗಿನ ವರ್ತಮಾನವು ಹೊರಗಿದ್ದ ಜನರಿಗೆ ಮುಟ್ಟದಂತೆಯೂ, ಹೊರಗಿನ ಸಹಾಯ್ಯವಾಗಲಿ ಅನ್ನಸಾಮಗ್ರಿಯಾಗಲಿ ಕೋಟೆಯೊಳಗಿರುವವರಿಗೆ ಮುಟ್ಟದಂತೆಯೂ ನರೇಂದ್ರನು ನಾಲ್ಕೂ ಕಡೆಗೆ ದೃಷ್ಟಿಯನ್ನಿಟ್ಟುಕೊಂಡು ಕುಳಿತನು. ಕೋಟೆಯೊಳಗಿನವರ ತೋಫು ತುಬಾಕಿಗಳ ಗುಂಡು ತನ್ನ ಸೈನ್ಯದವರಿಗೆ ತಗಲದಂತೆ ನರೇಂದ್ರನು ಅಲ್ಲಲ್ಲಿ ತಗ್ಗುಗಳನ್ನು ಕಡಿಸಿ ತನ್ನ ಸೈನ್ಯವು ಮರೆಯಲ್ಲಿ ನಿಂತು ಯುದ್ಧ ಮಾಡುವಂತೆ ಮಾಡಿದನು. ಒಳಗೆ ಅನ್ನಸಾಮಗ್ರಿ ಯುದ್ಧಸಾಮಗ್ರಿಗಳ ಕೊರತೆಯಾಗುತ್ತ ಬಂದಿತು; ಹೊರಗೆ ನರೇಂದ್ರನು ತೋಫುಗಳ ಘೋರತರವಾದ ಹೊಡತವನ್ನು ನಡೆಸಿದ್ದನು. ಕಡೆಗೆ ಕೋಟೆಯೊಳಗಿನ ಬಂಡುಗಾರರು ಜೇರಿಗೆ ಬಂದರು.

ಕೋಟೆಯೊಳಗಿನ ಬಂಡುಗಾರರಿಗೆ ಸ್ವತಃ ಅಮಿಾರಖಾನನೇ ನಾಯಕನಾಗಿದ್ದನು. ಇನ್ನು ಒಳಗಿದ್ದು ಉಪವಾಸ ಸಾಯುವದಕ್ಕಿಂತಲೂ ಹೊರ

ಬಿದ್ದು ರಣಭೂಮಿಯಲ್ಲಿ ನಿಂತು ಹೋರಾಡಿ ಸಾಯುವದೇ ವೀರರಿಗೆ ಉಚಿತವೆಂದೆಣಿಸಿ ಆ ಸಂಗ್ರಾಮಪಟುವಾದ ಪಠಾಣನು ಸರಿರಾತ್ರಿಯಲ್ಲಿ ಕೋಟೆಯ ಬಾಗಿಲಗಳನ್ನೆಲ್ಲ ತೆರೆದಿಟ್ಟು ತನ್ನ ಸೈನ್ಯದವರಿಗೆ ಹೊರಬೀಳಲಾಜ್ಞಾಪಿಸಿದನು.

ಇಂದು ನಾಳೆ ಇಂಥ ಪ್ರಸಂಗವು ಬರುವದೆಂದು ತೂಕಹಾಕಿಕೊಂಡಿದ್ದವನಾದ ನರೇಂದ್ರನು ತನ್ನ ಎಚ್ಚರದಲ್ಲಿಯೇ ಇದ್ದನು. ಕೋಟೆಯ ಇಕ್ಕಟ್ಟಾದ ಸ್ಥಳದಲ್ಲಿ ನಿಂತು ಯುದ್ಧ ಮಾಡುವದಕ್ಕಿಂತಲೂ ಶತ್ರುಗಳನ್ನು ಬೈಲಿಗೆ ಹೊರಬೀಳಲು ಬಿಟ್ಟು ಅವರೊಡನೆ ಒಳ್ಳೇ ಸಾಹಸದಿಂದ ಯುದ್ಧ ಮಾಡತಕ್ಕದ್ದೆಂದು ನರೇಂದ್ರನು ನಿಶ್ಚಯಿಸಿದ್ದನು.

ಕೆರೆಯೊಡೆದ ಮೇಲೆ ನೀರಿನ ಪ್ರವಾಹವು ರಭಸದಿಂದ ಹರಿದು ಓಡುತ್ತಿರುವಂತೆ ಬಂಡಿನವರು ಕೋಟೆಯೊಳಗಿಂದ ಹೊರಬಿದ್ದು ಓಡುವ ಉದ್ಯೋಗಕ್ಕೆ ಬಿದ್ದರು. ನರೇಂದ್ರನು ಅವರನ್ನು ಅಲ್ಲಿಯೇ ತಡೆದು ಮದ್ದುಗುಂಡುಗಳ ಹೊಡೆತದಿಂದ ಅವರನ್ನು ಮುಚ್ಚಿಬಿಟ್ಟನು. ಪಠಾಣರಾದರೂ ಹೇಡಿಗಳಾಗಿದ್ದಿಲ್ಲ. ಉಭಯ ಪಕ್ಷದವರೂ ‘ ದೀನ್ ದೀನ್ ’ ಎಂದು ಗರ್ಜಿಸಿ ಒಳ್ಳೇ ಸಾಹಸದಿಂದ ಒಂದು ಪ್ರಹರದ ವರೆಗೆ ಘನವಾದ ಸಂಗ್ರಾಮವನ್ನು ಮಾಡಿದರು. ಬಂಡುಗಾರರ ಹಣೇಬರಹವು ಕಡೆಗೆ ಸೋಲುವದೇ ಎಂದು ಪಠಾಣನ ಸೈನ್ಯದವರ ತಿಳುವಳಿಕೆಯಾಗಿದ್ದರಿಂದಲೂ, ಹತ್ತೆಂಟು ದಿವಸ ಅವರು ಅರಹೊಟ್ಟೆಯುಂಡವರಾದ್ದರಿಂದಲೂ ನರೇಂದ್ರನ ಸೇನೆಯವರ ಉತ್ಸಾಹದ ಹೊಡೆತವನ್ನು ಸೈರಿಸಲಾರದೆ ಬಂಡುಗಾರರು ಕಡೆಗೆ ಎದೆಯೊಡಕೊಂಡು ಓಡಲಾರಂಭಿಸಿದರು. ಮರಣವೇ ಹಿಂಬಾಲಿಸಿರಲು ದೇಹವು ಎಷ್ಟೊಂದು ಓಡುವದು ? ಮುಂದೆ ಅಲ್ಪಕಾಲದಲ್ಲಿಯೇ ಬಂಡುಗಾರರ ದಂಡು ನಿರ್ಮೂಲವಾಗುವ ಸಮಯ ಬಂದಿತೆಂದು ಕಂಡು ಅಮೀರಖಾನನು ಗಾಯವನ್ನು ಹೊಂದಿದ ಹುಲಿಯಂತೆ ಆವೇಶವನ್ನು ತೊಟ್ಟು ಓಡುತ್ತಿರುವ ತನ್ನ ಅನುಯಾಯಿಗಳನ್ನು ನಿಲ್ಲಿಸಿ, ನರೇಂದ್ರನ ಸೈನ್ಯದ ಒಂದು ಭಾಗವನ್ನು ಹೊಡೆದು ಓಡಿಸಿದನು.

ಇದು ಪರೀಕ್ಷೆಯ ಸಮಯ ಬಂದಿತೆಂದು ನರೇಂದ್ರನು ವೀರಾವೇಶದ ಮಾತುಗಳಿಂದ ತನ್ನ ಸೈನ್ಯವನ್ನು ಹುರಿದುಂಬಿಸಿ ರಭಸದಿಂದ ಶತ್ರುಗಳ ಮೈಮೇಲೆ ಸಾಗಿ ಹೋದನು. ಸೈನಿಕರ ಪಾದಾಘಾತದಿಂದಲೂ, ಕುದುರೆ

ಗಳ ಓಡಾಟಕ್ಕೂ ರಣಭೂಮಿಯೆಲ್ಲ ಧೂಲಿಮಯವಾಗಿ ಹೋಯಿತು. ಸಂಗಡಲೇ ದೀನ್! ದೀನ್! ಅಲ್ಲಾ ಹೋ ಅಕಬರ್! ಎಂಬ ಗರ್ಜನೆಗಳ ಅಲ್ಲೋಲ ಕಲ್ಲೋಲವಾದ ಧ್ವನಿ ಎದ್ದಿತು. ಬರ್ಚಿಗಳ ಚುಚ್ಚುವಿಕೆಯಿಂದಲೂ, ಖಡ್ಗಗಳ ಪ್ರಹಾರದಿಂದಲೂ ಉಭಯ ಪಕ್ಷದಲ್ಲಿಯ ಅನೇಕ ಜನ ವೀರರು ಪ್ರೇತಗಳಾಗಿ ರಣಭೂಮಿಯಲ್ಲಿ ಉರುಳಿದರು. ಅಷ್ಟರಲ್ಲಿ ಹುಲಿಗೆ ಸಮಾನನಾಗಿದ್ದ ಅಮೀರಖಾನನು ತನ್ನ ಭವ್ಯವಾದ ಕುದುರೆಯನ್ನೋಡಿಸುತ್ತ ಬಂದು ತನ್ನ ಬರ್ಚಿಯಿಂದ ನರೇಂದ್ರನನ್ನು ಹೊಡೆಯಬೇಕೆಂದು ಯತ್ನಿಸಿದನು. ನರೇಂದ್ರನು ಧೂರ್ತನಾದ ರಾವುತನೆಂದೇ ಆ ಹೊಡೆತವನ್ನು ತಪ್ಪಿಸಿಕೊಂಡು ತನ್ನ ತೀಕ್ಷ್ಣವಾದ ತ್ರಿಶೂಲದಿಂದ ಆ ಪಠಾಣನನ್ನು ಹೊಡೆಯಹೋದನು. ಹೀಗೆ ಪರಸ್ಪರ ಹೊಡೆತವನ್ನು ಪರಸ್ಪರರು ಜಾಣ್ಮೆಯಿಂದ ತಪ್ಪಿಸಿಕೊಳ್ಳುತ್ತ ಕ್ಷಣಹೊತ್ತು ಅವರು ಒಳ್ಳೇ ಪರಾಕ್ರಮದಿಂದ ಕಾದಿದರು. ಕಡೆಗೆ ಉಭಯರೂ ತಮ್ಮ ತಮ್ಮ ಕುದುರೆಗಳನ್ನು ಹಿಂದಕ್ಕೊಯ್ದು ನಿಂದಿರಿಸಿ ಬರ್ಚಿಗಳನ್ನು ಗುರಿಮಾಡಿ ಹಿಡುಕೊಂಡ ಬಳಿಕ ಒಳ್ಳೇ ಆವೇಶದಿಂದ ಆ ಕುದುರೆಗಳನ್ನು ಓಡಿಸುತ್ತ ಒಬ್ಬರ ಮೇಲೊಬ್ಬರು ಧಾವಿಸಿ ಬಂದರು. ಎಂಥ ಘೋರತರವಾದ ವೀರಾವೇಶವದು ! ಈ ಪ್ರಸಂಗದಲ್ಲಿ ಈ ವೀರರೀರ್ವರೂ ಸಾಯುತ್ತಾರೆಂದು ಸೈನ್ಯದವರೆಲ್ಲರೂ ಕಂಡು ಹಾಹಾಕಾರ ಮಾಡಿದರು. ಅಷ್ಟರಲ್ಲಿ ಅಕೋ ಅಮೀರಖಾನನು ಕುದುರೆಯ ಮೇಲಿಂದ ಗತಪ್ರಾಣನಾಗಿ ಬಿದ್ದನು! ನರೇಂದ್ರನಾದರೂ ತನ್ನ ಕುದುರೆಯ ಗೋಣು ಹಿಡುಕೊಂಡು ಜೀನಿನ ಮೇಲೆಯೆ ಒರಗಿಕೊಂಡನು.

ನರೇಂದ್ರನ ಜೀವಕ್ಕೆ ಅಪಾಯವಾಗಿಲ್ಲವೆಂದು ತಿಳಿದು ಅವನ ಸೈನ್ಯದವರು " ಮಹಾಬೀರಕೀ ಜೈ ! ಅಲ್ಲಾ ಹೋ ಅಕಬರ ! " ಎಂದು ಉತ್ಸಾಹದಿಂದ ಕೂಗಿ ತಮ್ಮ ನಾಯಕನನ್ನು ಕುದುರೆಯ ಮೇಲಿಂದ ಇಳಿಸಿಕೊಂಡರು. " ಅಮೀರಖಾನನು ಬಿದ್ದನಲ್ಲೆ ? " ಎಂದು ನರೇಂದ್ರನು ಕೇಳಿದನು. " ಪ್ರಭೋ, ತಮ್ಮ ಬರ್ಚಿಯು ಅಮೀರಖಾನನ ಎದೆಯಲ್ಲಿ ನಟ್ಟು ಬೆನ್ನಿನಲ್ಲಿ ಪಾರಾದ್ದರಿಂದ ಅವನಾಗಲೇ ಮಡಿದು ಹೋದನು. " ಎಂದು ತನ್ನ ಸೈನಿಕರು ಹೇಳಿದ್ದು ಕೇಳಿ ನರೇಂದ್ರನ ಮುಖದಲ್ಲಿ ಆನಂದದ ನಗೆ ತೋರಿತು ಮಾತ್ರ, ಅಷ್ಟರಲ್ಲಿಯೇ ಅವನು ಮತ್ತೆ ವ್ಯಾಕುಲನಾಗಿ ಕಣ್ಣುಮುಚ್ಚಿದನು.

ಅಮೀರಖಾನನು ಮಡಿದುಹೋದ ವರ್ತಮಾನವನ್ನು ಕೇಳಿ ಬಂಡು ಗಾರರೆಲ್ಲರೂ ದಿಕ್ಕಾಪಾಲಾಗಿ ಓಡಿಹೋದರು.

ನರೇಂದ್ರನು ಕಣ್ಣುಮುಚ್ಚಿದ್ದು ಕಂಡು ಅವನ ಸಂಗಡ ಇದ್ದ ಹಕೀಮನು ಲಗಬಗೆಯಿಂದ ಅವನ ಗಾಯವನ್ನು ಪರೀಕ್ಷಿಸಿ ತನ್ನಲ್ಲಿದ್ದ ಔಷಧವನ್ನು ಹಾಕಿ ಚನ್ನಾಗಿ ಕಟ್ಟಿದನು. ಬಳಿಕ ಜಯಶಾಲಿಗಳಾದ ಸೈನ್ಯ ದವರು ಪ್ರಾತಃಕಾಲವಾಗುವದರೊಳಗಾಗಿಯೇ ಕೋಟೆಯನ್ನು ಆಕ್ರಮಿಸಿ ಕೊಂಡು ಕುಳಿತರು. ಆದರೆ ಆ ಜಯೋದ್ರೇಕಕ್ಕಿಂತಲೂ ತಮ್ಮ ನಾಯಕನಿಗೆ ಆದ ಭಯಂಕರವಾದ ಗಾಯವನ್ನು ಕಂಡು ಅವರಿಗೆ ವ್ಯಸನವೇ ಆಯಿತು. ನರೇಂದ್ರನ ಕೈಕೆಳಗಿನ ಅಮಲದಾರರು, ಕೆಲವು ಜನ ಸೈನಿಕರು ಕೋಟೆ ಯಲ್ಲಿ ನಿಂತರು. ಉಳಿದವರು ನರೇಂದ್ರನಾಥನನ್ನು ಮೇಣೆಯಲ್ಲಿ ಹಾಕಿ ಕೊಂಡು ಅಮೃತಸರ ಕೋಟೆಯನ್ನು ಗೆದ್ದುಕೊಂಡು ಕುಳಿತಿದ್ದ ಮಾನ ಸಿಂಹನ ಬಳಿಗೆ ಬಂದರು.

ತನ್ನ ಶಿಷ್ಯನಾದ ನರೇಂದ್ರನು ಅಮೀರಖಾನನಂಥ ಮಹಾ ಪರಾಕ್ರಮಿ ಯನ್ನು ಸಂಪೂರ್ಣವಾಗಿ ಸೋಲಿಸಿ ಅವನನ್ನು ಕೊಂದ ವರ್ತಮಾನ ವನ್ನು ಕೇಳಿ ಮಾನಸಿಂಹರಾಜನಿಗೆ ಮಿತಿಮೀರಿದ ಹರ್ಷವಾಯಿತು. ಆ ಶತ್ರುದಲ್ಲಣನ ಕಣ್ಣುಗಳಲ್ಲಿ ಆನಂದಾಶ್ರುಗಳು ಒತ್ತಿಬಂದವು. ಮಾನಸಿಂಹನ ಆಜ್ಞೆಯ ಮೇರೆಗೆ ಸಕಲ ಸೈನಿಕರೂ, ಅಮಲದಾರರೂ ತಮ್ಮ ಶಸ್ತ್ರಗಳನ್ನು ಹಿರಿದು ನರೇಂದ್ರನ ಮೇಣೆಗೆ ಪ್ರಣಾಮ ಮಾಡಿ ಆ ಮೇಣೆಯನ್ನು ತಂದು ಮಾನಸಿಂಹನ ಶಿಬಿರದಲ್ಲಿ ಇರಿಸಿದರು.

ಮಾನಸಿಂಹರಾಜನು ನರೇಂದ್ರನ ಮೇಣೆಯೊಳಗೆ ಮೋರೆ ಹಾಕಿ ನೋಡಿ ಅವನ ಕೈಹಿಡಿದು "ಶಾಬಾಸ್, ಬಹದ್ದರ್! ನಾನು ನನ್ನ ಸ್ವಂತ ಖಡ್ಗವನ್ನು ನಿನಗೆ ಕೊಟ್ಟದ್ದಕ್ಕೆ ನೀನು ನನ್ನ ಹೆಸರು ತಂದಿ!" ಎಂದು ನುಡಿದ ಆ ವೃದ್ಧ ವೀರನ ಕಣ್ಣುಗಳಲ್ಲಿ ಅಶ್ರುಬಿಂದುಗಳು ತೋರಿದವು. ಬಳಿಕ ಅವನು ಹಕೀಮನನ್ನು ಕುರಿತು "ಹಕೀಮಜೀ, ಈ ತರುಣನಾದ ವೀರನ ಗಾಯವು ಭಯಂಕರವಾಗಿ ತೋರುತ್ತದೆ."

"ಜೀ ಹುಜೂರ್, ಹಾಗೆ ಕಾಣುತ್ತದೆ. ಬಾದಶಹರವರ ಹಕೀಮ ರಾದ ರಹಿಮಾನ ಹಕೀಮರವರ ಹೊರತಾಗಿ ಅನ್ಯರಿಂದ ಈ ಗಾಯವನ್ನು

ಮಾಯಿಸುವದು ಆಗದೆಂದು ನಾನು ನಂಬುತ್ತೇನೆ. ”

“ ಹಾಗಾದರೆ ಈ ಜಯಶಾಲಿಯ ಮೇಣೆಯ ಸಂಗಡ ಈಗಲೇ ನೀವು ಆಗ್ರಾಪಟ್ಟಣದ ಹಾದೀ ಹಿಡಿಯಿರಿ. ನಾವು ಹಕೀಮ ರಹಿಮಾನರವರಿಗೂ, ನಮ್ಮ ಮನೆಯವರಿಗೂ ಪತ್ರ ಕೊಡುತ್ತೇವೆ. ಅವರು ಈ ವೀರನ ಬಗ್ಗೆ ಚನ್ನಾಗಿ ವ್ಯವಸ್ಥೆ ಮಾಡುವರು. ನಡೆಯಿರಿ; ಮಾರ್ಗದಲ್ಲಿ ಬಲು ಜೋಕೆ ಕಂಡಿರಾ ! ”

“ ಜೋ ಹುಕುಮ್ ” ಎಂದು ಹಕೀಮನು ನಮ್ರನಾಗಿ ಪ್ರಣಾಮ ಮಾಡಿದನು.

## ಇಪ್ಪತ್ತೊಂದನೆಯ ಅಧ್ಯಾಯ

## ಸುರಲೋಕದ ವಾರಾಂಗನೆಯೋ ?
## ಅವನಿಯ ಯುವನ ಸುಂದರಿಯೋ ?

ಭಿಷಗ್ವರ್ಯರಾದ ಹಕೀಮ ರಹಿಮಾನರ ಲೋಕೋತ್ತರವಾದ ಔಷಧಗಳ ಯೋಜನದಿಂದಲೂ ಪರಿಚಾರಕರು ಆಸ್ಥೆಯಿಂದ ಮಾಡುತ್ತಿರುವ ಉಪಚಾರಗಳಿಂದಲೂ, ನರೇಂದ್ರನ ಹೊಸರಕ್ತದ ತೇಜಸ್ಸಿನಿಂದಲೂ ಮೆಲ್ಲ ಮೆಲ್ಲನೆ ಅವನಿಗೆ ಗುಣವಾಗುತ್ತ ಬಂದಿತು. ಆದರೂ ಎಂಟೂನೆಂಟು ದಿವಸ ಅವನಿಗೆ ಪಜ್ಞೆ ಕೂಡ ಇದ್ದಿಲ್ಲ. ಪರಿಸ್ಥಿತಿಯ ಜ್ಞಾನವಾಗಬೇಕಾದರೆ ಮುಂದೆ ಅವನಿಗೆ ಹದಿನೈದು ದಿವಸಗಳು ಬೇಕಾದವು.

ಒಂದು ದಿವಸ ಉತ್ತರರಾತ್ರಿಯಲ್ಲಿ ಅವನು ಪ್ರಜ್ಞೆಯನ್ನು ಹೊಂದಿ ಮೆಲ್ಲನೆ ಕಣ್ಣು ತೆರೆದು ತೇಲುಗಣ್ಣಿನಿಂದ ಸುತ್ತಲೂ ನೋಡಿದನು. ಬಹು ಪರಿಷ್ಕಾರವಾಗಿ ಅಲಂಕರಿಸಿದ ವಿಸ್ತಾರವಾದದ್ದೊಂದು ದಿವಾನಖಾನೆಯಲ್ಲಿ ತಾನಿರುವೆನೆಂದೂ, ರಾಜರಿಗೆ ಉಚಿತವಾದ ಪರ್ಯಂಕದಲ್ಲಿ ತಾನು ಮಲಗಿರುವೆನೆಂದೂ ಅವನು ಕಂಡುಕೊಂಡನು. “ ಆ ಭಯಂಕರವಾದ ದ್ವಂದ್ವ ಯುದ್ಧದಲ್ಲಿ ನಾನು ಗುರಿಯಿಟ್ಟು ಸ್ಫೂರ್ತಿಯಿಂದ ಧಾವಿಸಿ ಹೋಗಿ ಅಮೀರ

ಖಾನನನ್ನು ಬರ್ಚಿಯಿಂದ ಕೆಡಹಿದೆನು. ತುಸು ಓರೆಯಾಗಿ ನಾನು ಆ ವೀರನ ಹೊಡೆತವನ್ನು ತಪ್ಪಿಸಿಕೊಂಡೆನು. ಆದರೂ ನನಗೆ ಗಾಯು ವಾಯಿತು. ಆದರೆ ನಾನೀಗ ಯುದ್ಧರಂಗದಲ್ಲಿಯು ಒಂದು ತಂಬುವಿನಲ್ಲಿ ಯಾಗಲಿ, ಎಲ್ಲಿಯೋ ಒಂದು ಹಳ್ಳಿಯ ದೇವಾಲಯದಲ್ಲಿಯಾಗಲಿ ಬಿದ್ದು ಕೊಂಡಿರತಕ್ಕದ್ದು ಹೋಗಿ ರಾಜಮಂದಿರದಂತೆ ಕಾಣುವ ಈ ರಮ್ಯವಾದ ಸ್ಥಳಕ್ಕೆ ಹೇಗೆ ಬಂದೆನು? ಸ್ವಪ್ನದಲ್ಲಿರುವೆನೇನು ನಾನು?” ಎಂದು ವಿಸ್ಮಯಾಕುಲನಾಗಿ ಅವನು ತಾನಿದ್ದ ಸ್ಥಳವನ್ನು ಚನ್ನಾಗಿ ನಿರೀಕ್ಷಿಸಿ ನೋಡಲಾರಂಭಿಸಿದನು. ಆ ದಿವಾನಖಾನೆಯ ನಾಲ್ಕು ಮೂಲೆಯಲ್ಲಿ ನಾಲ್ಕು ಬೆಳ್ಳಿಯ ತೂಗಸಮಯಿಗಳು ಝಗ-ಝಗನೆ ಉರಿಯುತ್ತಿದ್ದವು. ಗೋಡೆಗಳು ಮುತ್ತಿನ ಸುಣ್ಣದಿಂದ ಲಕಲಕನೆ ಹೊಳೆಯುತ್ತಿದ್ದವು. ರತ್ನ ಖಚಿತವಾದ ಬಂಗಾರದ ಹೂಗಳಿಂದ ಅಲಂಕರಿಸಿದ ಬೆಳ್ಳಿಯ ಗೂಟಗಳು ಸ್ಫಟಿಕದಂತೆ ನಿರ್ಮಲವಾಗಿರುವ ಸರೋವರದಲ್ಲಿಯ ಕಮಲದ ದೇಟುಗಳಂತೆ ಕಂಡವು. ಆ ಮನೆಯ ಮೇಲ್ಕಟ್ಟಿಗೆಲ್ಲ ತುಂಬ ಬಂಗಾರದ ರಾಜಾವರಿ ಇದ್ದು ಅಲ್ಲಿ ಅನೇಕ ಪ್ರಕಾರದ ಬಣ್ಣದ ರಂಗವಲ್ಲಿಗಳು ಬಹು ಸೊಗಸಾಗಿ ಕಾಣುತ್ತಿದ್ದವು. ಕಿಟಕಿಗಳಿಗೆಲ್ಲ ಜರದ ಕಡ್ಡಿಗಳುಳ್ಳ ರೇಶಿಮೆಯ ತೆರಗಳಿದ್ದವು. ಇಂಥ ರಮಣೀಯವಾಗಿರುವ ಮಂದಿರದಲ್ಲಿ ಮಂದಾನಿಲನು ಪುಷ್ಪಗಳ ಪರಿಮಳವನ್ನು ತಂದು ಮೆಲ್ಲನೆ ಸೂಸುತ್ತಿದ್ದನು. ನರೇಂದ್ರನು ಆ ಗಾಳಿಯ ಸೊಗಸಿಗೆ ಮತ್ತೆ ತೂಕಡಿಸಿದನು.

ಪ್ರಭಾತ ಕಾಲವು ಸಮೀಪಿಸಿದ್ದರಿಂದ ಪಕ್ಷಿಗಳು ಬಹು ಮಂಜುಳವಾಗಿ ಗಾನಮಾಡಲಾರಂಭಿಸಿದವು. ಚಂಪಕ, ಬಕುಲ, ಮಾಲತೀ, ಗುಲಾಬಿ ಮುಂತಾದ ಪುಷ್ಪಗಳ ಮಕರಂದದಿಂದ ಸಂಭೃತನಾದ ಮಲಯ ಮಾರುತನು ತಿಳಿನಿದ್ದೆಯಲ್ಲಿದ್ದವನ ಅಂತರಾತ್ಮಕ್ಕೆ ಬಹು ಸುಖಕರವಾಗಿ ತಗಲಿ ಅವರನ್ನು ಮೆಲ್ಲನೆ ಎಚ್ಚರಗೊಳಿಸುತ್ತಿದ್ದನು. ಅರುಣೋದಯದ ಪ್ರಭೆಯು ತರತರದ ಬಣ್ಣದ ಕಿಟಕಿಗಳೊಳಗಿಂದ ಬಹು ಚಿತ್ರಮಯವಾಗಿ ತೋರಿತು. ನರೇಂದ್ರನಿಗೆ ಮತ್ತೆ ಎಚ್ಚರ ಬಂದಿತು. ಮಂಗಲಕರವಾಗಿರುವ ಪ್ರಭಾತಲಕ್ಷ್ಮಿಯ ಸೌಭಾಗ್ಯವನ್ನು ಕಂಡು ಅವನ ಚಿತ್ತಕ್ಕೆ ಅಲ್ಹಾದವಾಯಿತು. ಆಗಲವನು ತಲೆದಿಂಬಿನ ಕಡೆಗೆ ತುಸು ಸರಿದು ಅರೆವಾಸಿಯಾಗಿ

ಕುಳಿತಂತೆ ಮಾಡಿ ಮತ್ತೆ ತನ್ನ ಸುತ್ತಲೂ ನೋಡಿದನು. ವಿಚಿತ್ರವಾದ ವೇಷವನ್ನು ಧರಿಸಿದ ಯುವನ ಸುಂದರಿಯೊಬ್ಬಳು ನವಯೌವನದ ವನಪಿನಿಂದ ಮುಗುಳುನಗೆ ನಗುತ್ತ ನರೇಂದ್ರನ ಪರ್ಯಂಕದ ತಲೆದಿಂಬಿನ ಕಡೆಗಿದ್ದ ಬೆಳ್ಳಿಯ ಕಂಬವನ್ನು ಹಿಡುಕೊಂಡು ನಿಂತಿದ್ದಳು. ಆ ಮಂದಿರದ ಸೊಬಗನ್ನೂ, ಯುವನಸುಂದರಿಯ ಅಲೌಕಿಕವಾದ ಲಾವಣ್ಯವನ್ನೂ ಕಂಡು ಇದೇನು ಅರಬೀ ಸುರಸ ಕಥೆಗಳಲ್ಲಿಯ ಇಂದ್ರಜಾಲದ ವೃತ್ತಾಂತವೋ ನಿಜವಾದ ಸಂಗತಿಯೋ, ಎಂಬ ಭ್ರಮದಿಂದ ನರೇಂದ್ರನು ಚಕಿತನಾಗಿ ಆ ಕಾಂತಾಮಣಿಯ ಮನೋಹರವಾದ ಮುಖವನ್ನು ಮೋಹದಿಂದ ನೋಡಲಾರಂಭಿಸಿದನು. ಪ್ರಫುಲ್ಲಿತವಾದ ಕಮಲದಂತಿರುವ ಅವಳ ಸುಸ್ಮಿತವಾದ ಮುಖವೂ, ಗೌರತರವಾದ ಅವಳ ಅಂಗಕಾಂತಿಯೂ, ಕೋಮಲತರವಾದ ಸರಳ ಕರಾಂಗುಳಿಗಳೂ, ಅವಳು ತೊಟ್ಟಿರುವ ರೇಶಿಮೆಯ ನೀಲವರ್ಣದ ಝುಗೆಯ ಮೂಲಕ ಹೆಚ್ಚಾಗಿ ಎದ್ದು ಕಾಣಿಸುತ್ತಿರಲು ತಮಸ್ಸನ್ನು ಭೇದಿಸಿ ಬರುತ್ತಿರುವ ಪೂರ್ವದಿಗಂಗನೆಯಂತೆ ಆ ಕಾಮಿನಿಯು ಕಂಗೊಳಿಸಿದಳು. ನರೇಂದ್ರನು ನಿಧಿಧ್ಯಾಸದಿಂದ ತನ್ನನ್ನು ನೋಡುತ್ತಿರುವದನ್ನು ಕಂಡು ಆ ಚಪಲೆಯು ವಿದ್ಯುಲ್ಲತೆಯಂತೆ ನಿಮಿಷಾರ್ಧದಲ್ಲಿ ಕಣ್ಮರೆಯಾಗಿ ಹೋಗಿಬಿಟ್ಟಳು.

ಭಗ್ನಕುತೂಹಲನಾದ ನರೇಂದ್ರನು ಆ ಸುಂದರಿಯು ಎಲ್ಲಿ ಹೋದಳೆಂದು ಮೋರೆ-ತಿರುವಿ ಸುತ್ತಲೂ ನೋಡಿದನು. ಅವಳೇನು ಕಾಣಲಿಲ್ಲ. ಇಷ್ಟೇ ಶ್ರಮದಿಂದ ಆಯಾಸವಾದಂತಾಗಿ ಅವನು “ಯಾರಲ್ಲಿ ? ನನ್ನ ಗಂಟಲು ಆರಿದೆ, ಏನಾದರೂ ಕೊಡಿರಿ” ಎಂದು ಹಗುರವಾಗಿ ಕೇಳಿದನು. ಅವನ ಪರಿಚಾರಕ್ಕೆ ಸಿದ್ಧನಾಗಿ ನಿಂತಿರುವ ಬ್ರಾಹ್ಮಣನೊಬ್ಬನು ಬೆಳ್ಳಿಯ ತಂಬಿಗೆಯಲ್ಲಿ ಬಿಸಿ-ನೀರು ತಂದು ನರೇಂದ್ರನ ಮುಖವನ್ನು ತೊಳೆದು ಮೃದುವಾದ ವಸ್ತ್ರದಿಂದ ವರಸಿ ಬಂಗಾರದ ಬಟ್ಟಲಿನಲ್ಲಿ ಸಿದ್ಧಮಾಡಿಟ್ಟ ಕಷಾಯವನ್ನು ಕುಡಿಯಲಿಕ್ಕೆ ಕೊಟ್ಟನು. ಸ್ವಾದಮಯವಾದ ಆ ಕಷಾಯವನ್ನು ಕುಡಿದ ಕೂಡಲೆ ನರೇಂದ್ರನಿಗೆ ಮತ್ತೆ ತೂಕಡಿಕೆ ಬಂದಂತಾಗಿ ಅವನು ಮಲಗಿಕೊಂಡನು.

ಪರಿಚಾರಕರು ನರೇಂದ್ರನೊಡನೆ ಮಾತಾಡಕೂಡದೆಂದು ಹಕೀಮ

ರವರ ನಿರ್ಬಂಧವಿತ್ತು. ಅವನು ಎಚ್ಚತ್ತಾಗ ಸುಖಮಯವಾದ ವಿಚಾರ ಗಳಿದ್ದರೆ ಒಳ್ಳೇದು; ಅಲ್ಲದೇ ಅವನು ಜೀವಕ್ಕಾಗಲೀ, ಸಂತಾಪಕ್ಕಾಗಲೀ ಒಳಗಾಗಿದ್ದರೆ ಆಗಲೇ ಅವನಿಗೊಂದು ಗುಳಿಗೆಯನ್ನು ತಿನ್ನಲಿಕ್ಕೆ ಕೊಡ ತಕ್ಕದ್ದೆಂದು ಹಕೀಮರು ಪರಿಚಾರಕರಿಗೆ ಆಜ್ಞೆಯನ್ನು ವಿಧಿಸಿದ್ದರು. ನರೇಂದ್ರನು ಯಾವ ಪ್ರಕಾರದ ವಿಚಾರಗಳಲ್ಲಿ ಇರುವನೆಂಬದನ್ನು ಅರಿತು ಕೊಳ್ಳುವದಕ್ಕಾಗಿ ಆ ಚತುರೆಯಾದ ಯುವನ ಸುಂದರಿಯನ್ನು ನಿಯಮಿ ಸಿದ್ದರು.

ಹೀಗೆ ಕೆಲವು ದಿವಸಗಳಾದ ಬಳಿಕ ಇನ್ನು ನರೇಂದ್ರನ ಜೀವಕ್ಕೆ ಭಯವಿಲ್ಲೆಂದು ಕಂಡು ವೈದ್ಯರಾಜನು ಅವನಿಗೆ ಕೊಡತಕ್ಕ ಗುಳಿಗೆಗಳನ್ನು ಕಡಿಮೆ ಮಾಡಿದನು. ಸುರಸವಾದ ಕಥೆಗಳ ಪುಸ್ತಕಗಳನ್ನು ಅವನಿಗೆ ಓದಲಿಕ್ಕೆ ಕೊಟ್ಟರು. ರಾಜ್ಯದಲ್ಲಿ ಇಂತಿಂಥ ಮಹತ್ವವಾದ ಸಂಗತಿಗಳಾದ ವೆಂದು ಒಬ್ಬ ಕಾರಕೂನನು ಟಿಪ್ಪಣಿ ಮಾಡಿ ತಂದು ಅವನಿಗೆ ಕೊಡುತ್ತಿದ್ದನು. ಗಾಯಕನು ದೂರದಲ್ಲಿ ಕುಳಿತು ಸಾರಂಗ, ರುದ್ರವೀಣೆ, ಮೊದಲಾದ ವಾದ್ಯಗಳನ್ನು ಬಹು ಇಂಪಾಗಿ ಬಾರಿಸಿ ಹೋಗುತ್ತಿದ್ದನು. ಹೀಗೆ ಮನೋರಂಜನದೊಡನೆ ಔಷಧವ್ಯಾಪಾರವು ಬಹು ಸಮಾಧಾನಕರವಾಗಿ ನಡೆದದ್ದರಿಂದ ಅವನ ದೇಹದಲ್ಲಿ ರಕ್ತ-ಮಾಂಸಗಳ ವೃದ್ಧಿಯಾಗಿ ಅವನಲ್ಲಿ ಬಲವೂ ಹೆಚ್ಚಾಗುತ್ತ ಬಂದಿತು.

ಒಂದು ದಿವಸ ನರೇಂದ್ರನು ಸಾಯಂಕಾಲದ ಪಥ್ಯವನ್ನು ತೆಗೆದು ಕೊಂಡು ಸುಗಂಧಮಯವಾದ ತಾಂಬೂಲವನ್ನು ಸೇವಿಸುತ್ತ ಪಲ್ಲಂಗದ ಮೇಲೆಯೇ ದಿಂಬಕ್ಕೆ ಆತುಕೊಂಡು ಕುಳಿತು ವಿಚಾರಗೈಯುತ್ತಿದ್ದನು. ತಾನೂ ಹೇಮಲತೆಯೂ ಬೀರನಗರದ ಉದ್ಯಾನದಲ್ಲಿರುವ ಲತಾಮಂಟಪ ದಲ್ಲಿ ಭೆಟ್ಟಿಯಾದ ಮನೋವೇಧಕವಾದ ಸಂಗತಿಯನ್ನು ನೆನೆದು ತುಸು ಹೊತ್ತು ತದೇಕಧ್ಯಾನನಾಗಿ ಕುಳಿತನು. ತಾನು ಅಮೀರಖಾನನೊಡನೆ ನಡೆಸಿದ ಸಾಹಸಮಯವಾದ ದ್ವಂದ್ವಯುದ್ಧದ ನೆನಪಾಗಿ ಅವನು ಸ್ಫೂರ್ತಿ ಯಿಂದ ಎದ್ದು ಕುಳಿತನು. ಜಗತ್‌ಸುಂದರಿಯು ತನ್ನ ಪತಿಯೊಡನೆ ಆನಂದ ದಿಂದ ಕಾಲಕಳೆಯುತ್ತಿರುವಳಾದೀತು. ಒಂದು ಕರ್ತವ್ಯದಿಂದ ನಾನು ಮುಕ್ತನಾದೆನಷ್ಟೇ ಎಂದು ಸಮಾಧಾನ ತಳೆದು ಅವನು ನಕ್ಕನು.

ಹೀಗೆ ಅವನು ವಿಚಾರಗಳಲ್ಲಿ ಮಗ್ನನಾಗಿರುವಾಗ ಯಾವಳೋ ಲಲಿತಾಂಗಿಯು ಮೃದುಪದಗಳನ್ನಿಡುತ್ತ ತನ್ನ ಹಿಂದೆಯೇ ಸುಳಿದಾಡುವಳೆಂಬ ಸಂಶಯದಿಂದ ಹಿಂತಿರುಗಿ ನೋಡಲು ನರೇಂದ್ರನು ಆ ವಿಚಿತ್ರ ವೇಷದವಳಾದ ಯುವನಸುಂದರಿಯನ್ನೇ ಕಂಡನು. ಆ ಮದಲೋಚನೆಯು ತನ್ನ ಕಡೆಗಣ್ಣ ನೋಟದಿಂದ ನರೇಂದ್ರನನ್ನು ಕದ್ದು ನೋಡಿ ತನ್ನ ಸುಮನೋಹರವಾದ ಮುಖದಲ್ಲಿ ಅಹುದೋ, ಅಲ್ಲವೋ, ಎಂಬಷ್ಟು ಎಳೆನಗೆಯನ್ನು ತಳೆದಳು.

“ ಸುಜಾತಳೆ, ನೀನಾರು ? ಇದಕ್ಕೂ ಮೊದಲು ನಿಜವಾಗಿಯೋ, ಸ್ವಪ್ನದಲ್ಲಿಯೋ ನಿನ್ನನ್ನು ನಾನು ಕಂಡಂತೆ ಭಾಸವಾಗುತ್ತದೆ ” ಎಂದು ನರೇಂದ್ರನು ಕುತೂಹಲವುಳ್ಳವನಾಗಿ ಕೇಳಿದನು.

“ ಕಾರಣವಿಲ್ಲದೆ ನಿಮ್ಮೊಡನೆ ಮಾತಾಡಕೂಡದೆಂದು ಹಕೀಮಸಾಹೇಬರು ಆಜ್ಞೆಮಾಡಿರುವರು. ” ಎಂದು ಆ ಲಲನೆಯು ಅವನತಮುಖಿಯಾಗಿ ನುಡಿದಳು.

“ ಶುಭಾಂಗಿ, ನನ್ನ ಗಾಯವು ಮಾಯುತ್ತ ಬಂದಿದೆ. ಇನ್ನು ನಾನೆಷ್ಟು ಮಾತಾಡಿದರೂ ಅಪಾಯವಾಗದೆಂದು ಆ ವೃದ್ಧರಾದ ವೈದ್ಯರಾಜರು ನನಗೆ ಹೇಳಿರುವರಲ್ಲ ! ” ಎಂದು ಅವನು ಮಂದಹಾಸದಿಂದ ನುಡಿದನು.

ಅಂದರೂ ಆ ಭೀರುವು ಉತ್ತರವನ್ನು ಕೊಡದಲೆ ನರೇಂದ್ರನನ್ನು ಆಗಿಂದಾಗ ತನ್ನ ಕಟಾಕ್ಷದಿಂದ ನೋಡುತ್ತ ನಿಂತದ್ದನ್ನು ಕಂಡ ನರೇಂದ್ರನು ‘ इय बाला मां प्रत्यनवरतमिंदीवरदलं प्रभा चोरं चक्षुः क्षिपति किमभि प्रेतमनया ’ ಎಂಬ ಶ್ಲೋಕಾರ್ಥವನ್ನು ಮಂಜುಳವಾಗಿ ಸಿಳ್ಳುಹಾಕುತ್ತ ವಿಚಾರಮೂಢನಾಗಿ ಕುಳಿತನು. ಆ ಯುವನತರುಣಿಗೆ ನರೇಂದ್ರನ ಭಾವಾರ್ಥವು ತಿಳಿಯಿತೋ ಏನೋ ! ಬಲವತ್ತರವಾದ ನಾಚಿಕೆಯಿಂದ ಅವಳ ಪ್ರಫುಲ್ಲಿತವಾದ ಮುಖಕಮಲವು ಒಂದು ಪ್ರಕಾರದ ಶೋಭೆಯನ್ನು ಹೊಂದಿತು.

“ ಮಾನಿನಿ, ನೀನು ಮಾತಾಡಲೊಲ್ಲೇಕೆ ? ಇಂಥ ರೂಪವತಿಯಾದ ನೀನು ಸುರಲೋಕದ ವಾರಾಂಗನೆಯೋ, ಅವನಿಯ ಯುವನಸುಂದರಿಯೋ? ಯಾರು ಹೇಳು ?

ಸುರಾಂಗನೆಯಾದರೇನು, ಮನುಜಸುಂದರಿಯಾದರೇನು, ರಮಣಿಯರು ತಮ್ಮ ರೂಪದ ವರ್ಣನೆಯನ್ನು ಕೇಳಿ ಸಂತುಷ್ಟರಾಗಿ ಮೃದುಸ್ಮಿತೆಯರಾಗುವದುಂಟು. ನರೇಂದ್ರನ ಮಾತು ಕೇಳಿ ಆ ಯುವನಿಯು ತನ್ನ ಪಾದಾಂಗುಷ್ಠದಿಂದ ನೆಲವನ್ನು ತೀಡುತ್ತ ಲಜ್ಜೆಯಿಂದ ರಕ್ತಿಮೆಯನ್ನು ಹೊಂದಿದ ತನ್ನ ಮುಖಕಮಲದಲ್ಲಿ ಮಂದಹಾಸವನ್ನು ಬೀರಿದಳು.

ನರೇಂದ್ರನು ತನ್ನ ಎದೆಯಲ್ಲಿ ಇನ್ನೂ ನೋವು ಇರುವದೆಂಬದನ್ನು ಲಕ್ಷಿಸದೆ ರಭಸದಿಂದ ತನ್ನ ಮಂಚವನ್ನಿಳಿದು ಆ ಲಲನೆಯ ಕೈಹಿಡಿದು "ಲೀಲಾವತಿ, ನೀನು ಈ ಭೂಲೋಕದ ರಮಣಿಯೋ ಅಹುದು! ಹೀಗೆ ಮೌನವನ್ನು ಧರಿಸಿ ನನ್ನಲ್ಲಿ ಕುತೂಹಲವನ್ನೇಕೆ ಬೆಳೆಸುವಿ? ನೀನಾದರು ಹೇಳು? ಈ ನರೇಂದ್ರನಿಂದ ಅನುಚಿತವಾಗುವದೆಂದು ತಿಳಿದು ಭಯಪಡಬೇಡ" ಎಂದು ಕೇಳಿದನು.

"ಕೈ ಬಿಡಿರಿ! ವೀರರಾದವರೆಲ್ಲರೂ ವಿನಯವನ್ನು ಬಿಟ್ಟುಬಿಡಬೇಕೆಂಬ ಸಿದ್ಧಾಂತವಿರುವದೇನು?" ಎಂದು ನಗೆಮುಖವನ್ನು ತಾಳಿ ಆ ತರುಣಿಯು ನುಡಿದು ತನ್ನ ಕೈಬಿಡಿಸಿಕೊಳ್ಳುವ ಯತ್ನಮಾಡುತ್ತಿದ್ದರೂ ಅವಳ ಮನಸ್ಸಿನಲ್ಲಿ ಹಾಗೆ ಮಾಡುವದು ಇದ್ದಿಲ್ಲವೆಂದು ಚತುರನಾದ ವಿಲಾಸಿಯು ಹೇಳಬಹುದಾಗಿತ್ತು.

"ಸುಂದರಿ, ಮಾನಿನಿಯರಿಗೆ ಅಮರ್ಯಾದೆಯ ವರ್ತನವು ಸೇರದಿದ್ದರೂ, ಅವರು ಪುರುಷರಲ್ಲಿ ಹೀನಸತ್ವವಾದ ಸೌಮ್ಯತೆಯನ್ನು ಕಂಡದ್ದಾದರೆ ಕ್ಷಮಿಸುವರೆ?" ಎಂದು ನುಡಿದ ನರೇಂದ್ರನು ತನ್ನ ಸಾಹಸಕ್ಕೆ ತಾನೇ ಬೆರಗಾಗಿ ನಿಂತನು.

"ಅದೇನೋ ನನಗೆ ತಿಳಿಯದು" ಎಂದು ಆ ಸುಂದರಿಯು ನರೇಂದ್ರನೇ ತಾನಾಗಿ ಬಿಟ್ಟ ಕೈಯನ್ನು ಬಿಡಿಸಿಕೊಂಡು ನುಡಿದಳು.

"ಮಾನಿನಿ, ನನ್ನಿಂದ ಅನುಚಿತವಾಯಿತೇನು?" ಎಂದು ನರೇಂದ್ರನು ವಿನಯದಿಂದ ಕೇಳಿದನು.

"ಮುಗ್ಧೆಯಾದ ಬಾಲಕಿ ನಾನು. ನನಗಿನ್ನೂ ಉಚಿತವಾವದೋ ಅನುಚಿತವಾವದೋ ತಿಳಿಯದು."

"ಮಾನಿನಿ, ಕ್ಷಮಿಸು. ನಿನ್ನ ಸೌಂದರ್ಯಕ್ಕೆ ಬೆರಗಾಗಿ ನಾನೊಂದು

ಅಸಮಂಜಸವಾದ ಕೆಲಸವನ್ನು ಮಾಡಿದೆನು. ಅತಿಶಯವಾಗಿ ನುಣುಪಾಗಿದ್ದ ಸ್ಥಳದಲ್ಲಿ ಹೊಸಬನೊಬ್ಬನು ಜಾರಿಬಿದ್ದರೆ ಅವನು ಉನ್ಮತ್ತನೇ ಎಂದು ಹೇಳಲಾಗದಷ್ಟೆ ?" ಎಂದು ಹೇಳಿಕೊಂಡನು.

ನರೇಂದ್ರನ ಅನುನಯವನ್ನು ಕಂಡು ಆ ಸುಂದರಿಯು ತನ್ನ ಮುಖದಲ್ಲಿ ಧರಿಸಿದ ಗಾಂಭೀರ್ಯದ ಬಿಗಿಯನ್ನು ಎಳೆನಗೆಯ ಜುಳುಕಿನಿಂದ ತುಸು ಸಡಿಲುಮಾಡಿ "ಇದು ಹಾಗಿರಲಿ, ನಿಮ್ಮ ಪ್ರಕೃತಿಗೆ ಸ್ವಲ್ಪ ಆರಾಮವಿರುವದಷ್ಟೆ ? ಮೈಯಲ್ಲಿ ಬಲ ಬಂದಿರುವದೆಂಬದು ಈ ನನ್ನ ಕೈ ಮೇಲೆ ಮೂಡಿದ ನಿಮ್ಮ ಅಂಗುಲಿಗಳೇ ಸೂಚಿಸುತ್ತವೆ" ಎಂದು ಆ ವಿಲಾಸಿನಿಯು ನರೇಂದ್ರನು ಹಿಡಿದಿದ್ದ ತನ್ನ ಕೋಮಲವಾದ ಕರವನ್ನು ನೋಡಿಕೊಳ್ಳುತ್ತ ನುಡಿದಳು.

"ಚಾರುಗಾತ್ರಿ, ಇಷ್ಟು ಆಸ್ಥೆಯಿಂದ ನನ್ನ ಪ್ರಕೃತಿಯ ಸಮಾಚಾರವನ್ನು ಅರಿತುಕೊಳ್ಳುವವಳು ನೀನು ಯಾರೆಂಬದನ್ನು ಹೇಳದಿದ್ದರೆ ನಿನ್ನೊಡನೆ ನಾನು ಇನ್ನುಮೇಲೆ ಮಾತೇ ಆಡುವದಿಲ್ಲ" ಎಂದು ಹೇಳಿ ನರೇಂದ್ರನು ನಕ್ಕನು.

"ಈ ನಗೆಯು ನಿಮ್ಮ ಕೋಪವನ್ನು ಚನ್ನಾಗಿ ವ್ಯಕ್ತಪಡಿಸುತ್ತಿರುವದು !" ಎಂದು ನಕ್ಕು ಅವಳು ಹೇಳಿದಳು : "ಈ ಮಂದಿರವು ಅಕಬರ ಬಾದಶಹರ ಪ್ರೀತಿಯವರಾದ ಅಂಬರಬಾದಶಾಹಿಣಿಯವರ ಆಪ್ತರಿಷ್ಟರು ಬಂದಿರುವ ಸ್ಥಳವು. ಮಾನಸಿಂಹರಾಜರ ಕೋರಿಕೆಯ ಮೇರೆಗೆ ಬಾದಶಾಹಿಣಿಯವರು ನಿಮ್ಮನ್ನು ಔಷಧೋಪಚಾರಕ್ಕಾಗಿ ಇಲ್ಲಿ ಇಟ್ಟುಕೊಂಡಿರುವರು. ನಾನು ಅಂಬರದ ಬಾದಶಾಹಿಣಿಯವರ ಬಳಿಯಲ್ಲಿರುವ ಯವನ ಸೈರಂಧ್ರಿಯು. ನನ್ನ ಹೆಸರು ಜುಲೇಕಾ."

"ನಾನೀಗ ಆಗ್ರಾಪಟ್ಟಣದಲ್ಲಿರುವೆನೇನು ?"

"ಅಹುದು."

"ಯುವತೀ, ನೀನು ಚತುರೆಯೂ ನೀತಿಯುತಳೂ ಆಗಿರುವದರಿಂದ ನೀನು ದಾಸಿಯಾಗಿ ಹುಟ್ಟಿದವಳಲ್ಲ. ನಿನ್ನ ವೃತ್ತಾಂತವನ್ನು ತುಸು ಕೇಳಬೇಕೆಂಬ ಇಚ್ಛೆಯಾಗಿದೆ. ದಯಮಾಡಿ ಹೇಳುವಿಯಾ ?"

"ನಾನೊಬ್ಬ ಯವನ ಜಾತಿಯ ಸರದಾರನ ಮಗಳು. ಕಾಬೂಲಿಸ್ತಾನದ ಯುದ್ಧದಲ್ಲಿ ನನ್ನ ತಂದೆಯು ಮಡಿದು ಹೋದ್ದರಿಂದ ಮಾನಸಿಂಹ

ರಾಜನು ನನ್ನನ್ನು ಆಗ್ರಾಕ್ಕೆ ತಂದು ಅಂಬರದ ಬಾದಶಾಹಿಣಿಯ ಸೇವೆಯಲ್ಲಿ ಇಟ್ಟು ಎರಡು ಮೂರು ವರುಷಗಳಾದವು. ಪರದೇಶಿಯಾದ ನಾನು ದೇಶಕೋಶಗಳ ಹಂಬಲವನ್ನು ಬಿಟ್ಟು, ಇದ್ದದ್ದೇ ಸುಖವೆಂದು ತಿಳಿದು ಇದ್ದುಕೊಂಡಿದ್ದೇನೆ " ಎಂದು ಹೇಳಿದಳು.

ನರೇಂದ್ರನು ಮೆಲ್ಲನೆ ಜುಲೇಕೆಯ ಕೈ ಹಿಡಿದು, " ಜುಲೇಕಾ, ನೀನು ಪರದೇಶಿಯಾಗಿರುವಂತೆಯೇ ನಾನೂ ತಂದೆತಾಯಿಗಳನ್ನು ಕಳಕೊಂಡು ಪರದೇಶಿಯಾಗಿರುವೆನು. ಸಂಸಾರಸುಖದ ಆಸೆಯು ಕಡಿದದ್ದರಿಂದ ನಾನೂ ನನ್ನ ಜಮೀನದಾರಿಯನ್ನು ಬಿಟ್ಟುಕೊಟ್ಟು ಖಡ್ಗಪಾಣಿಯಾದ ಬೈರಾಗಿಯಾಗಿ ಹೊರಬಿದ್ದು ಬಂದಿದ್ದೇನೆ " ಎಂದು ಹೇಳಿ ನರೇಂದ್ರನು ಉಸುರು ಹಾಕಿದನು.

ಜುಲೇಕೆಯು ಈ ವೃತ್ತಾಂತವನ್ನು ಕೇಳಿ ವ್ಯಥಿತಳಾಗಿ " ಸಂಸಾರದ ಆಸೆ ಯಾಕೆ ಕಡಿದಿತು ? " ಎಂದು ಕೇಳಿದಳು.

" ಒಬ್ಬ ಮನಮೋಹಿನಿಯು ನನಗೆ ಅಪ್ರಾಪ್ಯಳಾದ್ದರಿಂದ ನಾನು ಮನೆಮಾರುಗಳನ್ನು ಬಿಟ್ಟು ಹೀಗೆ ಎದ್ದು ಬಂದೆನು. " ಎಂದು ನರೇಂದ್ರನು ಸದ್ಗದಿತಕಂಠನಾಗಿ ಹೇಳಿದನು.

ಜುಲೇಕೆಯು, ನರೇಂದ್ರನು ಹೇಳುವದನ್ನೆಲ್ಲ ಅವಹಿತಚಿತ್ತಳಾಗಿ ಕೇಳುತ್ತಿದ್ದಳು. ವಿಹ್ವಲಹೃದಯಳಾಗಿದ್ದ ಆ ತರುಣಿಯ ಮುಖವು ಬಾಡಿದಂತಾಗಿದ್ದು ಅವಳ ಕಣ್ಣುಗಳೊಳಗಿಂದ ಉದುರುತ್ತಿದ್ದ ಅಶ್ರುಬಿಂದುಗಳು ದೀವಿಗೆಗಳ ಪ್ರಕಾಶಕ್ಕೆ ಮೌಕ್ತಿಕಬಿಂಬಗಳಂತೆ ಕಾಣಿಸಿದವು.

ನರೇಂದ್ರನು ಮತ್ತೆ ಜುಲೇಕೆಯ ಕೈಹಿಡಿದು " ಜುಲೇಕಾ, ನೀನು ಸದಯಾಂತಃಕರಣದವಳು " ಎಂದು ನುಡಿದು ಅವಳ ಕೋಮಲವಾದ ಹಸ್ತವನ್ನು ಮೆಲ್ಲನೆ ಚುಂಬಿಸಿದನು. ಜುಲೇಕೆಯು ಸುಮ್ಮನೆ ನಿಂತುಕೊಂಡಳು.

" ನರೇಂದ್ರನಾಥರಾಯರೆ, ರಾತ್ರಿ ಬಹಳಾಯಿತು. ನನಗಿನ್ನು ಅಪ್ಪಣೆ ಕೊಡಿರಿ " ಎಂದು ಹೇಳಿದವಳೇ ಜುಲೇಕೆಯು ಹೊರಟು ಹೋದಳು.



## ಇಪ್ಪತ್ತೆರಡನೆಯ ಅಧ್ಯಾಯ

### ಇದು ಸಕಲ ವೀರರ ಆದ್ಯಕರ್ತವ್ಯವು

ಒಂದು ದಿವಸ ರಹಿಮಾನ ಹಕೀಮರವರು ನರೇಂದ್ರನಿದ್ದಲ್ಲಿಗೆ ಬಂದು ಅವನ ಪ್ರಕೃತಿಯನ್ನು ನೋಡಿ ಸಂತುಷ್ಟರಾಗಿ "ಶುಕ್ರೆ ಅಲ್ಲಾ ! ಲುಕ್ಮಾನ್ ಹಕೀಮರವರ ಅನುಗ್ರಹದಿಂದ ಈ ತರುಣನು ಸಂಪೂರ್ಣವಾಗಿ ನೆಟ್ಟಗಾದನು. ಏ ! ಪರವರ್ದಿಗಾರ್, ಈ ದಾಸನಿಂದ ಹೀಗೆಯೇ ಲೋಕದ ಸೇವೆಯಾಗುವಂತೆ ಮಾಡು !" ಎಂದು ಮಹಾಸಾಧುವಾದ ಆ ಭಿಷಗ್ವರ್ಯನು ತನ್ನ ಮುಖವನ್ನು ಮೇಲಕ್ಕೆ ಎತ್ತಿ ಪರಮಾತ್ಮನನ್ನು ಕೊಂಡಾಡಿ ಅತಿ ಶುಭ್ರವಾಗಿರುವ ತನ್ನ ಗಡ್ಡವನ್ನು ತೀಡಿಕೊಂಡನು. ಬಳಿಕ ಅವನು ನರೇಂದ್ರನನ್ನು ಕುರಿತು "ನರೇಂದರ್, ನಿನಗಿನ್ನು ಔಷಧದ ಪ್ರಯೋಜನವಿಲ್ಲ. ನೀನಿನ್ನು ಬೇಕಾದ ಹಾಗೆ ತಿರುಗಾಡಬಹುದು. ಆದರೂ ಇನ್ನೂ ಎಂಟು ದಿವಸ ನೀನು ಬಹಳೇ ಆಯಾಸದ ಕೆಲಸ ಮಾಡಲಾಗದು. ಇಕೋ ಈ ಹದಿನೈದು ಗುಳಿಗೆಗಳನ್ನು ತೆಗೆದುಕೋ. ಇದರಲ್ಲಿ ಏಳು ಗುಳಿಗೆಗಳನ್ನು ದಿನಾಲು ಒಂದರಂತೆ ಏಳು ದಿವಸ ಇಲ್ಲಿಯೇ ಇದ್ದು ಸೇವಿಸು. ಉಳಿದವುಗಳನ್ನು ನೀನು ಬೇಕಾದಲ್ಲಿ ಇದ್ದು ತೆಗೆದುಕೊಂಡರೂ ಚಿಂತೆಯಿಲ್ಲ. ಈ ಅಮೌಲ್ಯವಾದ ಪೌಷ್ಟಿಕದಿಂದ ಬೇಗನೆ ರಕ್ತವೃದ್ಧಿಯಾಗಿ ನಿನ್ನ ದೇಹದಲ್ಲಿ ವಿಲಕ್ಷಣವಾದ ಬಲವು ಬರುವದು."

ನರೇಂದ್ರನು ಸಾಧುವರ್ಯನಾದ ಆ ವೈದ್ಯನಿಗೆ ಪ್ರಣಾಮಮಾಡಿ "ಮೆಹೆರ್ಬಾನ್, ತಮ್ಮಂಥ ಸತ್ಪುರುಷರ ಔಷಧೋಪಚಾರಗಳು ನನಗೆ ದೊರಕಿದ್ದು ಕೇವಲ ಪರಮಾತ್ಮನ ಕೃಪೆಯೇ ಸರಿ. ತಮ್ಮ ಉಪಕಾರವನ್ನು ತೀರಿಸುವದು ಈ ಬಡಶಿಪಾಯಿಯ ಕಡಿಂದ ಆದೀತೆ ? ಆದರೂ ಈ ಅಲ್ಪ ಕಾಣಿಕೆಯನ್ನು ರಾಜವೈದ್ಯರು ಪರಮದಯಾಳುಗಳಾಗಿ ಸ್ವೀಕರಿಸಬೇಕೆಂದು ನಾನು ಪ್ರಾರ್ಥಿಸುತ್ತೇನೆ." ಎಂದು ನುಡಿದು ನರೇಂದ್ರನು ತನ್ನ ಬೆರಳಿನಲ್ಲಿ ಇದ್ದ ರತ್ನದ ಉಂಗುರವನ್ನು ರಹಿಮಾನ್ ಹಕೀಮರ ಮುಂದಿರಿಸಿದನು.

"ಯಾ ಸುಭಾನಲಾ ! ತೋಬಾ ! ತೋಬಾ ! ನರೇಂದರ್,

ಹೀಗೆ ವೈದ್ಯರು ಕಾಣಿಕೆಯನ್ನು ತೆಗೆದುಕೊಂಡರೆ ವಿದ್ಯೆಯನ್ನು ಮಾರಿ ಕೊಂಡಂತಾಗಲಿಲ್ಲ ? ಬಾದಶಹಾ ಅಕಬರಶಹಾರವರು ತಮ್ಮ ಕರ್ತವ್ಯಕ್ಕೆ ಅನುಸರಿಸಿ ಸಕಲ ಪಂಡಿತರ ವ್ಯವಸ್ಥೆಯನ್ನು ಚನ್ನಾಗಿ ಇಟ್ಟಿದ್ದಾರೆ. ನಮಗೆ ಯಾತರ ಕೊರತೆಯೂ ಇಲ್ಲದಲ್ಲಿ, ಮಣಿಮುಕ್ತಾದಿಗಳನ್ನು ನಾವು ಕಟ್ಟಿ ಕೊಂಡು ಏನು ಮಾಡೋಣ ? " ಎಂದು ಹೇಳಿ ಹಕೀಮರು ಮತ್ತೆ ತಮ್ಮ ಗಡ್ಡವನ್ನು ತೀಡಿಕೊಂಡರು.

"ಮೆಹರ್ಬಾನ್, ಜಗತ್ತಿನ ಅನುಭವವಿಲ್ಲದ ಅಜ್ಞಾನಿ ನಾನು. ಮೆಹರ್ಬಾನರು ಕೃಪಾವಂತರಾಗಿ ನನ್ನನ್ನು ಕ್ಷಮಿಸಬೇಕು." ಎಂದು ನರೇಂದ್ರನು ನಮ್ರನಾಗಿ ಬೇಡಿಕೊಂಡನು.

"ಜೀತೇರಹೋ ! ಜೀತೇರಹೋ ! ನರೇಂದರ್, ರಾಜಾ ಮಾನ ಸಿಂಗಜೀ ಅವರದೂ ನನ್ನದೂ ಸ್ನೇಹ ಬಹಳ. ಅವರನ್ನು ಸಂತೋಷ ಗೊಳಿಸುವಂಥ ಕೃತ್ಯವನ್ನು ಖುದಾಪರವರ್ದಿಗಾರರವರು ನನ್ನಿಂದ ಮಾಡಿ ಸಿದರು. ಇದೇ ನನಗೆ ಸರ್ವೋತ್ಕೃಷ್ಟವಾದ ಪ್ರತಿಫಲವು." ಎಂದು ಹೇಳಿ ಹಕೀಮರು ಎದ್ದು ಹೋದರು.

ಹಕೀಮರ ದಿವ್ಯವಾದ ಪೌಷ್ಟಿಕೌಷಧದಿಂದ ನಾಲ್ಕೈದು ದಿವಸಗಳ ಲ್ಲಿಯೇ ನರೇಂದ್ರನ ವ್ರಣವು ತುಂಬಿಕೊಂಡು ದುಂಡಗಾಯಿತು. ಅವನ ಸುಂದರವಾದ ಮುಖದಲ್ಲಿ ಅಧಿಕವಾದ ತೇಜವು ಉಕ್ಕಲಾರಂಭಿಸಿತು. ನರೇಂದ್ರನಾಥನಂಥ ಪರಾಕ್ರಮಶಾಲಿಗಳಿಲ್ಲವೆಂಬ ಬಿರುದಿನ ಕುರುಹನ್ನು ಅಮೀರಖಾನನು ತಾನು ಸಾಯುವ ಕಾಲದಲ್ಲಿ ಆದರದಿಂದ ಸಮರ್ಪಿಸಿರು ವನೋ ಎಂಬಂತೆ ಗಾಯದ ಕಲೆಯು ಮಾತ್ರ ಅವನೆದೆಯಲ್ಲಿ ವ್ಯಕ್ತವಾಗಿ ಕಾಣಿಸುತ್ತಿತ್ತು. ಅವನಿಗೆ ಅದೊಂದು ಅಲಂಕಾರವೇ ಆಗಿ ತೋರುತ್ತಿತ್ತು. 'समर विजयीहति निहतो ( शोभते )' ಎಂದು ಕವಿಗಳು ಯಾಕೆ ಕೊಂಡಾಡು ತ್ತಾರೆ !

ಇಂಥ ಸ್ಥಿತಿಯಲ್ಲಿ ನರೇಂದ್ರನು ಒಂದು ರಾತ್ರಿ ಭೋಜನ ಮಾಡಿ ಕೊಂಡು ತಾಂಬೂಲವನ್ನು ಸವಿದು ಉಲ್ಹಾಸದಿಂದ ಎಡೆಯಿಡುತ್ತ 'कृष्णमुरारी' ಎಂಬ ಪದವನ್ನು ಮೆಲ್ಲಗೆ ಹಾಡುತ್ತ, ಹೇಮಲತೆಯು ಅದೇ ಪದವನ್ನು ಗಂಗಾತೀರದ ಉಸುಬಿನಲ್ಲಿ ಹಾಡುತ್ತಿದ್ದದನ್ನು ಧ್ಯಾನಿಸುತ್ತಿ

ದ್ದನು. ಜುಲೇಕೆ ಬಂದು ನಿಂತು ಇವನ ಹಾಡು ಕೇಳುತ್ತಿರುವದು ಅವನ ಲಕ್ಷ್ಯಕ್ಕೆ ಬರಲೇ ಇಲ್ಲ. 'ಕಾಲ ನಹಿ ಮೈತೋಹಾರಿ ಕ್ರಾಣ' ಎಂದು ನರೇಂದ್ರನು 'ಸಮ್ಮಿ'ಗೆ ಬಂದ ಕೂಡಲೆ ಜುಲೇಕೆಯು ಚಪ್ಪಳೆ ಹೊಡೆದಳು. ಚಪ್ಪಳೆಯು ಹೊಡೆತವು ತನ್ನ ಎದೆಯ ಮೇಲೆ ಬಿದ್ದಂತಾಗಿ ನರೇಂದ್ರನು ಚಕಿತನಾಗಿ ನೋಡುತ್ತಾನೆ, ಜುಲೇಕೆಯೇ ತನ್ನೆದುರಿನಲ್ಲಿ ನಿಂತಿದ್ದಳು.

'ವಾಃ! ಜುಲೇಕಾ, ನಿನಗೆ ಗಾನದ ಜ್ಞಾನವಿದ್ದಂತೆ ಕಾಣುತ್ತದೆ?" ಎಂದು ನರೇಂದ್ರನು ನಗುತ್ತ ಕೇಳಿದನು.

"ನಾನು ಬಂದಿರುವೆನೆಂದು ಸೂಚಿಸುವದಕ್ಕಾಗಿ ನಾನು ಚಪ್ಪಳೆ ಹೊಡೆದರೆ ನನಗೆ ಗಾನದ ಜ್ಞಾನವಿದ್ದಂತಾಯಿತೇನು?"

"ಮಂದಿಯ ಗುಣಗಳನ್ನು ಸಂಗಡಲೇ ಕಂಡುಕೊಳ್ಳುವಷ್ಟು ಧೂರ್ತತನವು ನನ್ನಲ್ಲಿ ಇಲ್ಲವೆಂದು ನೀನು ತಿಳಿದಿರುವಿಯೇನು ಜುಲೇಕಾ?" ಎಂದು ನುಡಿದು ನರೇಂದ್ರನು ಜುಲೇಕೆಯ ಕಣ್ಣಿನೊಳಗಿಂದ ಅವಳ ಅಂತರಂಗವನ್ನೇ ನಿರೀಕ್ಷಿಸುವನೋ ಎಂಬಂತೆ ಅವಳನ್ನು ದಿಟ್ಟಿಸಿ ನೋಡಿದನು.

ಜುಲೇಕೆಯು ನರೇಂದ್ರನ ದೃಷ್ಟಿಗೆ ಈಡಾಗದೆ ಕೆಳಗೆ ನೋಡುತ್ತ "ಅಡಿವೆಯ ಫಲಗಳನ್ನೂ, ಬೇಯಿಸದೆ ಇದ್ದ ಮಾಂಸವನ್ನೂ ತಿನ್ನುತ್ತಿರುವ ಅಸಂಸ್ಕೃತರಾದ ಜನಾಂಗದಲ್ಲಿ ಹುಟ್ಟಿದವಳಾದ ನನಗೆ ಸುಶಿಕ್ಷಿತರ ಕಲಾಭಿಜ್ಞಾನದ ಗಂಧ ಕೂಡ ತಗಲಲಿಲ್ಲ. ಆದರೂ ಈ ರಾಜಾಧಿರಾಜರ ಅಂತಃಪುರದಲ್ಲಿಯ ವಿಲಾಸಿನಿಯರು ಹಾಡುತ್ತಿರುವದನ್ನು ಕೇಳಿ ಕೇಳಿ ಇಲ್ಲಿ 'ಲಯ' ವಿರುವದೆಂಬದನ್ನು ಊಹಿಸಬಲ್ಲೆನು."

"ಹಾಗಾದರೆ ಒಂದು ಹಾಡು ಹಾಡಬಾರದೆ?" ಎಂದು ನರೇಂದ್ರನು ಕೇಳಿದನು.

"ನನಗೇನು ಹಾಡಲಿಕ್ಕೆ ಬಂದೀತು ಸರದಾರ್!" ಎಂದು ಜುಲೇಕೆಯು ಪುಷ್ಟವಾಗುತ್ತ ಬಂದಿರುವ ನರೇಂದ್ರನ ದಿವ್ಯಾಂಗವನ್ನು ನೋಡುತ್ತ ನುಡಿದಳು.

"ಕೋಗಿಲೆಗಿಂತಲೂ ಮಧುರವಾದ ಕಂಠವಿದ್ದವಳಿಗೆ ಹಾಡಲಿಕ್ಕೆ ಬರುವದಿಲ್ಲವೇ ಜುಲೇಕೆ?"

"ನಾನು ಬೀಸುತ್ತಿರುವಾಗಾಗಲಿ, ಕುಟ್ಟುತ್ತಿರುವಾಗಾಗಲಿ ಹಾಡು

ತ್ತಿರುವದನ್ನು ಕೇಳಲಿಕ್ಕೆ ಬರುವಿರಂತೆ! ಸದ್ಯಕ್ಕೆ ನಾನೊಂದು ವಿನಂತಿಯನ್ನು ಮಾಡಿಕೊಳ್ಳಲಿಕ್ಕೆ ಬಂದಿದ್ದೇನೆ. ''

"ನಾನೇನು ಮಾಡತಕ್ಕದ್ದೆಂಬದನ್ನು ಅವಶ್ಯವಾಗಿ ಹೇಳು. ಸತ್ಕುಲಜನಿಗೂ, ವೀರನಿಗೂ ಉಚಿತವಾದ ಮಾತನ್ನೇ ಹೇಳುವಿಯೆಂದು ನಾನು ನಂಬಿದ್ದೇನೆ '' ಎಂದು ಅಂತಃಪುರದ ಅಂತರ್ವ್ಯಾಪಾರಗಳ ವಿಲಕ್ಷಣವಾದ ಕಥೆಗಳನ್ನು ಕೇಳಿದವನಾದ ನರೇಂದ್ರನು ತುಸು ಶಂಕಿತನಾಗಿ ಕೇಳಿದನು.

'' ನರೇಂದ್ರನಾಥರಾಯ್, ಈ ಜುಲೇಕೆಯು ಪವಿತ್ರವಾದ ಆಚರಣಗಳುಳ್ಳವನಾದ ಒಬ್ಬ ಸರದಾರನ ಮಗಳು. ನಾನು ನಿಮಗೆ ಅನುಚಿತವಾದ ಕೆಲಸವನ್ನು ಹೇಳುವೆನೆ? " ಎಂದು ಆ ಮಾನಿನಿಯು ಗಂಭೀರವಾದ ಮುದ್ರೆಯನ್ನು ತಾಳಿ ನುಡಿದಳು.

'' ಇನ್ನೇನು ಚಿಂತೆಯಿಲ್ಲ, ನಿನ್ನ ಕೆಲಸವನ್ನು ಹೇಳು. ಏನಿದ್ದರೂ ಕೇಳುತ್ತೇನೆ. ''

'' ಸೌಭಾಗ್ಯಶಾಲಿನಿಯಾದ ಓರ್ವ ಮಾನಿನಿಯ ಮರ್ಯಾದೆಯನ್ನು ಉದ್ದಾಮನಾದ ಒಬ್ಬ ರಾಜಪುತ್ರನು ಕಳೆಯಬಂದರೆ ನೀವು ಆ ಸ್ತ್ರೀಯ ಮಾನರಕ್ಷಣೆಯನ್ನು ಮಾಡಬಲ್ಲಿರಷ್ಟೆ? "

'' ಇದು ಸಕಲ ವೀರರ ಆದ್ಯಕರ್ತವ್ಯವು. ಆ ಸ್ತ್ರೀಯು ಎಷ್ಟು ದರಿದ್ರಳಾಗಿದ್ದರೂ ಅಡ್ಡಿ ಇಲ್ಲ; ಅವಳ ಮಾನಹರಣವನ್ನು ಮಾಡಲು ಯತ್ನಿಸುವ ದುರಾತ್ಮನು ಎಷ್ಟೇ ಬಲಾಢ್ಯನಾಗಿದ್ದರೂ ಚಿಂತೆಯಿಲ್ಲ. ನಾನು ಜೀವದ ಹಂಗುದೊರೆದು ಆ ದುರುಳನನ್ನು ದಂಡಿಸಿ ಸ್ತ್ರೀಯ ಮಾನವನ್ನು ಕಾಪಾಡುವೆನು '' ಎಂದು ನರೇಂದ್ರನು ಆವೇಶದಿಂದ ನುಡಿದನು.

'' ಇದು ನಿಶ್ಚಯವೇ? ''

'' ನಿಶ್ಚಯವೆಂದು ಕೇಳುತ್ತೀಯೇನು? ಅಂಥ ಪ್ರಸಂಗವಿದ್ದರೆ ನಡೆ ಈಗಿಂದೀಗಲೇ ಬರುವೆನು. "

ಜುಲೇಕೆಯ ಮನಸ್ಸಿಗೆ ಸಮಾಧಾನವೆನಿಸಿ ಅವಳು ಸಂತೋಷದಿಂದ ನಕ್ಕಳು.

'' ಯಾಕೆ ಜುಲೇಕಾ ಸುಮ್ಮನಾದಿ? "

'' ಇನ್ನೂ ಅಂಥ ಪ್ರಸಂಗವು ಬಂದಿಲ್ಲ. ಆಚೇನಾಡಿದು ಅಂಥ

ಪ್ರಸಂಗವು ಬರುವದು. ಈಗ ನಿಮ್ಮ ನೋವು ಹೇಗಿದೆ ? ”

“ ಆದರ ಚಿಂತೇ ಬಿಡು. ಈ ಹೊತ್ತಿನಿಂದಲೇ ನಾನು ಘನಘೋರವಾದ ಸಂಗ್ರಾಮದಲ್ಲಿ ಉತ್ಸಾಹದಿಂದ ಸೇರಬಲ್ಲೆನು. ”

“ ನೋಡಿರಿ ! ಜೀವದ ಮೇಲಿನ ಪ್ರಸಂಗವಿರುವದು ! ‘ ನಿನ್ನಂಥ ಅಲ್ಪಳ ಮಾತಿಗೆ ನಾನ್ಯಾಕೆ ನನ್ನ ಜೀವವನ್ನು ಸಂಕಟದಲ್ಲಿ ನೂಕಲಿ ’ ಎಂದು ಆಯತ್ತವಾದ ಹೊತ್ತಿನಲ್ಲಿ ಹಿಂಜರಿಯುವಿರಿ ” ಎಂದು ಜುಲೇಕೆಯು ಲೀಲೆಯಿಂದ ಕೇಳಿದಳು.

“ ಏನು ಮಾತಾಡುವಿ ಜುಲೇಕಾ ! ನಿನ್ನಂಥ ಚತುರೆಯು ವೀರರ ನುಡಿಯಲ್ಲಿ ಅವಿಶ್ವಾಸವನ್ನು ತಳೆಯುಬಹುದೇ ?” ಎಂದು ನರೇಂದ್ರನು ಕಿಂಚಿತ್ ಕ್ರುದ್ಧನಾಗಿ ಕೇಳಿದನು.

ಜುಲೇಕೆಯು ಮತ್ತೆ ವಿಲಾಸದಿಂದ ನಕ್ಕು “ಹಾಗಾದರೆ ನಿಮ್ಮ ಮಾತು ಗಟ್ಟಿಯೆಂದು ನನ್ನ ಕೈ ಮೇಲೆ ಕೈ ಹಾಕಿರಿ ” ಎಂದು ಕಮಲಪತ್ರದಂತೆ ಆರಕ್ತವಾಗಿರುವ ಹಸ್ತವನ್ನು ಚಾಚಿದಳು. ನರೇಂದ್ರನು ರಭಸದಿಂದ ಆ ಮನೋಹರವಾದ ಹಸ್ತವನ್ನು ತೆಗೆದುಕೊಂಡು ಮೂರು ನಾಲ್ಕು ಬಾರಿ ಆದನ್ನು ಚುಂಬಿಸಿ ಅನಂತರ ಆದೇ ಹಸ್ತದ ಮೇಲೆ ತನ್ನ ಕೈ ಇಟ್ಟು “ ಆಯಿತೆ ವಚನ ? ” ಎಂದು ಕೇಳಿದನು.

“ ಬಂಗಾಲದವರು ವಚನ ಕೊಡುವ ಪದ್ಧತಿ ಹೀಗೇ ಇರುವದೇನು ?” ಎಂದು ನುಡಿದು ಜುಲೇಕೆಯು ವಿಲಾಸದಿಂದ ನಗುತ್ತ ಓಡಿಹೋದಳು.

## ಇಪ್ಪತ್ತಮೂರನೆಯ ಅಧ್ಯಾಯ

### ವೀರನಿಗೆ ನಾರಿಯ ವೇಷವು !

ಮೂರನೆಯ ದಿವಸ ರಾತ್ರಿ, ಎರಡನೆಯ ಪ್ರಹರದ ಮಧ್ಯಕ್ಕೆ ಜುಲೇಕೆಯು ನರೇಂದ್ರನಾಥನ ಮಂದಿರದಲ್ಲಿ ಬಂದಳು. ಆಲ್ಲಿ ಅವನ ಸುಳಿದಾಟವಿಲ್ಲದ್ದು ಕಂಡು ಆ ವೀರನು ಮಲಗಿರುವನೆಂದು ತಿಳಿದು ಆ

ಮಂದಗಮನೆಯು ಕಾಲುಸಪ್ಪಳ ಮಾಡದೆ ಮೆಲ್ಲನೆ ಅವನ ಪರ್ಯಂಕದ ಬಳಿಗೆ ಬಂದಳು. ನರೇಂದ್ರನು ಸುಖವಾಗಿ ನಿದ್ದೆಗೈಯುತ್ತಿದ್ದನು. ಮೈಮೇಲೆ ಏನೂ ಹೊದ್ದುಕೊಳ್ಳದೆ ಮಲಗಿರುವ ಆ ಪುರುಷಸಿಂಹನ ಅವಯವಗಳ ಸೌಷ್ಟವವನ್ನು ಕಂಡು ಜುಲೇಕೆಗೆ ಮೋಹವೇ ಬಂದಂತಾಯಿತು. ಬೀಗ ತೆಗೆದಿಟ್ಟ ರತ್ನಭಂಡಾರದ ಬಳಿಯಲ್ಲಿ ಬಂದು ನಿಂತಿರುವ ಕಳ್ಳನಂತೆ ಜುಲೇಕೆಯು, ದೀಪಗಳ ಸೌಮ್ಯವಾದ ಪ್ರಕಾಶದಲ್ಲಿ ಬಹು ಮನೋಹರವಾಗಿ ಕಾಣುತ್ತಿರುವ ನರೇಂದ್ರನ ದಿವ್ಯವಾದ ಅಂಗಕಾಂತಿಯನ್ನೂ, ನಯನಾಭಿರಾಮವಾಗಿರುವ ಅವನ ಸುಂದರವಾದ ಮುಖವನ್ನೂ ವಿಕಾರವಶಳಾಗಿ ನೋಡುತ್ತ ನಿಶ್ಚಲಳಾಗಿ ನಿಂತುಕೊಂಡಳು.

"ಈ ಸಮಯದಲ್ಲಿ ಈ ಮೋಹನಾಂಗನ ಮುಖಕಪೋಲವನ್ನು ಒಂದೇ ಸಾರಿ ಮೆಲ್ಲನೆ ಚುಂಬಿಸಿದರೆ ಯಾರು ನೋಡಬೇಕಾಗಿದೆ ?" ಎಂದು ಯೋಚಿಸಿ ಆ ಪ್ರಮದೆಯು ಮೆಲ್ಲನೆ ಅವನ ಸಮೀಪಕ್ಕೆ ಬಂದು ಧೈರ್ಯ ಸಾಲದೆ ಸುಮ್ಮನೆ ನಿಂತಳು. "ವಿಶ್ವಾಸಘಾತಕಿಯಾದ ಮನಸ್ಸೇ, ನೀನೇ ಹಾಗೆ ನನ್ನನ್ನು ಈ ಪ್ರಾಣರಮಣನ ಸಮೀಪಕ್ಕೆ ನೂಕಿ ಮತ್ತೆ ಹಿಂದಕ್ಕೆ ಜಗ್ಗಿ ಹಿಡಿಯುವಿಯಾ ?" ಎಂದು ಆ ಭೀರುವು ತನ್ನ ಹೀನಸತ್ವವಾದ ಮನಸ್ಸನ್ನು ನಿಂದಿಸಿದಳು. "ಅಬಲೆಯರಾದ ನಮ್ಮಲ್ಲಿ ಧೈರ್ಯವೆಲ್ಲಿಂದ ಬರಬೇಕು!" ಎಂದು ಉದ್ಗಾರವನ್ನು ತೆಗೆದು ಮತ್ತವಳು ಆ ಸುಂದರಾಂಗನನ್ನು ನೋಡುತ್ತ ನಿಂತಳು. "ಸಾಕು! ಸಾಕು!! ಇನ್ನು ಹೆಚ್ಚಾಗಿ ಮನೋವಿಕಾರಗಳಿಗೆ ಆಸ್ಪದವನ್ನು ಕೊಡತಕ್ಕದ್ದಲ್ಲ. ನಾನು ಬಂದೆನೇಕೆ, ಮಾಡುತ್ತಿರುವೆನೇನು! ಇನ್ನು ಇವರನ್ನು ಎಚ್ಚರಗೊಳಿಸಬೇಕು" ಎಂದು ನುಡಿದು ಜುಲೇಕೆಯು ತಾನು ಆಗಲೇ ಕೊಯ್ದು ತಂದಿದ್ದ ಗುಲಾಬೀ ಹೂಗಳನ್ನು ನರೇಂದ್ರನ ವಿಶಾಲವಾದ ಎದೆಯ ಮೇಲೆ ಒಂದೊಂದರಂತೆ ಮೆಲ್ಲನೆ ಒಗೆಯಲಾರಂಭಿಸಿದಳು.

ನರೇಂದ್ರನಿಗೆ ಸುಖಮಯವಾದದ್ದೊಂದು ಕನಸು ಬಿದ್ದಿತ್ತು. ಯಮುನಾ ತೀರದ ಮೃದುತರವಾದ ಉಸುಬಿನಲ್ಲಿ ಕುಳಿತುಕೊಂಡು ಅವನು ಆ ನದಿಯ ಸುನೀಲವಾದ ಜಲಪ್ರವಾಹವನ್ನು ಔತ್ಸುಕ್ಯದಿಂದ ನಿರೀಕ್ಷಿಸುತ್ತಿದ್ದನು. ನದಿಯ ಎರಡೂ ದಂಡೆಗಳಲ್ಲಿ ನಿಬಿಡವಾಗಿ ಬೆಳೆದಿರುವ ಕುಂಜವನ

ಗಳು ನವಪಲ್ಲವಗಳನ್ನಾಂತು ಬಹು ಪ್ರೇಕ್ಷಣೀಯವಾಗಿ ಕಾಣುತ್ತಿದ್ದವು. ಇದೇ ನದಿಯ ತೀರದಲ್ಲಿ ಶ್ರೀಕೃಷ್ಣನು ಕವಿನುತವಾದ ತನ್ನ ಕೊಳಲನ್ನು ಬಹು ಮಂಜುಲವಾಗಿ ಊದಿ ಗೋಪೀಜನರ ಮನೋರಂಜನವನ್ನು ಮಾಡಿದನಲ್ಲೇ! ಪ್ರೇಮವನ್ನು ವಿಕಾಸಗೊಳಿಸುವ ಈ ರಮಣೀಯವಾದ ಕುಂಜವನದಲ್ಲಿ ಆ ಗೋಪೀಮನೋಹರನು ರಾಧೆಯನ್ನು ಒಂದು ಅರಗಳಿಗೆ ಮಾತ್ರ ಕಾಣದೆ ಉನ್ಮತ್ತನಾಗಿ ತಿರುಗಿದನಲ್ಲೇ! ಇಂಥ ಸ್ಥಳಕ್ಕೆ ಶಾಶ್ವತ ವಿರಹಿಯಾದ ನಾನು ಬರಬಹುದೆ? ಎಂದು ಸ್ವಪ್ನದಲ್ಲಿಯೇ ಹಲಬುತ್ತಿರುವಾಗ ಅವನಿಗೆ ತನ್ನ ಪ್ರಾಣಕಾಂತೆಯಾದ ಹೇಮಲತೆಯ ಧ್ವನಿ ಕೇಳಿದಂತಾಯಿತು. ಕಾತರನಾಗಿ ಅವನು ಹಿಂದಕ್ಕೆ ತಿರುಗಿ ನೋಡಿದಾಕ್ಷಣವೇ ಹೇಮಲತೆಯು ಲೀಲೆಯಿಂದ ಅವನೆದೆಗೆ ಹೂವಿನ ಚಂಡಿನಿಂದ ಹೊಡೆದಳು. ಆ ಚಂಡನ್ನು ಅವನು ಎತ್ತಿ ಕೊಂಡು ನಿಲ್ಲುವಷ್ಟರಲ್ಲಿಯೇ ಮತ್ತೊಂದು ಚಂಡು ಬಂದು ಎದೆಗೆ ತಾಕಿತು. 'ಇದೇನು ಚೇಷ್ಟೆ ಹೇಮಲತಾ, ನೀನೆಲ್ಲಿರುವಿ?' ಎಂದು ಅವನು ಕೇಳುಕೇಳು ವಷ್ಟರಲ್ಲಿಯೇ ಮೂರನೆಯ ಚಂಡು ಬಂದು ಬಡಿಯಿತೇ! ಹೀಗೆ ಅವನು ವಿಸ್ಮಯಾಕುಲನಾಗಿ ನಿಂತಿರುವಾಗ ಯಾರೋ ಗಹಗಹಿಸಿ ನಕ್ಕಂತಾಯಿತು. ಆ ನಗೆಯ ಧ್ವನಿಗೆ ನರೇಂದ್ರನು ಎಚ್ಚತ್ತು ನೋಡುತ್ತಾನೆ, ತನ್ನೆದುರಿನಲ್ಲಿ ಜುಲೇಕೆಯೇ ನಗುತ್ತ ನಿಂತಿದ್ದಳು.

ಜುಲೇಕೆಯು ನರೇಂದ್ರನ ಎದೆಯ ಮೇಲೆ ಗುಲಾಬೀ ಹೂವನ್ನು ಚಲ್ಲಿದ ಸರತಿಗೊಮ್ಮೆ ಅವನು ತನ್ನ ಎದೆಯ ಮೇಲೆ ಕೈಯಾಡಿಸಿಕೊಳ್ಳು ತ್ತಿರುವದನ್ನು ಕಂಡು ಅವಳಿಗೆ ನಗೆ ಬಂದು ಅವಳು ಮನಸೋಕ್ತವಾಗಿ ನಕ್ಕಳು. ಅವಳ ನಗೆಯ ಧ್ವನಿಗೆ ನರೇಂದ್ರನು ಎಚ್ಚತ್ತನು. ಯಮುನಾ ತೀರವೂ, ಹೇಮಲತೆಯೂ, ಹೂವಿನ ಚಂಡುಗಳೂ ಸ್ವಪ್ನದ ಸಂಗತಿಗಳೇ ಎಂದು ನರೇಂದ್ರನಿಗೆ ತಿಳಿದ ಬಳಿಕ ಅವನು ಎದ್ದು ಕುಳಿತು "ಜುಲೇಕಾ, ಏನು ಕುಚೇಷ್ಟೆಯಿದು?" ಎಂದು ವಿನೋದದಿಂದ ನಗುತ್ತ ಕೇಳಿದನು.

ಜುಲೇಕೆಯು ನಾಚಿಕೆಯಿಂದ ಕೆಳಗೆ ತಗ್ಗಿಸಿದ ಮುಖವನ್ನು ಮೇಲಕ್ಕೆ ಎತ್ತಲಿಲ್ಲ, ಮಾತಾಡಲಿಲ್ಲ.

"ಜುಲೇಕಾ, ನಾನು ವಿನೋದದಿಂದಲೇ ಹಾಗೆ ನುಡಿದೆನು; ಕೋಪ ದಿಂದಲ್ಲ. ಹಾಗೆ ನಾಚಬೇಡ. ಲಜ್ಜೆಯಿಂದ ಆರಕ್ತವಾಗಿರುವ ನಿನ್ನ

ಮುಖಶ್ರೀಯು ಸಾಧುಗಳನ್ನು ಕೂಡಾ ಮೋಹಿಸುವಂತೆ ಕಾಣುತ್ತದೆ. ಬೇಕಾದರೆ ಆ ಕನ್ನಡಿಯಲ್ಲಿ ನಿನ್ನ ಮನೋಹರವಾದ ಮುಖವನ್ನು ನೋಡಿ ಕೊಳ್ಳು. ಆ ಶೋಭೆಗೆ ನೀನು ಕೂಡಾ ಮರುಳಾಗುವಿ!" ಎಂದು ಮೋಹ ದಿಂದ ನುಡಿದ ನರೇಂದ್ರನಿಗೆ ತಾನು ಮರ್ಯಾದೆಯನ್ನು ದಾಟಿದೆನೋ ಇಲ್ಲವೋ ಎಂಬವರ ಅರಿವೇ ಇದ್ದಿಲ್ಲ.

ಜುಲೇಕೆಯು ಲಜ್ಜೆಯಿಂದಲೂ ಬೇರೊಂದು ವಿಕಾರದಿಂದಲೂ ಪೀಡಿತಳಾಗಿ ತನ್ನ ಮುಖವನ್ನು ಮೇಲಕ್ಕೆ ಎತ್ತಲರಿಯದೆ ನುಡಿದದ್ದು: "ನೀವು ನನ್ನಮುಂದೆ ಹಿಡಿದ ವಾಣೀಮುಕುರದಲ್ಲಿ ನನ್ನ ಮುಖದ ಪ್ರತಿ ಬಿಂಬವು ಚನ್ನಾಗಿ ಕಂಡಿತು. ಅನ್ಯರ ಮುಖವನ್ನು ಶ್ರಮಪಟ್ಟು ನಿರೀಕ್ಷಿಸು ವದಕ್ಕಿಂತಲೂ ರೂಪವಂತರು ತಮ್ಮ ಮುಖವನ್ನೇ ತಾವು ಕನ್ನಡಿಯಲ್ಲಿ ನೋಡಿಕೊಂಡು ಸಂತೋಷಪಡಬಾರದೆ?"

ನರೇಂದ್ರನು ಆತ್ಮಸಂಯಮನವನ್ನು ಮಾಡಿಕೊಂಡು "ಜುಲೇಕಾ, ನನ್ನನ್ನು ಒಳಿತಾಗಿ ಎಚ್ಚರಗೊಳಿಸಿದಿ! ನೀನು ಸಹಸಾ ಮನೋವಿಕಾರ ಗಳಿಗೆ ವಶಳಾಗುವವಳಲ್ಲವೆಂದು ನಂಬಿ ಒಂದೆರಡು ಮಾತು ಹೆಚ್ಚಿಗೆ ಆಡಿದರೂ ಭೀತಿಯಿಲ್ಲವೆಂದು ನಾನು ಹಾಗೆ ಮಾತಾಡಿದೆನು."

"ಮಹಾತ್ಮರೆ, ನಿಮ್ಮ ಮನಸ್ಸು ನಿರ್ಮಲವಾಗಿರುವದೆಂದು ತಿಂಗಳಾನು ತಿಂಗಳದ ಸಹವಾಸದಿಂದ ಕಂಡುಕೊಂಡಿರುವೆನು. ವಿನೋದದ ನಾಲ್ಕು ಮಾತುಗಳನ್ನಾಡಿದರೆ ಬಾಧಕವೇನು? ನಾನು ಕೂಡ ನಿಮ್ಮೊಡನೆ ನಾಲ್ಕು ಸಲಿಗೆಯ ಮಾತುಗಳನ್ನು ಆಡಿಯೇ ಆಡಿರುವೆನು. ಇನ್ನು ಮೇಲಾದರೂ ಸಲಿಗೆಯ ಮಾತುಗಳನ್ನಾಡಿ ಆಡಿ ನಿಮ್ಮನ್ನು ಪೀಡಿಸಿ ಬಿಡುವೆನು" ಎಂದು ಜುಲೇಕೆಯು ನುಡಿದು ಯಥೇಷ್ಟವಾಗಿ ನಕ್ಕಳು.

"ಆಗಲಿ. ನಿನ್ನಂಥ ಗುಣವಂತಿಯ ಸಹವಾಸದಿಂದ ನಾನೆಷ್ಟೋ ಮಾತುಗಳನ್ನು ಕಲಿತುಕೊಳ್ಳುವೆನು."

"ನರೇಂದ್ರನಾಥ, ಇನ್ನು ಈ ಸಂವಾದ ಸಾಕು. ನಾನು ಮೊನ್ನೆ ನಿಮಗೆ ಸೂಚಿಸಿದ ಕಾರ್ಯಕ್ಕಾಗಿ ಈಗ ಬಂದಿರುವೆನು. ಕೊಟ್ಟ ವಚನದ ಪ್ರಕಾರ ನೀವಿನ್ನು ಹೊರಡಲಿಕ್ಕೆ ಸಿದ್ಧರಾಗಿರಿ."

"ಓಹೋ, ಆ ಪ್ರಸಂಗವು ಬಂದೊದಗಿರುವದೇನು? ನಡೆ ಹೋಗೋಣ!

ನಾನು ಸಿದ್ಧನೇ ಇರುವೆನು."

"ಏಳಿರಿ ಹಾಗಾದರೆ! ನಿಮ್ಮ ಲಷ್ಕರೀ ಪೋಷಾಕು ಮಾಡಿಕೊಳ್ಳಿರಿ."

ನರೇಂದ್ರನು ಚಟ್ಟನೆ ಎದ್ದವನೇ ತನ್ನ ಲಷ್ಕರೀ ಪೋಷಾಕು ಮಾಡಿಕೊಂಡು ಖಡ್ಗಪಾಣಿಯಾಗಿ ನಿಂತುಕೊಂಡನು. ರೂಪಸಂಪನ್ನನಾದ ನರೇಂದ್ರನು ಬೆಲೆಯುಳ್ಳ ಲಷ್ಕರೀ ಪೋಷಾಕು ಮಾಡಿಕೊಂಡು ಆಢ್ಯತೆಯಿಂದ ನಿಂತಿರುವದನ್ನು ಕಂಡು ಪ್ರತ್ಯಕ್ಷ ಜಯಶ್ರೀಯು ತಾನೇ ಮೋಹಿತಳಾಗಿರುತ್ತಿರಲು ಪಾಪ, ಜುಲೇಕೆಯಂಥ ಮುಗ್ಧೆಯ ಪಾಡೇನು! ಅವಳು ಕ್ಷಣಹೊತ್ತು ನಿಂತು ನರೇಂದ್ರನ ಮುಖವನ್ನು ಮನದಣಿ ನೋಡಿಕೊಂಡ ಬಳಿಕ "ಈ ರೂಪಕ್ಕೆ ಸ್ತ್ರೀಜಾತಿಯ ದೃಷ್ಟಿ ತಗಲೀತು! ದೃಷ್ಟಿಯನ್ನು ಮುರಿಯುತ್ತೇನೆ. ತುಸು ತಡೆಯಿರಿ" ಎಂದು ಅವಳು ವಿನೋದದಿಂದ ನಗುತ್ತ ನುಡಿದು ನರೇಂದ್ರನ ಮೈಮೇಲೆ ಪರಾಣ ಸ್ತ್ರೀಯರ ಝುಗೆಯನ್ನು ಹಾಕಹೋದಳು.

"ಇದೇನು ಚೇಷ್ಟೆ ಜುಲೇಕಾ! ಹೆಂಗಸರ ಝುಗೆಯನ್ನು ನನ್ನ ಮೈಮೇಲೆ ಹಾಕಬರುವಿಯಾ?" ಎಂದು ನುಡಿದವನೇ ನರೇಂದ್ರನು ಆ ಝುಗೆಯನ್ನು ಬೀಸಾಡಿಬಿಟ್ಟನು.

"ಕೊಟ್ಟ ವಚನವನ್ನು ನೀವು ಮುರುಕೊಳ್ಳಬೇಕೆನ್ನುವಿರೇನು?"

"ದುರಾತ್ಮರನ್ನು ದಂಡಿಸುವದಕ್ಕಾಗಿ ಹೋಗುವವನಾದ ನಾನು ಹೆಂಗಸಿನ ಝುಗೆಯನ್ನು ಯಾಕೆ ತೆಗೆದುಕೊಳ್ಳಬೇಕು ಜುಲೇಕಾ?"

"ಕಾರ್ಯವು ಅಕಬರಬಾದಶಹರ ಅಂತಃಪುರದಲ್ಲಿ ಇದೆ. ಸ್ತ್ರೀವೇಷದಿಂದಲ್ಲದೆ ಮತ್ತೊಂದು ವೇಷದಿಂದ ಪರಕೀಯರು ಅಲ್ಲಿ ಸೇರಲಾರರು. ಈ ವೇಷವನ್ನು ತೊಟ್ಟಹೊರತು ಗತ್ಯಂತರವಿಲ್ಲ. ಮಾನಿನಿಯ ಮಾನರಕ್ಷಣವನ್ನು ಮಾಡಲೊಪ್ಪಿರುವಿರಿ; ಅದಕ್ಕಾಗಿ ಬೇಕಾದ್ದು ಮಾಡಬೇಕಲ್ಲವೆ?"

ಅವಜ್ಞೆಯು ನರೇಂದ್ರನ ಹೊಟ್ಟೆಯಲ್ಲಿ ತನ್ನಿಂದ ತಾನೇ ಕರಗಿ ಹೋಗಿ "ಆಗಲಿ, ಕೊಡು ಆ ಝುಗೆ!" ಎಂದು ಅವನಂದನು.

ಜುಲೇಕೆಯು ಝುಗೆಯನ್ನು ನರೇಂದ್ರನಿಗೆ ತೊಡಿಸಿ ಅವನ ಮುಖವನ್ನು ನೋಡಿ ವಿನೋದದಿಂದ ನಕ್ಕು "ಅಕ್ಕಾ, ಹಾಗೆ ನಾಚಿಕೊಳ್ಳಬೇಡ. ಇಲ್ಲಿ ಪುರುಷರಾರೂ ಇಲ್ಲ. ನಿಲ್ಲು ನಿನ್ನ ತುರುಬನ್ನು ಸಮಮಾಡುತ್ತೇನೆ"

ಎಂದು ಹೇಳಿ ಕೃತ್ರಿಮವಾದ ಜಡೆಯನ್ನು ನರೇಂದ್ರನ ತಲೆಗೆ ಕಟ್ಟಿದಳು.

" ಆಯಿತೇ ? " ಎಂದು ನರೇಂದ್ರನು ಜಡೆಯನ್ನು ಹಿಡುಕೊಂಡು ನೋಡಿ ಯಥೇಷ್ಟವಾಗಿ ನಕ್ಕನು.

" ತಡೆ, ನಿನ್ನಂಥ ನಗುತ್ತಿರುವ ಹೆಂಗಸನ್ನು ನೋಡಿ ಉದ್ದಾಮರಾದ ಪುರುಷರು ಸಂಗಡಲೇ ಹಿಡಿದು ಜಗ್ಗುವರು. ಈ ಮುಖಾವರಣವನ್ನು ಹಾಕಿಕೋ " ಎಂದು ಜುಲೇಕೆಯು ನರೇಂದ್ರನ ಮುಖಕ್ಕೆ ಬುರುಖೆಯನ್ನು ಹಾಕಿದಳು.

" ಇನ್ನೂ ಏನಾಯಿತು ? ಒಯ್ಯಾರೆಯರಾದ ನಾವು ಮಾಡಿಕೊಳ್ಳುವ ಸಿಂಗಾರಕ್ಕೆ ಕಡೆಯಿಲ್ಲ ಮೊದಲಿಲ್ಲ ! ಈ ಕಾಶ್ಮೀರದ ಶಾಲು ಹೊದ್ದುಕೋ; ಈ ಬುಲಾಖು ಇಟ್ಟುಕೋ ! ಹೊಸಬಳಾದ ನಿನಗೆ ಸದ್ಯಕ್ಕೆ ಇಷ್ಟೇ ಸಾಕು. ನಾಳೆ ನಿನ್ನ ಗಂಡನಾಗುವವನು ತನ್ನ ಮನಸ್ಸಿಗೆ ಬಂದಂತೆ ನಿನ್ನನ್ನು ಅಲಂಕರಿಸುವನು. ಬಾ ಹೋಗೋಣ. "

" ನಡೆ ಜುಲೇಕಾ, ಕಾರ್ಯವು ಮಹತ್ವದ್ದೆಂದು ಹೇಳುವಿ. ಹೀಗೆ ಚೇಷ್ಟೆಯಲ್ಲಿ ಹೊತ್ತುಕಳೆಯಬೇಡ " ಎಂದು ನರೇಂದ್ರನು ನುಡಿದನು.

" ಅಕ್ಕಾ, ನಿನ್ನ ಹೆಸರೇನು ? ಶರೀಫಾ ಅಲ್ಲೆ ? ಶರೀಫಾ, ಈಗ ನೀನೊಳ್ಳೆ ಸೊಬಗಿನ ಒಯ್ಯಾರೆಯಾಗೆ ಕಾಣುವಿ. ಅಂತಃಪುರದ ಬಳಿಯಲ್ಲಿ ಸುಳಿದಾಡುತ್ತಿರುವ ಉದ್ಧತನೋರ್ವನು ಬಲಾತ್ಕಾರದಿಂದ ನಿನ್ನ ಬಿಂಬಾಧರವನ್ನು ಚುಂಬಿಸಿದರೆ ನೀನೇನು ಮಾಡುವಿ ? ಒಳ್ಳೇ ಜೋಕೆ ಕಂಡಿಯಾ ? "

" ಜುಲೇಕೆ, ಹೆಚ್ಚಿಗೆ ಮಾತಾಡಿದರೆ ಈಗಲೇ ನಿನ್ನ ಬಿಂಬಾಧರದ ಗತಿಯೇನಾಗುವದೆಂಬದನ್ನು ಚನ್ನಾಗಿ ತಿಳಿದುಕೋ ! " ಎಂದು ನರೇಂದ್ರನು ಕೋಪದಲ್ಲಿ ತುಸು ಚೇಷ್ಟೆಯನ್ನು ಬೆರಿಸಿ ನುಡಿದನು.

" ಶರೀಫಾ, ನನ್ನ ಬಿಂಬಾಧರದ ಸ್ವಾದವು ಪುರುಷನಿಗೆ, ಹೆಂಗಸಾದ ವಳು ನೀನೇನು ಬಲ್ಲಿ ? ಕಬ್ಬಿಗೆ ಕಬ್ಬಿನ ರುಚಿಯೆ ? "

" ಹೆಂಗಸರ ಮಾತು ಕೇಳಿದವನೇ ನಾನು ಮೂರ್ಖನು. "

" ಅದಕ್ಕಾಗಿ ಶರೀಫಾ, ನೀನಿನ್ನು ಗಂಡಸರೊಡನೆ ಕೆಲೆದಾಡುವಿಯಂತೆ, ಬಾ. "

" ಸಾಕುಮಾಡಿನ್ನು ಜುಲೇಕಾ, ಹೋಗೋಣ, ಬಾ. "

“ ಅಕ್ಕಾ ಶರೀಫಾ, ನೀನು ನಿನ್ನ ಹೆಸರು ಶರೀಫಾ ಎಂಬದನ್ನು ಮಾರ್ಗದಲ್ಲಿ ಮರೆತುಬಿಡುವಿ ಎಂದು ತಿಳಿದು ನಿನ್ನೊಡನೆ ನಾನು ತುಸು ಪರಿಹಾಸಗೈದೆನು. ಮಾನವಂತಿಯಾದ ನಿನಗೆ ನನ್ನ ನಗೆಮಾತು ಸಹಿಸ ದಿದ್ದರೆ ನನ್ನನ್ನು ಕ್ಷಮಿಸು ಕಂಡೆಯಾ ? ”

ಹೀಗೆ ಮಾತಾಡುತ್ತ ಅವರೀರ್ವರು ಆ ಮಂದಿರದಿಂದ ಹೊರಬಿದ್ದು ಯಾರಿಗೂ ಗೊತ್ತಿಲ್ಲದಂಥ ಗುಪ್ತವಾದ ಮಾರ್ಗದಿಂದ ನಡೆದರು.

## ಇಪ್ಪತ್ತನಾಲ್ಕನೆಯ ಅಧ್ಯಾಯ

## ಅಂತಃಪುರದ ಕಾಂತಾಜನರು

ಜುಲೇಕೆಯು ಸ್ತ್ರೀವೇಷಧಾರಿಯಾದ ನರೇಂದ್ರನನ್ನು ಕರಕೊಂಡು ಒಂದು ಕತ್ತಲೆಯ ಸೋಪಾನವನ್ನಿಳಿಯುತ್ತ ನಡೆದಳು. ಅರಿಯದವನಾದ ನರೇಂದ್ರನು ಇಳಿಯುವಾಗ ಆಧಾರಕ್ಕಾಗಿ ಜುಲೇಕೆಯ ಕೈಯನ್ನು ಗಟ್ಟಿ ಯಾಗಿ ಹಿಡುಕೊಂಡು ನಡೆದಿದ್ದನು.

“ ಅಕ್ಕಾ ಶರಿಫಾ, ನನ್ನ ಕೈಯನ್ನು ಇಷ್ಟ್ಯಾಕೆ ಗಟ್ಟಿಯಾಗಿ ಹಿಡಿದಿರುವಿ ? ಭುಜಕ್ಕೆ ಭುಜವನ್ನು ಯಾಕೆ ತಗಲಿಸುವಿ ? ಬಹಳ ಅಂಜಿರುವಿಯೇನು ? ”

“ ನಾನು ಅಂಜುವೆನೇ ? ಕಾಬೂಲಿಸ್ತಾನದ ಸ್ತ್ರೀಯರು ಪುರುಷ ರೊಡನೆ ಭುಜಕ್ಕೆ ಭುಜ ಹಚ್ಚಿ ನಿಂತು ಶತ್ರುಗಳ ಕೂಡ ಯುದ್ಧಮಾಡುವ ರೆಂಬುದು ನಿನಗೆ ಗೊತ್ತಿಲ್ಲೇನು ? ”

“ ಛಃ ಶರೀಫಾ, ನೀನಾದರೂ ಅಂಥವಳೇ ಇರುವಿ. ಆದರೆ ಕಾಬೂಲಿ ಸ್ತಾನದಲ್ಲಿಯ ಮಾತು ಬೇರೆ, ಸುಸಂಸ್ಕೃತವಾದ ಹಿಂದುಸ್ಥಾನದಲ್ಲಿಯ ಮಾತು ಬೇರೆ. ಇಲ್ಲಿಯ ಸ್ತ್ರೀಯರು ಲಜ್ಜಾಯುತರೊ, ವಿಲಾಸಿನಿಯರೂ ಆಗಿರಬೇಕು. ”

“ ಸ್ಸೈ ! ಸ್ಸೈ !! ಜುಲೇಕಾ, ವಿಲಾಸಿನಿಯರಾದರೂ ಪುರುಷರೊಡನೆ

ಆಗಾಗ್ಗೆ ತುಸು ಉದ್ಧಾಮತನದಿಂದ ವರ್ತಿಸಿದ್ದನ್ನು ನಾನು ನೋಡಿದ್ದೇನೆ."

"ನೋಡುರುವಿಯಾದೀತು. ಶರೀಫಾ, ಈ ಕತ್ತಲೆಯ ಮಾರ್ಗದಲ್ಲಿ ನೀನು ಆಧಾರಕ್ಕಾಗಿ ಹೀಗೆ ನನ್ನ ಹೆಗಲ ಮೇಲೆ ಕೈಯಿಟ್ಟೆ; ಚಿಂತೆಯಿಲ್ಲ. ಪುರುಷನಾವನಾದರೂ ನನ್ನೊಡನೆ ಹೀಗೆ ಕುಚೇಷ್ಟೆ ಮಾಡಬಂದಿದ್ದರೆ ನನ್ನ ಟೊಂಕದಲ್ಲಿದ್ದ ಕಟಾರಿಯಿಂದ ಅವನಿಗೆ ಚನ್ನಾಗಿ ಬುದ್ಧಿಗಲಿಸುತ್ತಿದ್ದೆನು." ಹೀಗೆ ನುಡಿದ ಜುಲೇಕೆಯ ಮುಖವು ಕತ್ತಲೆಯಲ್ಲಿ ಕಾಣುತ್ತಿದ್ದಿಲ್ಲವಾದರೂ ನಿಷೇಧವ್ಯಂಜಕವಾದ ಆ ನುಡಿಯಿಂದ ಅವಳ ಮುಖದ ಗಾಂಭೀರ್ಯವು ನರೇಂದ್ರನ ಕಣ್ಣು ಮುಂದೆ ಕಟ್ಟಿದಂತಾಗಿತ್ತು.

ನರೇಂದ್ರನು ಜುಲೇಕೆಯ ಕೈಬಿಟ್ಟು "ನೀನು ಮುಂದಕ್ಕೆ ನಡೆ. ನಾನು ಮೆಲ್ಲನೆ ಹಿಂಬಾಲಿಸಿ ಬರುವೆನು" ಎಂದು ಸೋಪಾನಮಾರ್ಗದ ಗೋಡೆಯ ಮೇಲೆ ಕೈಯಾಡಿಸುತ್ತ ಇಳಿಯತೊಡಗಿದನು.

"ಆಕ್ಕಾ ಶರೀಫಾ, ಹಾಗೆ ಸಿಟ್ಟಾಗಬೇಡ. ಬಾ. ನಾನೇ ನಿನಗೆ ಕೈ ಕೊಡುತ್ತೇನೆ. ಬಿದ್ದಿಗಿದ್ದಿಯಾದರೆ ನಿನ್ನ ಮನೋರಮಣನು ನನ್ನ ಹೆಸರಿಲೆ ಕಲ್ಲು ಒಡೆದಾನು" ಎಂದು ಹೇಳಿ ಜುಲೇಕೆಯು ನರೇಂದ್ರನನ್ನು ಕೈಹಿಡಿದು ಕರಕೊಂಡು ನಡೆದಳು.

ಅವರೀರ್ವರು ಹಾಗೆ ಸುತ್ತಿ ಹೀಗೆ ಸುತ್ತಿ ಕಡೆಗೆ ಒಂದು ಬಾಗಿಲದ ಹತ್ತರ ಬಂದು ನಿಂತರು. ಜುಲೇಕೆಯು ಜಾಣ್ಮೆಯಿಂದ ಅಲ್ಲಿ ಗುಪ್ತವಾಗಿರುವ ಕೀಲು ತೆಗೆದು ಕದ ತೆರೆದ ಕೂಡಲೆ ಅಲ್ಲಿ ಒಂದು ಅತಿ ವಿಸ್ತಾರವಾದ ಬೈಲುಪಟಾಂಗಣವು ಕಂಡಿತು. ಪಟಾಂಗಣವೆಂದರೆ ಅದೇನು ಸಾಮಾನ್ಯ ವಾದ ಪಟಾಂಗಣವೇ? ಒಂದು ಕೂರಿಗೆ ನೆಲವಾದೀತು! ಪ್ರಚಂಡವಾದ ಆ ಚೌಕಿನ ಸುತ್ತಲೂ ಅತಿ ರಮಣೀಯವಾಗಿ ಕಟ್ಟಿದ ಎರಡಂತಸ್ತಿನ ಮಂದಿರ ಗಳು ಸಾಲುಸಾಲಾಗಿ ನಿಂತಿದ್ದವು. ಒಂದೊಂದು ಸಾಲಿನಲ್ಲಿದ್ದ ಎಲ್ಲ ಮಂದಿರ ಗಳಿಗೂ ಕೂಡಿ ಒಂದೇ ಭವ್ಯವಾದ ಬೈಲುಪಡಸಾಲೆ ಇದ್ದು ಆ ಪಡಸಾಲೆಗೆ ಬರುವಂತೆ ಎಲ್ಲ ಮಂದಿರಗಳಿಗೂ ಬಾಗಿಲಗಳಿದ್ದವು. ಪ್ರತಿಯೊಂದು ಬಾಗಿಲದ ಮುಂದೆ ಪ್ರಕಾಶಮಯವಾದ ಕಂದೀಲುಗಳನ್ನು ಇಳಿಬಿಟ್ಟಿರುವದರಿಂದ ಆ ಚೌಕಿನ ಸುತ್ತಲೂ ಕಾರ್ತಿಕ ಹಚ್ಚಿದಂತೆ ಆ ಜ್ಯೋತಿಸ್ಸಮುದಾಯವು ಬಹು ಚಮತ್ಕಾರವಾಗಿ ತೋರುತ್ತಿತ್ತು.

ಪಟಾಂಗಣವೆಂದರೆ ಅದೊಂದು ಮನೋಹರವಾದ ಹೂದೋಟವೇ ಇತ್ತು. ಆ ಹೂದೋಟದ ಮಧ್ಯದಲ್ಲಿ ಸಮಾಂತರದ ಮೇಲೆ ಪೂರ್ವಪಶ್ಚಿಮ ವಾಗಿಯೂ, ಉತ್ತರದಕ್ಷಿಣವಾಗಿಯೂ ಮಾರ್ಗಗಳಿದ್ದವು. ಮಾರ್ಗಗಳ ಎರಡೂ ಬದಿಗೂ ಬೇಲಿಗಳಂತೆ ಗುಲಾಬದ ಕಂಟಿಗಳಿದ್ದು ಹಸರುಮಯವಾದ ಆ ಕಂಟಿಗಳ ತುಂಬ ಪಾಟಲವರ್ಣದ ಹೂಮೊಗ್ಗೆಗಳು ಬಹು ಪ್ರೇಕ್ಷಣೀಯ ವಾಗಿ ಕಾಣುತ್ತಿದ್ದವು. ಮಧ್ಯದಲ್ಲಿ ಅನೇಕ ಜಾತಿಯ ಪುಷ್ಪವೃಕ್ಷಗಳೂ, ಅನೇಕ ವರ್ಣದ ಮಂಜರಿಗಳಿಂದ ಮೆರೆಯುತ್ತಿರುವ ಲತೆಗಳೂ ಆ ಪ್ರದೇಶದ ಲ್ಲೆಲ್ಲ ಸುಗಂಧವನ್ನು ಸೂಸುತ್ತಿದ್ದವು. ಆ ಪುಷ್ಪವನದ ನಾಲ್ಕೂಬದಿಗೂ ಸಾಲುಸಾಲಾಗಿದ್ದ ಚಂಪಕ, ಬಕುಲ, ಮದನಮಂಜರೀ, ಪಾರಿಜಾತ ಮುಂತಾದ ವೃಕ್ಷಗಳು ಎತ್ತರವಾಗಿ ಬೆಳೆದು ಮಂದಿರಗಳ ಮೇಲಂತಸ್ತಿನ ಬೈಲುಪಡಸಾಲೆಯಲ್ಲಿ ನಿಂತವರ ಕೈಗೆ ನಿಲುಕುವಂತೆ ಇದ್ದವು.

ಜುಲೇಕೆಯೂ, ಅವಳ ಕೃತ್ರಿಮ ಭಗಿನಿಯಾದ ಶರೀಫೆಯೂ ಸ್ವಚ್ಛ ವಾದ ಬೆಳದಿಂಗಳದಲ್ಲಿ ಕಾಣುವ ಆ ನಯನಾನಂದಕರವಾದ ವನಶೋಭೆ ಯನ್ನು ನೋಡುತ್ತ ನಡುವಿದ್ದ ಹೊಂಡಕ್ಕೆ ಬಂದರು. ಆ ಹೊಂಡವನ್ನು ಕಮಲದ ಆಕಾರವಾಗಿ ಸಂಗಮರವರದ ಕಲ್ಲಿನಿಂದ ಕಟ್ಟಿದ್ದರು. ಕರೀಕಲ್ಲಿನ ಕರಿರಾಜನು ತನ್ನ ಸೊಂಡೆಯನ್ನು ನೆಗಹಿಕೊಂಡು ನಡುನೀರಿನಲ್ಲಿ ನಿಂತಿದ್ದನು. ಆ ಆನೆಯ ಸೊಂಡೆಯೊಳಗಿಂದ ಬಿರುಸಿನ ಕುಳ್ಳಿಯಂತೆ ರಭಸದಿಂದ ಪುಟಿಯುತ್ತಿರುವ ಕಾರಂಜಿಯ ತುಷಾರಗಳು, ಸುತ್ತಲಿನ ದೀಪಮಾಲಿಕೆಗಳ ಘನವಾದ ಪ್ರಕಾಶದಲ್ಲಿ, ಹೊನ್ನೀಹುಳಗಳೇ ರಾಶಿರಾಶಿಯಾಗಿ ತೂರಿಬೀಳು ತ್ತವೋ ಎಂಬಂತೆ ಕಂಗೊಳಿಸಿದವು. ರಮಣೀಜನರ ವಿಹಾರಕ್ಕಾಗಿ ನಿರ್ಮಿಸಿದ ಆ ಮನೋಹರವಾದ ಕೊಳದಲ್ಲಿ ಯಮುನಾನದಿಯ ನಿರ್ಮಲವಾದ ನೀರು ತುಂಬಿದ್ದು ಸುಳಿಗಾಳಿಯಿಂದುಂಟಾದ ಚಿಕ್ಕ ಚಿಕ್ಕ ತೆರೆಗಳು ಟುಮುಟುಮು ಕ್ಕನೆ ದಂಡೆಗೆ ಬಂದು ಬಡಿಯುತ್ತಿರಲು ಆ ಕೊಳದ ಸಿರಿಯನ್ನು ಬಣ್ಣಿಸ ಬಹುದೆ ?

ಜುಲೇಕೆಯೂ, ಶರೀಫೆಯೂ ಆ ಹೊಂಡದ ದಂಡೆಯ ಮೇಲೆ ಕುಳಿತುಕೊಂಡು ಅಂತಃಪುರದ ವಿಚಿತ್ರವಾದ ಬಾಹ್ಯಶೋಭೆಯನ್ನು ನೋಡು ತ್ತಿದ್ದರು. ಅಂತರಿಕ್ಷದಲ್ಲಿ ನಿಂತಿರುವ ಪುಷ್ಪಕವಿಮಾನವು ಅನೇಕ ರತ್ನಗಳ

ಪ್ರಕಾಶದಿಂದ ದೈದೀಪ್ಯಮಾನವಾಗಿ ತೋರುತ್ತಿರುವಂತೆ, ದೀಪಸಮುಚ್ಚಯ ದಿಂದ ಝುಗಝುಗಿಸುವ ಆ ಮಂದಿರಗಳ ಮೇಲಂತಸ್ತುಗಳು ಒಂದಾಗಿ ಬಹು ಸೌಭಾಗ್ಯಮಯವಾಗಿ ತೋರಿದವು. ಆ ಮಂದಿರಗಳಲ್ಲಿ ಸುಳಿದಾಡಿ ಹೋಗುವ ನಿರುಪಮ ಸುಂದರಿಯರಾದ ಬಾದಶಹನ ಭೋಗಿನಿಯರು ತಾರಾಪಥದಲ್ಲಿ ಸಂಚರಿಸುವ ದೇವಾಂಗನೆಯರಂತೆ ಶೋಭಿಸಿದರು. ರಾತ್ರಿಯ ಶಾಂತವಾದ ಸಮಯದಲ್ಲಿ ಅಂತಃಪುರದ ನಾರಿಯರು ಬೇರೆ ಬೇರೆ ಭಾಗದಲ್ಲಿ ಬಹು ಮಂಜುಲವಾಗಿ ಹಾಡುತ್ತಿರುವ ಸ್ವರಸಂಯೋಗವೂ, ಸಾರಂಗ, ಮೃದಂಗಗಳ ಸ್ನಿಗ್ಧಗಂಭೀರವಾದ ಘೋಷವೂ ದೂರದಲ್ಲಿ ಕುಳಿತ ನರೇಂದ್ರ ನನ್ನು ( ಶರೀಫಾ ) ಬಹುಪರಿಯಾಗಿ ಮೋಹಗೊಳಿಸಿದವು.

"ಶರೀಫಾ, ನಡೆ ಇನ್ನು. ಹೊರಗಿನ ಶೋಭೆಯನ್ನೇ ನೋಡಿ ನೀನು ಹೀಗೆ ಬೆರಗಾಗಿ ಕುಳಿತವಳು ಈ ಅಂತಃಪುರದ ಒಳಗಿನ ವೈಭವವನ್ನು ನೋಡಿ ಏನೆನ್ನುವಿಯೋ !" ಎಂದು ಜುಲೇಕೆಯು ಮಾತನಾಡಿ ನರೇಂದ್ರನನ್ನು ಕರಕೊಂಡು ಅಂತಃಪುರದ ಪ್ರಶಸ್ತವಾದ ಆಲಿಂದದಲ್ಲಿ ಬಂದಳು. ಇವರು ಬಂದದ್ದು ಕಂಡಕೂಡಲೇ ಸಿದ್ದೀ ಜಾತಿಯ ಖೋಜೆ ಯರವನೊಬ್ಬನು ಎದ್ದು ನಿಂತು ತನ್ನ ಖಡ್ಗವನ್ನು ಹಿರಿದು "ಯಾರು ನೀವು ?" ಎಂದು ಬೆದರಿಸಿ ಕೇಳಿದನು. ಜುಲೇಕೆಯು ತನ್ನ ಬೆರಳಿನಲ್ಲಿದ್ದ ಉಂಗುರವನ್ನು ತೆಗೆದು ತೋರಿಸಿದ ಕೂಡಲೆ ಆ ಮಹಿಷಾಸುರನು ಆ ಉಂಗು ರಕ್ಕೆ ಬಗ್ಗಿ ಪ್ರಣಾಮ ಮಾಡಿ ಅವರೀರ್ವರನ್ನೂ ಒಳಕ್ಕೆ ಬಿಟ್ಟನು. ದೀಪ ಗಳಿಂದ ಸುಪ್ರಕಾಶಿತವಾದ ಭವ್ಯವಾದದ್ದೊಂದು ಸೋಪಾನಮಾರ್ಗದಿಂದ ಅವರು ಮೇಲಕ್ಕೆ ನಡೆದರು. ಅಲ್ಲಿ ಸಿದ್ದೀ ಜನರ ನಾಯಕನಾದ ಮುಸ್ರೋ ರನು ತಿವಾಸಿಗೆಯ ಮೇಲೆ ಯಥಾಸುಖವಾಗಿ ಕುಳಿತುಕೊಂಡು ಗುಡುಗುಡಿ ಯನ್ನು ಸೇದುತ್ತಿದ್ದನು. ಮುಸ್ರೋರನ ಮೈಯೊಳಗಿದ್ದ ಜರದ ಬುಟಿಯ ಅಂಗಿಯೂ, ಥಕಥಕನೆ ಹೊಳೆಯುವ ಅವನ ರೇಶಿಮೆಯ ಚಲ್ಲಣವೂ, ತಲೆಯ ಮೇಲಿನ ಜರದ ಟೊಪ್ಪಿಗೆಯೂ, ಅವನ ಕಾಡಿಗೆಗಪ್ಪಿನ ಮೈಯಲ್ಲಿ ಎದ್ದು ಕಾಣಿಸುತ್ತಿದ್ದವು. ಇವನೊಬ್ಬ ರಾಕ್ಷಸೇಂದ್ರನ ಹೆಂಡತಿಯ ತಮ್ಮ ನಂತೆ ವಿರಾಜಿಸುತ್ತಿದ್ದನೆಂದರೆ ಒಪ್ಪುವದು. ಮುಸ್ರೋರನಿಗೂ ಜುಲೇ ಕೆಯು ತನ್ನ ಉಂಗುರವನ್ನು ತೋರಿಸಿ ಮುಂದೆ ಸಾಗಿದ ಬಳಿಕ ಅವನು

" ಜುಲೇಕಾ! " ಎಂದು ಗೊಗ್ಗರಧ್ವನಿಯಿಂದ ಕೂಗಿ ಕರೆದು " ಪ್ಯಾರೀ, ಒಂದು ಸಕ್ಕರೆಯ ಸವಿಮುದ್ದು ಕೊಟ್ಟು ಹೋಗಬಾರದೇ? " ಎಂದು ಕೇಳಿದನು. " ಮೂಢಾ! ಇನ್ನೊಮ್ಮೆ ಹೀಗೆ ಮಾತಾಡಿದರೆ ನಿನ್ನ ತಲೆಯನ್ನೇ ಕಡಿಸಿ ಹಾಕುವೆನು ಗೊತ್ತಿರಲಿ! " ಎಂದು ಜುಲೇಕೆಯು ಕ್ರೋಧಾವೇಶದಿಂದ ಆವನನ್ನು ಧಿಕ್ಕರಿಸಿದಳು. " ಹೋಗು. ಹೋಗು. ಹೊಸದಾಗಿ ಬಂದಿರುವಿಯೆಂದು ನೀನಿಷ್ಟು ಹಾರಾಡುವಿ. ನನ್ನಂಥ ನಾಯಕನು ಈಗ ಎಂಟು ದಿವಸ ನಿನ್ನನ್ನು ಪ್ರಾರ್ಥಿಸುತ್ತಿದ್ದರೂ ಒಳಗಾಗಲೊಲ್ಲಿ. ಒಳ್ಳೇದು, ನನಗದೆ ನಿನಗದೆ! " ಎಂದು ಆ ಕಾಳಪುರುಷನು ತನ್ನ ಉಂಗುರಗೂದಲಿನ ಮಿಸೆಗೆ ಹುರಿಯಿಕ್ಕಿದನು.

ಜುಲೇಕೆ, ಶರೀಫೆಯರು ಮುಂದಕ್ಕೆ ಸಾಗಿ ವೈಭವದಿಂದ ಯುಕ್ತವಾದ ದಿವಾನಖಾನೆಗಳನ್ನೂ, ವಿಶಾಲವಾದ ಚಂದ್ರಶಾಲೆಗಳನ್ನೂ, ಕ್ರೀಡಾಭವನಗಳನ್ನೂ ಚಿತ್ರಶಾಲೆಗಳನ್ನೂ ನೋಡುತ್ತ ನಡೆದಿದ್ದರು. ಎಲ್ಲಿ ಹೋದಲ್ಲಿ ಗಾಯನದ ಮಧುರವಾದ ಧ್ವನಿಯೂ, ಕಾಮಿನಿಯರು ಸ್ವಚ್ಛಂದವಾಗಿ ನಗುತ್ತಿರುವ ಅಟ್ಟಹಾಸಗಳೂ, ನೃತ್ಯಗೈಯುವವರ ನೂಪುರಗಳ ಮಂಜುರವಗಳೂ ಬಹು ಇಂಪಾಗಿ ಕೇಳಬರುತ್ತಿದ್ದವು. ತಮಸ್ಸಿಗೆ ಅಡಗಲಿಕ್ಕೆ ಕೂಡ ಸ್ಥಳವನ್ನು ಕೊಡದಲೆ ಪ್ರಕಾಶಿಸುವ ದೀಪಪ್ರಕಾಶದಲ್ಲಿ ಸರ್ವಾಲಂಕಾರಗಳಿಂದ ಭೂಷಿತೆಯರಾದ ಯುವತಿಯರು ಸೊಬಗಿನ ಪೋಷಾಕು ಮಾಡಿಕೊಂಡು ಮಂದಹಾಸಗೈಯುತ್ತ ಸುಳಿದಾಡುವದನ್ನು ನೋಡಿದರೆ ಚಂದ್ರಲೋಕದಲ್ಲಿ ವಿಹರಿಸುತ್ತಿರುವ ಅಪ್ಸರೆಯರಂತೆ ತೋರಿದರು.

ತನ್ನ ರಮಣನು ಈಗ ಬರುವನೆಂದು ಒಬ್ಬ ಕಾಮಿನಿಯು ಸೊಬಗಿನ ಉಡಿಗೆ ತೊಡಿಗೆಗಳನ್ನು ಮಾಡಿಕೊಂಡು ಇಂದು ತನ್ನ ಸುಂದರವಾದ ಮುಖವು ಹೇಗೆ ಕಾಣುತ್ತದೆಂದು ನಿಲವುಗನ್ನಡಿಯ ಮುಂದೆ ನಿಂತಿದ್ದಳು. " ನನ್ನನ್ನು ಬಿಟ್ಟು ಆ ಸೆಟವಿಯ ಮನೆ ಸೇರಿದನೆ! " ಎಂದು ಮತ್ತೋರ್ವ ಮಾನಿನಿಯು ದುಃಖದಿಂದ ತನ್ನ ಕೈ ಒಡ್ಡ ಮುರಿಯುತ್ತ ಸಿಟ್ಟಾಗಿ ನಿಂತಿದ್ದಳು. 'ಅರ್ಧ ರಾತ್ರಿಯಾಗಿ ಹೋಯಿತು, ಇನ್ನೇತರಾಶೆ!' ಎಂದು ಒಬ್ಬ ಅಬಲೆಯು ತನ್ನ ಅಲಂಕಾರಗಳನ್ನೆಲ್ಲ ಈಡಾಡಿ ಪರ್ಯಂಕದಲ್ಲಿ ಬಿದ್ದುಕೊಂಡಿದ್ದಳು. 'ಆ ರಮಣಿಯಲ್ಲಿ ಸುಖಸುರಿದು ಬಂದು ಒಣ ಉಪಚಾರಕ್ಕಾಗಿ ಬಾದಶಹನು

ಇಲ್ಲಿ ಬಂದರೆ ನನ್ನ ತಲೆ ನೋಯುತ್ತದೆಂದು ಹೇಳು ' ಎಂದು ಓರ್ವ ಚಂಡಿಯು ತನ್ನ ದಾಸಿಗೆ ಆಜ್ಞಾಪಿಸಿ ಅಡ್ಡತಿಡ್ಡಾಗಿ ತನ್ನ ತಲೆ ಕಟ್ಟಿಕೊಂಡು ಕುಳಿತಿದ್ದಳು. " ಹೀಗೆ ಅನೇಕ ಜನ ಕಾಮಿನಿಯರು ಅನೇಕ ಪರಿಯಾಗಿ ವ್ಯಸನಾಕುಲರಾಗಿರಲು ನಿಜವಾದ ಸುಖವನ್ನು ಅನುಭವಿಸುವವಳು ಯಾವಳೋ ಕಾಣೆನು " ಎಂದು ನರೇಂದ್ರನು ಆ ಅಂತಃಪುರದ ನಾರಿಯರ ಶೋಚನೀಯವಾದ ಸ್ಥಿತಿಯನ್ನು ಕಂಡು ನುಡಿದನು.

" ಹಾಗನ್ನಬೇಡ ಶರೀಫಾ, ಬಾದಶಹರ ಪ್ರೀತ್ಯಾಸ್ಪದಳೂ, ವಿಭವ ಶಾಲಿನಿಯೂ, ಮುಂದಾಗುವ ಬಾದಶಹನ ಹಡೆದ ತಾಯಿಯೂ ಆದ ಜೋಧಬಾಯಿಯು ನಿಜವಾದ ಸುಖಿಯಾಗದಿದ್ದರೆ ಈ ಭೂಮಂಡಲದಲ್ಲಿ ಮತ್ತಿನ್ನಾರು ? ಬಾ ಆವಳ ಮಂದಿರವನ್ನು ತೋರಿಸುತ್ತೇನೆ " ಎಂದು ನುಡಿದು ಜುಲೇಕೆಯು ನರೇಂದ್ರನಾಥನನ್ನು ಕರಕೊಂಡು ನಡೆದಳು.

ವೈಭವದಿಂದ ಮೆರೆಯುತ್ತಿರುವ ಜೋಧಬಾಯಿಯ ದಿವಾನಖಾನೆಯು ಅತಿ ವಿಸ್ತಾರವಾದದ್ದಾಗಿತ್ತು. ಬಂಗಾರದ ಸರಪಣಿಗಳಿಂದ ಇಳಿಬಿಟ್ಟ ಮೂರು ದೊಡ್ಡ ಝುಂಬರಗಳಲ್ಲಿ ಅನೇಕವಾದ ಮೇಣಬತ್ತಿಗಳು ನೋಡಿ ದವರ ಕಣ್ಣು ಕುಕ್ಕುವಂತೆ ಝಗಝಗನೆ ಉರಿಯುತ್ತಿದ್ದವು. ನಾಲ್ಕೂ ಗೋಡೆಗಳಲ್ಲಿದ್ದ ಭವ್ಯವಾದ ನಿಲವುಗನ್ನಡಿಗಳಲ್ಲಿ ಝುಂಬರಗಳಲ್ಲಿರುವ ದೀಪಮಾಲಿಕೆಗಳು ಪ್ರತಿಬಿಂಬಿಸಿದ್ದರಿಂದ ಅಲ್ಲಿದ್ದ ಪದಾರ್ಥಗಳ ನೆಳಲಿಗೆ ಕೂಡಾ ಆಸ್ಪದವಿದ್ದಿಲ್ಲ. ಮೇಲೆ ನೋಡಲು ಬಂಗಾರದ ತಗಡಿನ ಛತ್ತು; ಆ ಛತ್ತಿನ ಸುತ್ತಲೂ ಗೋಡೆಗುಂಟ ಮುತ್ತಿನ ಜಾಲರಿಗಳನ್ನು ಬಹು ಪರಿಷ್ಕಾರವಾಗಿ ಕಟ್ಟಿದ್ದರು. ಮುತ್ತಿನಂತೆ ನುಣುಪಾಗಿ ಲಕಲಕ ಹೊಳೆ ಯುವ ಗೋಡೆಗಳ ಮೇಲೆ ಚಿತ್ರಕಲಾನಿಪುಣರು ಅನೇಕ ಪ್ರಕಾರದ ಗಿಡಬಳ್ಳಿಗಳನ್ನೂ, ಪಕ್ಷಿಗಳನ್ನೂ ತೆಗೆದಿದ್ದರು. ನಿಃಸಂಶಯವಾಗಿ ಕ್ರಿಯಾಪ್ರಸಕ್ತಿಯಲ್ಲಿ ಈ ನರನಾರಿಯರು ಇರುವರೋ ಎಂಬ ಭಾಸ ವಾಗುವಂತೆ ಅನೇಕ ದೇಶದ ರಾಜರಾಜ್ಞಿಯರ ಚಿತ್ರಗಳನ್ನು ಗೋಡೆಗಳ ಮೇಲೆ ತೆಗೆದ ಚಿತ್ರಕಲಾನಿಪುಣರ ಕೌಶಲ್ಯವನ್ನು ಎಷ್ಟು ಬಣ್ಣಿಸಿದರೂ ಸಾಲದು. ನೆಲಕ್ಕೆ ಹಾಸಿದ ಕಿನ್‌ಖಾಬಿನ ಮೇಲೆ ಕಾಲಿಟ್ಟರೆ ಯಾರು ಏನೆನ್ನುವರೋ ಎಂದು ಘನವಂತರ ಸ್ತ್ರೀಯರು ಕೂಡಾ ಅಲ್ಲಿಗೆ ಬಂದಾಗ

ಶಂಕಿಸುತ್ತಿದ್ದರು. ರತ್ನಖಚಿತವಾದ ಸೇಜಸಿಂಹಾಸನಗಳೂ, ಜರದ ಬುಟೆಯುಳ್ಳ ರೇಶಿಮೆಯ ಗಾದೆ ದಿಂಬುಗಳೂ ಒಳ್ಳೇ ಪರಿಷ್ಕಾರವಾಗಿ ಅಲ್ಲಿ ಇಡಲ್ಪಟ್ಟಿದ್ದವು.

ಇಂಥ ವೈಭವದ ಮಂದಿರದಲ್ಲಿ ಉನ್ನತವಾದ ಪೀಠದಲ್ಲಿ ಹಾಕಿದ ತೂಲಿಕಾಮಯವಾದ ಶಿವಾಸಿಗೆಯ ಮೇಲೆ ಮಹಾರಾಜ್ಞಿಯಾದ ಜೋಧ ಬಾಯಿಯು ಒಳ್ಳೇ ಗೌರವಯುತಳಾಗಿ ಕುಳಿತುಕೊಂಡಿದ್ದಳು. ಈ ಬಾದಶಾಹಿಣಿಯು ಸುಮಾರು ನಲವತ್ತೈದು ನಲವತ್ತಾರು ವರ್ಷದವಳಾಗಿ ದ್ದರೂ ಅವಳ ಸೌಂದರ್ಯವು ಎಳ್ಳಷ್ಟಾದರೂ ಕೊಂಕಿದ್ದಿಲ್ಲ. ಪೂರ್ವ ವಯಸ್ಸಿನವಳಂತೆ ಅವಳ ದೇಹವು ಮಾಂಸಲವಾಗಿಯೂ, ತೇಜಃಪುಂಜ ವಾಗಿಯೂ ಕಾಣುತ್ತಿತ್ತು. ಅಲ್ಪಾಭರಣಗಳಿಂದ ಅಲಂಕೃತಳಾದ ಅಕಬರನ ಅರ್ಧಾಂಗಿಯು ಅಧಿಕಾರದ ಅಟ್ಟಹಾಸದಿಂದ ಅಧಿಕವಾದ ತೇಜಸ್ಸುಳ್ಳವ ಳಾಗಿ ಕಂಡಳು. ತಿಳುವಾದ ಜರದ ಅಂಚಿನ ಪಾಟಲವರ್ಣದ ರೇಸಿಮೆಯ ಸೀರೆಯನ್ನೂ, ಅಂಥದೇ ರವಕೆಯನ್ನೂ ಜೋಧಬಾಯಿಯು ರಜಪುತಾನಿಯು ಪದ್ಧತಿಯಂತೆ ಉಟ್ಟುಕೊಂಡು ಕುಳಿತಿರಲು ಅವಳಿಗೆ ವಿಲಾಸಿನಿಯರ ಆಡಂಬ ರದ ಸೊಬಗು ಸೇರುತ್ತಿದ್ದಿಲ್ಲವೆಂಬುದು ಹೇಳಲವಶ್ಯವಿಲ್ಲ. ಸತ್ಕುಲಜರಾದ ಪರಿಚಾರಿಕೆಯರೊಡನೆ ತನ್ನ ಘನತೆಗೆ ಉಚಿತವಾದ ರೀತಿಯಿಂದ ಮಾತಾ ಡುತ್ತ ಆ ಬಾದಶಾಹಿಣಿಯು ಕುಳಿತಿದ್ದಳು. ಗಾಯನದಲ್ಲಿ ಕುಶಲೆಯರಾದ ಕೆಲಜನ ಸ್ತ್ರೀಯರು ದೂರದಲ್ಲಿ ಕುಳಿತು ಬಹು ಮಂಜುಲವಾಗಿ ಹಾಡಿ ಬಾರಿಸುತ್ತಿದ್ದರು. ಉಳಿದ ದಾಸಿಯರು ದೂರದಲ್ಲಿ ಕುಳಿತು ಆ ಮಹಾ ರಾಜ್ಞಿಯ ಆಜ್ಞೆ ಪಾಲಿಸಲು ಸಿದ್ಧರಾಗಿದ್ದರು.

ಜುಲೇಕೆಯು ಜೋಧಬಾಯಿಯ ಮಂದಿರದಲ್ಲಿ ಬಂದು ದೂರದಲ್ಲಿಯೇ ನಿಂತು ಆ ಬಾದಶಾಹಿಣಿಗೆ ನೆಲಮುಟ್ಟಿ ಪ್ರಣಾಮ ಮಾಡಿ ನಿಂತುಕೊಂಡಳು. ಶರೀಫೆಯೂ ಹಾಗೆಯೇ ಮಾಡಿ ಅಂಜಿಕೊಂಡು ನಿಂತಿದ್ದಳು. ಜೋಧ ಬಾಯಿಯು ಕೊಂಚ ತಲೆಬಾಗಿಸಿದಂತೆ ಮಾಡಿ ಜುಲೇಕಾ ಶರೀಫೆಯರ ಪ್ರಣಾಮಗಳನ್ನು ಸ್ವೀಕರಿಸಿ "ಜುಲೇಕಾ, ಇವಳೇ ನಿನ್ನ ಅಕ್ಕನೇನು?" ಎಂದು ಕೇಳಿದಳು.

"ಸಕಲ ಜನರ ತಾಯಿಯೇ, ಇವಳೇ ನನ್ನ ಅಕ್ಕನು, ಈ ಸಿಂಹಾಸನದ

ಗರ್ಭದಾಸಿಯು. ಇವಳಿಗೆ ಇನ್ನೂ ಈ ಸಾಮ್ರಾಜ್ಯದಲ್ಲಿ ಪ್ರಚಲಿತವಾದ ಭಾಷೆ ಯಾವುದೂ ಬರುವದಿಲ್ಲ. ಅಂತಃಪುರದ ನಡೆನುಡಿಗಳನ್ನು ನಾನು ಇವಳಿಗೆ ಕಲಿಸುತ್ತಲೇ ಇರುವೆನು " ಎಂದು ನುಡಿದು ಜುಲೇಕೆಯು ಮತ್ತೆ ಮೂರಾವರ್ತಿ ನೆಲಮುಟ್ಟಿ ಪ್ರಣಾಮ ಮಾಡಿದಳು.

" ಒಳ್ಳೇದು " ಎಂದು ಹೇಳಿ ಬಾದಶಾಹಿಣಿಯು ಮತ್ತೆ ತನ್ನ ಪರಿಚಾರಿಕೆಯರೊಡನೆ ಮಾತಾಡತೊಡಗಿದಳು.

ತುಸು ಹೊತ್ತಿನ ಮೇಲೆ ಓರ್ವ ವೇತ್ರವತಿಯು ಜೋಧಬಾಯಿಯ ಸನ್ನಿಧಾನಕ್ಕೆ ಬಂದು ರೀತಿಯಂತೆ ಪ್ರಣಾಮಮಾಡಿ " ದೇವರ ಕೃಪೆಗೆ ಪಾತ್ರರಾದ ಸಲೀಮ ಸುಲ್ತಾನರವರು ಮಹಾರಾಣಿಯವರ ದರ್ಶನಾಪೇಕ್ಷೆಯಿಂದ ಬಂದು ಈ ಪಾದಪೀಠದ ಅಜ್ಞೆಯನ್ನು ಪ್ರತಿಪಾಲಿಸುತ್ತ ಹೊರಗೆ ನಿಂತಿರುವರು " ಎಂದು ಬಿಸಗೊಂಡಳು.

" ಅಮೀನಾ, ಸಲೀಮ ಸುಲ್ತಾನರನ್ನು ಒಳಗೆ ಕರಕೊಂಡು ಬಾ " ಎಂದು ಆಜ್ಞಾಪಿಸಿ ಜೋಧಬಾಯಿಯು ತನ್ನ ಪರಿಚಾರಕಿಯರಿಗೆ ದೂರದಲ್ಲಿ ಕುಳ್ಳಿರಹೇಳಿದಳು.

ಸಲೀಮನು ಬಂದವನೇ ತನ್ನ ಮಾತೆಗೆ ಪ್ರಣಾಮಮಾಡಿ ತನಗೋಸ್ಕರ ವಾಗಿ ಸಿದ್ಧಮಾಡಿಟ್ಟ ಆಸನದಲ್ಲಿ ಕುಳಿತುಕೊಂಡನು. ಜೋಧಬಾಯಿಯು ಪುತ್ರವಾತ್ಸಲ್ಯದಿಂದ ಮಗನ ಮುಖವನ್ನು ನೋಡಿ ಸಂತೋಷದಿಂದ ನಗುತ್ತ " ಸಲೀಮ್, ಬಂದಿಯಾ ಬಾ. ನಾಲ್ಕಾರು ದಿವಸದಿಂದ ನಾವು ನಿನ್ನ ಮೋರೆಯನ್ನೇ ಕಂಡಿಲ್ಲ. ಏನು ಮಾಡುತ್ತಿದ್ದಿ ? " ಎಂದು ಕೇಳಿದಳು.

" ಮಾಸಾಹೇಬ್, ಬಾದಶಹರ ಕೃಪೆಯು ನನ್ನ ಮೇಲೆ ತುಸು ಕಡಿಮೆಯಾದಂತೆ ತೋರುತ್ತದೆ; ಅದಕ್ಕಾಗಿ ನಾನು ಚಿಂತೆಯಲ್ಲಿದ್ದೆನು. ಅವರ ಕ್ಷಮೆಯನ್ನು ನೀವು ಸಂಪಾದಿಸಿಕೊಡುವಿರೆಂದು ನಂಬಿ ಈ ಪಾದಗಳನ್ನು ಕಾಣಲು ಬಂದಿದ್ದೇನೆ " ಎಂದು ಸಲೀಮನು ಚಿಂತಾಕುಲನಾಗಿ ನುಡಿದನು.

" ಮುದ್ದು ಮಗನೇ, ನೀನೀಗ ಒಳ್ಳೇ ಸೌಜನ್ಯದ ಮಾತುಗಳನ್ನಾಡುವದನ್ನು ಕೇಳಿ ನನಗೆ ತುಂಬಾ ಸಂತೋಷವಾಗಿದೆ. ಸಲೀಮ್, ಬಾದಶಹರ ಪ್ರೇಮವು ನಿನ್ನ ಮೇಲೆ ಸಂಪೂರ್ಣವಾಗಿ ಇದೆ. ನೀನೇ ನಿನ್ನ ಅವಿಚಾರದ

ಕೃತ್ಯಗಳಿಂದ ಅವರ ಮನಸ್ಸು ನೋಯಿಸುತ್ತಿರುವಿ. ನೀನೇನು ಸಣ್ಣವನೆಂದು ನಾವು ನಿನಗೆ ಬುದ್ಧಿಗಲಿಸಬೇಕೆ ? "

" ತೋಬಾ! ತೋಬಾ! ಮಾಸಾಹೇಬ್, ನಾನೆಂದಿಗೂ ಬಾದಶಹರ ಮನಸ್ಸು ನೋಯಿಸಬೇಕೆಂದು ಯಾವ ಕೃತ್ಯಗಳನ್ನೂ ಬುದ್ಧ್ಯಾ ಮಾಡಿಲ್ಲ."

ಜೋಧಬಾಯಿಯು ತುಸು ನಕ್ಕು "ಸುಲ್ತಾನ್, ನೀನು ಬುದ್ಧ್ಯಾ ಯಾವ ಕೆಲಸವನ್ನು ಮಾಡದಿದ್ದರೂ ಇಂಥಿಂಥ ಕೃತ್ಯಗಳನ್ನು ಮಾಡಿದರೆ ಬಾದಶಹರಿಗೆ ಸರಿಬರಲಿಕ್ಕಿಲ್ಲವೆಂಬದು ನಿನಗೆ ತಿಳಿಯಬಾರದೆ. "

" ಅಂಥ ಕೆಲಸವನ್ನಾದರೂ ನಾನು ಮಾಡಿದ್ದು ಯಾವದು, ಸಾರ್ವಭೌಮಿನಿಯಾದ ನನ್ನ ತಾಯಿಯೆ ? "

"ನನಗೆ ತಿಳಿದಿಲ್ಲವೆಂದು ನೀನು ಹೀಗೆ ಮಾತಾಡುವಿಯೇನು ಸಲೀಮ್? ನಿನ್ನನ್ನು ಹಡೆದವರನ್ನೇ ಸಿಂಹಾಸನದಿಂದ ತಳ್ಳಬೇಕೆಂದು ಮೊನ್ನೆಮೊನ್ನೆ ನೀನು ಪ್ರಯತ್ನಮಾಡಿದಿಯಂತೆ! ಪುತ್ರನೂ, ಬಾದಶಹರ ಕೈಕೆಳಗಿನ ಸಂಭೇಧಾರನೂ ಆದ ನಿನ್ನ ಧರ್ಮವೇ ? ಹುಚ್ಚಾ, ಬುದ್ಧಿಯನ್ನೆಲ್ಲಿ ಇಟ್ಟಿರುವಿ ? "

ಈ ಮಾತು ಕೇಳಿ ಸಲೀಮನು ಮುಗ್ಧನಂತೆ ತಲೆತಗ್ಗಿಸಿ ಕುಳಿತನು. ರಾಣಿಯು ಮತ್ತೆ ಹೇಳಿದ್ದು: "ಬಾದಶಹರು ಮಣಿಹೇಮಗಳಿಂದ ರಚಿತವಾದ ಜಡಸಿಂಹಾಸನದ ಮೇಲೆ ಕುಳಿತಿದ್ದರೆ ನೀನು ಅದನ್ನು ಅಲ್ಲಾಡಿಸಿ ನೋಡಬಹುದಾಗಿತ್ತು. ಸಕಲಪ್ರಜರ ನಿಶ್ಚಲವಾದ ಪ್ರೇಮವೆಂಬ ದೃಢವಾದ ಸಿಂಹಾಸನದಲ್ಲಿ ಭದ್ರವಾಗಿ ಕುಳಿತಿರುವ ನೀತಿಮಂತರಾದ ಸಾರ್ವಭೌಮಶಿಖಾಮಣಿಗಳನ್ನು ಅಂಥ ಉನ್ನತವಾದ ಸ್ಥಾನದಿಂದ ತಳ್ಳುವದು ಭೂಮಂಡಲದಲ್ಲಿಯ ಸಮಸ್ತರಾದ ರಾಜರಿಂದಲೂ ಆಗದು ! ಹುಚ್ಚಾ, ನೀನೆಷ್ಟರವನು ? "

" ಅಮ್ಮಾ, ನನ್ನಿಂದ ಅತಿ ನಿಂದ್ಯವಾದ ಕೃತ್ಯವಾಯಿತು. ಸರಿ, ಈಗ ನಾನು ತಪ್ಪಾಯಿತೆಂದು ಹೇಳಿಕೊಂಡರೆ ಆಗದೇನು ? " ಎಂದು ಸಲೀಮನು ಅಂಗಲಾಚಿ ಹೇಳಿಕೊಂಡನು.

" ಪುತ್ರವತ್ಸಲರಾದ ನಿನ್ನ ಹಿರಿಯರು ಈಗ ನಿನ್ನ ತಪ್ಪುಗಳನ್ನು ಎಷ್ಟಾವರ್ತಿ ಕ್ಷಮಿಸಿರುವರು ನೀನೇ ಹೇಳು ನೋಡೋಣ ? "

" ಮಾಸಾಹೇಬ್, ದಯಾಳುಗಳಾದ ನೀವು ಇದೊಂದು ಸಾರೆ ನನ್ನನ್ನು ಕ್ಷಮಿಸಿರಿ. ಇನ್ನುಮೇಲೆ ನಾನು ಬಾದಶಹರವರ ಆಜ್ಞಾಧಾರಕನಾದ

ಸೇವಕನಂತೆ ನಡೆಕೊಳ್ಳುವೆನು."

"ಅವಿಚಾರಿಯಾದ ನನ್ನ ಮಗನೆ, ಹೀಗೆ ನೀನು ಎಷ್ಟಾವರ್ತಿಯೋ ನಮಗೆ ನಂಬಿಗೆ ಕೊಟ್ಟು ವಂಚಿಸಿರುವಿ. ಕ್ಷಮಾಸಾಗರರಾದ ಬಾದಶಹರ ಬಳಿಗೆ ಬಂದು ನೀನು ನಿನ್ನ ಒಡಕುಪಾತ್ರೆಯಲ್ಲಿ ಕ್ಷಮಾಮೃತವನ್ನು ಎಷ್ಟಾವರ್ತಿ ತುಂಬಿಕೊಂಡು ಹೋದರೂ ಅದು ಕಡಿಮೆಯಾಗಲಾರದು. ನೀನೇ ಬೇಡಿಬೇಡಿಕೊಂಡು ದಣಿಕೊಳ್ಳುವಿಯೋ ಹೊರತಾಗಿ ಅವರು ಯಾವಾಗಲೂ ಕ್ಷಮಿಸಲು ಸಿದ್ಧರಾಗಿರುವರು.

"ಅಷ್ಟು ನೀವು ಮಾಡಿಸಿದರೆ ನಾನು ಈ ಪಾದಗಳನ್ನು ಯಾವಾಗಲೂ ಭಕ್ತಿಯಿಂದ ಭಜಿಸುವೆನು."

"ಅದು ಆದೀತು. ಸಲೀಮ್ ನಾವು ನಿನಗೆ ಹೇಳುವದೇನಂದರೆ, ಮಹಾಪ್ರತಾಪಶಾಲಿಗಳೂ, ನೀತಿವಂತರೂ, ಚತುರರೂ ಆದ ನಿನ್ನ ಹಿರಿಯರು ಈ ಸಾಮ್ರಾಜ್ಯವನ್ನು ಆಳುತ್ತಿರುವಾಗಲೇ ನೀನು ಅವರ ಸದ್ಗುಣಗಳನ್ನು ಅನುಕರಿಸಿ ರಾಜ್ಯವನ್ನಾಳುವ ಪದ್ಧತಿಯನ್ನು ಕಲಕೊಂಡರೆ ಮುಂದೆ ನಿನಗೂ, ಪ್ರಜಾಜನರಿಗೂ ಕೂಡಿಯೇ ಹಿತವಾಗುವದು. ಬಾದಶಹರು ಚಿಕ್ಕವರಿರುವಾಗಲೇ ಬಯಿರಾಮುಖಾನ್‌ನಂಥ ಮಂತ್ರಿಶಿರೋಮಣಿಯು ಕೂಡ ಅವರ ಜಾಣತನಕ್ಕೆ ಮೆಚ್ಚಿ ತಲೆದೂಗಿದನು. ನಿನ್ನ ಅವಸ್ಥೆಯನ್ನು ನೋಡಿಕೋ! ಪ್ರಬುದ್ಧನಾದ ನಿನಗೆ ಎಳ್ಳಷ್ಟಾದರೂ ಸದ್ಬುದ್ಧಿಯಿರಬಾರದೆ!"

"ಅವ್ವಾ, ಈ ವೇದಾಂತ ಸಾಕು. ನಾನಿನ್ನು ರಾಖಿಯಾ ಬೇಗಮ್ಮರವರ ದರ್ಶನಕ್ಕೆ ಹೋಗುವವನಿದ್ದೇನೆ. ಅಪ್ಪಣೆ ಕೊಡಿರಿ. ಅವರು ನನ್ನ ಮಾರ್ಗಪ್ರತೀಕ್ಷೆ ಮಾಡುತ್ತಿರುವರಾದೀತು" ಎಂದು ಹೇಳಿ ಸಲೀಮನು ಹೋಗಲು ಸಿದ್ಧನಾಗಿ ಎದ್ದು ನಿಂತನು.

"ಹೋಗು; ನಾವು ಬೇಡನ್ನುವದಿಲ್ಲ. ಆದರೆ ನೀನ್ಯಾಕೆ ಹೋಗುವಿ ಎಂಬದನ್ನು ನಾವು ಅರಿತುಕೊಂಡಿದ್ದೇವೆ. ಅದಕ್ಕೆ ಹೇಳುತ್ತೇನೆ."

"ನಿಮಗೇನು ತಿಳಿದಿದೆ? ಮಾತೆಯಾದ ರಾಖಿಯಾ ಬೇಗಮ್ಮರ ದರ್ಶನಕ್ಕೆ ಹೋಗಕೂಡದೆ?"

"ರಾಖಿಯಾ ಬೇಗಮ್ಮರವರು ಒಳ್ಳೇ ಮನಸ್ಸಿನವರು. ಅವರಿಗೆ ನಿನ್ನ ಕೃತಿಗಳು ತಿಳಿಯುವದಿಲ್ಲೆಂದು ಅವರನ್ನು ವಂಚಿಸಿ ಅವರ ಆಶ್ರಯದಿಂದ

ನೀನು ಅನುಚಿತವಾದ ಕೆಲಸವನ್ನು ಮಾಡುವಿಯೆಂಬದು ನಮಗೆ ತಿಳಿದಿದೆ. ಇದಕ್ಕೂ ಹೆಚ್ಚು ನಾವೇನು ಹೇಳೋಣ ! ”

“ ಏನೂ ಹೇಳಬೇಡಿರಿ ” ಎಂದು ಸಲೀಮನು ಎದ್ದು ನಡೆದನು.

“ ಅನೇಕ ರಾಷ್ಟ್ರಗಳನ್ನು ಗೆದ್ದು ಸಾಮ್ರಾಜ್ಯವನ್ನು ಬೆಳಿಸಿ ಅಲ್ಲಿ ಸುಖಶಾಂತಿಗಳನ್ನು ನೆಲೆಗೊಳಿಸಿ ಆ ಸಾಮ್ರಾಜ್ಯವನ್ನು ಸುಲಿದ ಬಾಳೆಯ ಹಣ್ಣಿನಂತೆ ಮಾಡಿ, ನಿನ್ನ ಕೈಯಲ್ಲಿ ಕೊಟ್ಟು ಹೋಗುವವರ ಮಾತೇ ಕೇಳದವನಾದ ನೀನು ನಮ್ಮ ಮಾತು ಲಕ್ಷ್ಯಕ್ಕೆ ತರುವಿಯಾ ? ” ಎಂದು ಜೋಧಬಾಯಿಯು ವ್ಯಸನದಿಂದ ನುಡಿದಳು.

“ ನಾನು ಮೂರ್ಖನಾದರೂ ದಿಲ್ಲೀಪತಿಯು. ದುಂದುಗಾರನಾದರೂ ದಿಲ್ಲೀಪತಿಯು ! ” ಎಂದು ಸಲೀಮನು ಹಿಂತಿರುಗಿ ನೋಡಿ ಅಣಕಿಸಿ ನಗುತ್ತ ಹೊರಟು ಹೋದನು.

“ ಹೋಗು ! ನೀನು ಮೂರ್ಖನಾದರೂ ಮಗನು ! ದುಂದುಗಾರನಾದರೂ ಮಗನೇ !! ನಾವಿರುವವರೆಗೆ ಇದೆಲ್ಲ ಚಂದ ಕಾಣಿಸುತ್ತದೆ. ಮುಂದೆ ನಿನ್ನ ಗತಿಯೇನಾಗುವದೋ ದೇವರೇ ಬಲ್ಲ !” ಎಂದು ಆ ಸಾರ್ವಭೌಮಿನಿಯು ತನ್ನಷ್ಟಕ್ಕೆ ಆಡಿಕೊಂಡು ಕಣ್ಣಿಗೆ ನೀರು ತಂದಳು.

ಜುಲೇಕೆಯು ಶರೀಫೆಯನ್ನು ಕರಕೊಂಡು ಹೊರಗೆ ಬಂದಳು.

“ ಶರೀಫಾ, ನಡೆ ಇನ್ನು ನಮ್ಮ ಕಾರ್ಯದ ಸಮಯವು ಸಮೀಪಿಸಿತು. ಜಗತ್ತಿಗೇ ಹೆಚ್ಚಿನವಳಾದ ಸುಂದರೀಮಣಿಯನ್ನು ನೋಡುವ ಕುತೂಹಲವು ನಿನಗಿರುವದಷ್ಟೇ ? ಈಗಲೇ ಹೋದ ರಾಜಪುತ್ರನು ರಾಖಿಯಾ ಬೇಗಮ್ಮರ ದರ್ಶನದ ನೆವಮಾಡಿಕೊಂಡು, ಅವರ ಆಶ್ರಯದಲ್ಲಿದ್ದ ಆ ಭುವನೈಕ ಸುಂದರಿಯನ್ನು ಕಾಣಬೇಕೆಂದೂ, ಅನುಕೂಲವಾದರೆ ಅವಳನ್ನು ಬಲಾತ್ಕಾರದಿಂದ ಎತ್ತಿಕೊಂಡು ಹೋಗಬೇಕೆಂದೂ ಆವನು ಹವಣಿಸುತ್ತಿರುವನು. ನಾವಿನ್ನು ಆ ಜಗನ್ಮೋಹಿನಿಯು ಇರುವ ಸ್ಥಳಕ್ಕೆ ಹೋಗಿ ಅವಳ ದರ್ಶನವನ್ನು ತೆಗೆದುಕೊಳ್ಳೋಣ. ಮುಂದೆ ಪ್ರಸಂಗ ಬಂದಂತೆ ಆಚರಿಸುವ ” ಎಂದು ಜುಲೇಕೆಯು ಹೇಳಿ ತನ್ನ ಸಹಚರಿಯನ್ನು ಕರಕೊಂಡು ಎಲ್ಲಿಗೋ ನಡೆದಳು.

## ಇಪ್ಪತ್ತೈದನೆಯ ಅಧ್ಯಾಯ

## ನಿರುಪಮಸುಂದರಿಯು

ಜುಲೇಕೆಯು ಹೇಳಿದ ಆ ಲೋಕೈಕಳಾದ ಸುಂದರಿಯು ಇರಾಣ ದೇಶದ ಒಬ್ಬ ಬಡವನಾದ ಗೃಹಸ್ಥನ ಮಗಳು. ನಡು ಅಡವಿಯು ಗಿಡದಡಿಯಲ್ಲಿ. ಈ ಮಡದಿಯನ್ನು ಹಡೆದ ತಾಯಿಯು, ಸುಂದರಾಂಗಿಯಾದ ತನ್ನ ನಂದಿನಿಯು ಮುಂದೆ ಹಿಂದುದೇಶವನ್ನು ತನ್ನ ಛಂದಾನುಸಾರವಾಗಿ ಆಳುವಳೆಂದು ಎಷ್ಟು ಮಾತ್ರವೂ ತಿಳಿದಿದ್ದಿಲ್ಲ. ದಾರಿದ್ರ್ಯದಿಂದ ಪೀಡಿತನಾದ ಆವಳ ತಂದೆಯು ಆವಳನ್ನು ಒಬ್ಬ ಸೌದಾಗಾರನಿಗೆ ಸಾಕಕೊಟ್ಟು ತಾನೂ ಸಹಕುಟುಂಬನಾಗಿ ಅವನೊಡನೆ ಹಿಂದುಸ್ಥಾನಕ್ಕೆ ಬಂದನು. ಶ್ರೀಮಂತನಾದ ಆ ಸೌದಾಗಾರನು ಅಕಬರನ ರಾಜಧಾನಿಯಾದ ಆಗ್ರಾಪಟ್ಟಣದಲ್ಲಿ ಇದ್ದುಕೊಂಡು ಮುತ್ತುರತ್ನಗಳ ಘನವಾದ ವ್ಯಾಪಾರವನ್ನು ನಡಿಸಿದನು. ಆ ಸೌದಾಗಾರನ ಆಶ್ರಯದಿಂದಲೇ ಆ ಚಲುವೆಯಾದ ಹುಡಿಗೆಯ ತಂದೆಗೆ ಬಾದಶಹರ ಸೈನ್ಯದಲ್ಲಿ ಒಂದು ಅಧಿಕಾರ ಸಿಕ್ಕಿತು.

ಸೌದಾಗಾರನ ಮನೆಯಲ್ಲಿ ಬಿದಿಗೆಯ ಚಂದ್ರಮನಂತೆ ಬೆಳೆದು ಆ ಹುಡಿಗೆಯು ಹದಿನೈದು ಹದಿನಾರು ವರುಷದ ಪ್ರಾಯದವಳಾಗಿ ನಿರುಪಮ ಸುಂದರಿಯಾದ ತರುಣಿಯಾದಳು. ಆವಳ ಅಪ್ರತಿಮವಾದ ಲಾವಣ್ಯವನ್ನು ಕಂಡು ಆವಳ ಸಾಕುತಂದೆಯು ಅವಳಿಗೆ "ಮಿಹಿರ್ ಉನ್ನಿಸ್ಸಾ" ಎಂಬ ಅನ್ವರ್ಥಕವಾದ ಹೊಸ ಹೆಸರಿಟ್ಟನು. ಈ ಮಿಹಿರ್ ಉನ್ನಿಸ್ಸೆಯೆ ಮುಂದೆ ನೂರ್‌ಜಹಾನ್ ಎಂಬ ಹೆಸರಿಟ್ಟುಕೊಂಡು ಜಗದ್ವಿಖ್ಯಾತಳಾದ ಜಹಾಂಗೀರನ ರಾಣಿಯಾಗತಕ್ಕವಳು.

ಮಿಹಿರ್ ಉನ್ನಿಸ್ಸೆಯ ಅಪ್ರತಿಮವಾದ ಸೌಂದರ್ಯವಾರ್ತೆಯನ್ನು ಕೇಳಿ ಆಗ್ರಾಪಟ್ಟಣದ ನಿವಾಸಿಗಳೆಲ್ಲರೂ ಆವಳನ್ನು ನೋಡಬೇಕೆಂಬ ಉತ್ಕಟವಾದ ಕುತೂಹಲವುಳ್ಳವರಾದದ್ದು ಆಶ್ಚರ್ಯವಲ್ಲ. ಆಗ್ರಾಪಟ್ಟಣದಲ್ಲಿಯ ಘನವಂತರ ಸ್ತ್ರೀಯರೆಲ್ಲ ಹಿಂಡುಹಿಂಡಾಗಿ ಮಿಹಿರ್ ಉನ್ನಿಸ್ಸೆಯನ್ನು ನೋಡಿಬರುವದಕ್ಕಾಗಿ ದಿನಾಲು ಆ ಸೌದಾಗಾರನ ಮನೆಗೆ ಹೋಗಿ ಬರುವ ಸಾರಿಗೆಯನ್ನಿಟ್ಟಿದ್ದರು. ರೋಮರೋಮವನ್ನು ಬಿಡದೆ ನಿರೀಕ್ಷಣ

ಮಾಡುವದರಲ್ಲಿ ಹೆಣ್ಣುಮಕ್ಕಳು ಬಹು ಚಾಣಾಕ್ಷರು. ಅಂಥ ಸ್ತ್ರೀವರ್ಗದಿಂದಲೇ ಮಿಹಿರ್ ಉನ್ನಿಸ್ಸೆಯು ಸರ್ವಾಂಗಸುಂದರಿ ಎಂದು ಹೊಗಳಿಸಿಕೊಂಡಿದ್ದರಿಂದ ಇಡೀ ಹಿಂದುಸ್ಥಾನದಲ್ಲೆಲ್ಲ ಆ ರಮಣೀಮಣಿಯ ರೂಪದ ಖ್ಯಾತಿಯಾಯಿತು.

ಆಗ್ರಾಪಟ್ಟಣದಲ್ಲಿಯ ಅಮೀರ ಉಮ್ರಾವರೂ, ದೊಡ್ಡ ದೊಡ್ಡ ಶ್ರೀಮಂತರೂ ಒಮ್ಮೆಯಾದರೂ ಆ ಅಲೌಕಿಕಸುಂದರಿಯ ಮುಖವನ್ನು ನೋಡಬೇಕೆಂಬ ಕುತೂಹಲದಿಂದ ಆ ಸೌದಾಗಾರನ ಮನೆಗೆ ವ್ಯಾಪಾರದ ನೆವಮಾಡಿಕೊಂಡು ಹೋಗಿಬರಲಾರಂಭಿಸಿದರು. ತಿಳಿಗೇಡಿಗಳಾದ ತರುಣರು ಸೊಬಗಿನ ಪೋಷಾಕು ಮಾಡಿಕೊಂಡು ಮಳೆಯಿಲ್ಲ, ಬಿಸಿಲಿಲ್ಲ, ಆ ಲಲನಾಮಣಿಯಿದ್ದ ಮಂದಿರಕ್ಕೆ ಪ್ರದಕ್ಷಿಣೆ ಹಾಕೇ ಹಾಕುತ್ತಿದ್ದರು. ತಾನು ಸುಂದರಿ, ತಾನು ಸುಂದರಿ ಎಂದು ಹೆಮ್ಮೆಯಿಂದ ಮೆರೆಯುತ್ತಿರುವ ಅಕಬರನ ಅಂತಃಪುರದ ನಾರಿಯರು ಮಿಹಿರ್-ಉನ್ನಿಸ್ಸೆಯನ್ನು ಕರಸಿಕೊಂಡು ನೋಡಿ ಅವಳ ರೂಪಕ್ಕೆ ತಮ್ಮ ರೂಪು ವರಹದಲ್ಲಿ ದುಗ್ಗಾಣಿಯಾಗಲಿಕ್ಕಿಲ್ಲೆಂದು ಮನಗಂಡು ಖಂಡಿತವಾದ ಗರ್ವವುಳ್ಳವರಾದರು. ಬಾದಶಹನ ಹಿರಿಯ ಹೆಂಡತಿಯಾದ ರಾಖಿಯಾ ಬೇಗಮ್ಮಳಂತೂ ಅವಳನ್ನು ಆಗಾಗ್ಗೆ ತನ್ನ ಮಂದಿರಕ್ಕೆ ಕರಸಿಕೊಂಡು ನಾಲ್ಕು ನಾಲ್ಕು ದಿವಸ ತನ್ನ ಬಳಿಯಲ್ಲಿ ಇಟ್ಟುಕೊಂಡು ಕಳಿಸಿಕೊಡುತ್ತಿದ್ದಳು. ಆ ಸುಂದರಿಯು ರಾಖಿಯಾ ಬೇಗಮ್ಮಳ ಮಂದಿರಕ್ಕೆ ಬರುತ್ತಿರುವದನ್ನು ಅರಿತವನಾದ ಸಲೀಮನಿಗೆ ರಾಖಿಯಾ ಬೇಗಮ್ಮಳ ವಿಷಯವಾಗಿ ಮಾತೃಭಕ್ತಿಯು ಹೆಚ್ಚಾಯಿತು. ಮಾತೃವಂದನಕ್ಕಾಗಿ ಆ ರಾಜಪುತ್ರನು ರಾಖಿಯಾ ಬೇಗಮ್ಮಳ ಮನೆಗೆ ನಿತ್ಯದಲ್ಲಿ ಬರಲಾರಂಭಿಸಿದನು. ಹಡೆದ ತಾಯಿಗಿಂತಲೂ ಸಲೀಮನು ತನ್ನಲ್ಲಿ ಹೆಚ್ಚಾದ ಭಕ್ತಿಯುಳ್ಳವನೆಂದು ನಂಬಿ ಆ ಬೇಗಮ್ಮಳಾದರೂ ಸಲೀಮನಲ್ಲಿ ಪ್ರೇಮವುಳ್ಳವಳಾಗಿದ್ದಳು.

ರಾಖಿಯಾ ಬೇಗಮ್ಮಳ ಮಂದಿರದಲ್ಲಿಯೇ ಸಲೀಮ ಮಿಹಿರ್-ಉನ್ನಿಸ್ಸೆಯರು ಪರಸ್ಪರರನ್ನು ನೋಡಿಕೊಂಡರು. ಆ ಭುವನೈಕಸುಂದರಿಯನ್ನು ಕಂಡು ಸಲೀಮನು ಮೋಹಿತನಾದನೆಂದು ನಾವು ವಾಚಕರಿಗೆ ಹೇಳಬೇಕೇನು? ಅವನಿಗೆ ಅವಳ ಹುಚ್ಚೇ ಹಿಡಿಯಿತು. ಮಿಹಿರ್‌ಉನ್ನಿಸ್ಸೆ

ಯಾದರೂ ಸಲೀಮನ ರೂಪಕ್ಕೆ ಮರುಳಾದಳು. ಸಲೀಮನು ಚಕ್ರವರ್ತಿ ಯಾದ ಅಕಬರನ ಮಗನೂ, ಮುಂದಾಗುವ ಚಕ್ರವರ್ತಿಯೂ ಎಂದು ತಿಳಿದು ಅವನನ್ನು ತನ್ನ ಮೋಹಜಾಲದಲ್ಲಿ ಹಿಡಿಯಬೇಕೆಂದು ಮಿಹಿರ್‌ಉನ್ನಿಸ್ಸೆಯು ಹವಣಿಸಿದ್ದಳೆಂದು ಎಷ್ಟೋ ಜನ ಇತಿಹಾಸಕಾರರು ಹೇಳುತ್ತಾರೆ. ಹೇಗೇ ಇರಲಿ, ಸಲೀಮನು ತನ್ನ ಪತಿಯಾಗಬೇಕೆಂದು ಬಯಸಿ ಅವಳು ಆಗಾಗ್ಗೆ ತನ್ನ ಲೀಲಾವಿಲಾಸಗಳನ್ನು ತೋರಿ ಸಲೀಮನನ್ನು ತನ್ನ ಪ್ರೇಮಪಾಶದಲ್ಲಿ ದೃಢವಾಗಿ ಕಟ್ಟಿಬಿಟ್ಟಿದ್ದಳು.

ಈ ಅಂತರ್ಗತವು, ಸದಾ ಜಾಗೃತನೂ, ವ್ಯಾತುಂಬ ಕಣ್ಣುಗಳುಳ್ಳವನೂ ಆದ ಅಕಬರಬಾದಶಹನಿಗೆ ತಿಳಿಯದೆ ಹೋಗಲಿಲ್ಲ. ಮಿಹಿರ್‌ಉನ್ನಿಸ್ಸೆಯಂಥ ಭುವನೈಕಸುಂದರಿಯ ಪ್ರೇಮಪಾಶದಲ್ಲಿ ಸಿಲ್ಕಿದವನು ಕಾರ್ಯದಕ್ಷನಾದ ರಾಜನಾಗನೆಂದು ಆ ಧೂರ್ತನಾದ ಬಾದಶಹನು ಆಲೋಚಿಸಿದನು. ಮೇಲಾಗಿ ಆ ಇರಾಣದ ಸುಂದರಿಯು ತನ್ನ ಮಗನ ಪ್ರೀತ್ಯಾಸ್ಪದಳಾದ ಹೆಂಡತಿಯಾದರೆ ಹಿಂದುಸ್ಥಾನದ ಸಾಮ್ರಾಜ್ಯದಲ್ಲಿ ಇರಾಣೀಜನರ ಪ್ರಾಬಲ್ಯವಾಗಿ ತಾನು ಸ್ಥಾಪಿಸಿದ ಸಾಮ್ರಾಜ್ಯಕ್ಕೆ ಹಾನಿ ತಟ್ಟುವದೆಂದು ಅಕಬರನು ಯೋಚಿಸಿದನು. ಈ ಕಾರಣಗಳಿಗಾಗಿ ಬಾದಶಹನು ಮಿಹಿರ್‌ಉನ್ನಿಸೆಯನ್ನು ಶೇರ ಅಫಗಾನನೆಂಬ ಪರಾಕ್ರಮಶಾಲಿಯಾದ ತರುಣನಿಗೆ ಮದುವೆ ಮಾಡಿಕೊಟ್ಟು ಅವರನ್ನು ರಾಜಧಾನಿಯಿಂದ ದೂರದಲ್ಲಿರುವ ಬಂಗಾಲದಲ್ಲಿ ಇರಿಸಬೇಕೆಂದು ಯೋಜನೆ ಮಾಡಿದ್ದನು.

ತನ್ನ ಪ್ರಾಣಪದಕಳಾದ ಆ ಸುಂದರೀಮಣಿಯನ್ನು ಒಬ್ಬ ಅಫಗಾನ ಸಿಪಾಯಿಯು ಎತ್ತಿಕೊಂಡು ಹೋಗುವನೆಂದು ಕಂಡು ಸಲೀಮನು ಮತ್ಸರದಿಂದ ಕುದಿಯಲಾರಂಭಿಸಿದನು. ಅಕಬರನು ಶೇರ ಅಫಗಾನನಿಗೆ ಬಂಗಾಲದಲ್ಲಿ ಒಂದು ಜಾಹಗೀರು ಕೊಟ್ಟು ಇನ್ನು ಸ್ವಲ್ಪ ದಿವಸಗಳಲ್ಲಿಯೇ ಅವನನ್ನೂ, ಮಿಹಿರ್‌ಉನ್ನಿಸ್ಸೆಯನ್ನೂ ದೂರತ್ತ ಅಟ್ಟುವನೆಂದು ತಿಳಿದ ಬಳಿಕಂತೂ ಸಲೀಮನು ಎಲ್ಲ ವಿಚಾರಗಳನ್ನು ಬಿಟ್ಟುಕೊಟ್ಟು ಮಿಹಿರ್‌ಉನ್ನಿಸೆಯನ್ನು ಅಪಹರಿಸುವ ಹವಣಿಕೆಗೆ ಬಿದ್ದನು. ಅದಕ್ಕಾಗಿಯೇ ಅವನು ಜೋಧಬಾಯಿಯ ಅಪ್ಪಣೆ ತೆಗೆದುಕೊಂಡು ಆ ದಿವಸ ರಾಬಿಯಾ ಬೇಗಮ್ಮಳ ಮಂದಿರಕ್ಕೆ ಧಾವಿಸಿ ಬಂದನು. ಮಿಹಿರ್‌ಉನ್ನಿಸ್ಸೆಯು ತನ್ನನ್ನು ಅಗಲಿ ಬಂಗಾಲಕ್ಕೆ

ಹೋಗುವಳೆಂದು ನೆನಿಸಿ ರಾಖಿಯಾ ಬೇಗಮ್ಮಳು ಆ ಮೋಹಿನಿಯನ್ನು ತನ್ನ ಮಂದಿರಕ್ಕೆ ಕಡೆಯ ಭೆಟ್ಟಿಗಾಗಿ ಕರಿಸಿಕೊಂಡಿದ್ದಳು.

ಮಿಹಿರ್‌ಉನ್ನಿಸ್ಸೆಗಾದರೂ ತಾನು ಬಂಗಾಲಕ್ಕೆ ಹೋಗುವಾಗ ತನ್ನ ಹೃದಯಚೋರನಾದ ಸಲೀಮನನ್ನು ಕಂಡು ಹೋಗಬೇಕೆಂಬ ಲವಲವಿಕೆಯಾಗಿರುವದು ಸ್ತ್ರೀಸ್ವಭಾವಕ್ಕೆ ಸಹಜವಾದದ್ದೇ. ಆದರೂ ತಾನು ವಿವಾಹಿತಳಾದ ಸತಿಯೆಂಬದನ್ನು ಅವಳು ಚನ್ನಾಗಿ ಲಕ್ಷ್ಯದಲ್ಲಿಟ್ಟುಕೊಂಡು ಸಲೀಮನು ಭೆಟ್ಟಿಗೆ ಬಂದಾಗ ಅವನಿಂದ ತನ್ನ ಮರ್ಯಾದೆಗೆ ಹಾನಿ ಬರಕೂಡದೆಂದು ಚಿಂತಿಸಿ ಆವಳು ತನ್ನ ಎಚ್ಚರದಲ್ಲಿಯೇ ಇದ್ದಳು.

ಸಲೀಮನು ಉತ್ಸಾಹದಿಂದ ಮಿಹಿರ್‌ಉನ್ನಿಸ್ಸೆ ಇದ್ದ ಮಂದಿರಕ್ಕೆ ಬಂದನು. ಅಲ್ಲಿ ಅವನು ಜುಲೇಕೆಯನ್ನು ಕಂಡು ವಿಸ್ಮಿತನಾಗಿ "ನೀವ್ಯಾಕೆ ಇಲ್ಲಿ? ನಮ್ಮ ಮಾತೆಯವರ ಬಳಿಯಲ್ಲಿ ಇರುವದಿಲ್ಲೇ ನೀವು?" ಎಂದು ಕೇಳಿದನು.

"ಮಿಹಿರ್‌ಉನ್ನಿಸ್ಸಾ ಬೇಗಮ್ಮರವರು ಬಂಗಾಲಕ್ಕೆ ಹೋಗುವವರಾಗಿದ್ದಾರೆ. ಆವರ ದರ್ಶನಕ್ಕಾಗಿ ನಾನು ಬಂದಿದ್ದೆನು." ಎಂದು ಜುಲೇಕೆಯು ಲಜ್ಜಾವನತಮುಖಿಯಾಗಿ ನುಡಿದಳು.

"ಬೇಗಮ್‌ಸಾಹೇಬರಿಗೆ ನಾನು ಬಂದಿರುವ ವರ್ತಮಾನವನ್ನು ದಯಮಾಡಿ ತಿಳಿಸುವಿರಾ?" ಎಂದು ಸಲೀಮನು ಕೇಳಿದ ಕೂಡಲೆ ಜುಲೇಕೆಯು ಲಗಬಗೆಯಿಂದ ಒಳಗೆ ಹೋಗಿ ಸಲೀಮನು ಬಂದ ವರ್ತಮಾನವನ್ನು ಮಿಹಿರ್‌ಉನ್ನಿಸ್ಸೆಗೆ ತಿಳಿಸಿದಳು.

"ಜುಲೇಕಾ, ಸುಲ್ತಾನರಿಗೆ ಆಸನದಲ್ಲಿ ಕುಳ್ಳಿರ ಹೇಳು; ನಾನೀಗಲೇ ಅವರ ದರ್ಶನಕ್ಕೆ ಬರುವೆನು." ಎಂದು ಹೇಳಿ ಮಿಹಿರ್‌ಉನ್ನಿಸ್ಸೆಯು ಸಲೀಮನ ದರ್ಶನಕ್ಕೆ ಬರಬೇಕಾದರೆ ಒಳ್ಳೇ ವೈಯ್ಯಾರದ ನೇಪಥ್ಯ ಬೇಕೆಂದೆಣಿಸಿ ತನ್ನ ಸಿದ್ಧತೆಗಾಗಿ ನಡೆದಳು.

ತನಗಾಗಿ ಇಟ್ಟಿರುವ ಆಸನದಲ್ಲಿ ಕುಳಿತುಕೊಂಡು ಸಲೀಮನು ತನ್ನ ಪ್ರಿಯತಮೆಯ ಮಾರ್ಗಪ್ರತೀಕ್ಷೆಯನ್ನು ಮಾಡುತ್ತಿದ್ದನು. ತುಸು ಹೊತ್ತಿನಲ್ಲಿಯೇ ನೂತನಾವತಾರೆಯಾದ ಆ ಭೂಲೋಕದ ರತಿದೇವಿಯು ಮಂಜೀರಗಳ ಮಂಜುಳವಾದ ಧ್ವನಿಯೊಡನೆ ಪದವಿನ್ಯಾಸವನ್ನು ಮಾಡುತ್ತ ಮೆಲ್ಲನೆ

ನಡೆತಂದಳು. ತನ್ನ ಹೃದಯಾಭಿರಮಣಿಯು ಹಾಗೆ ವೈಯ್ಯಾರದಿಂದ ಬರುತ್ತಿರುವದನ್ನು ಕಂಡು ಕಾಮಪೀಡಿತನಾದ ಸಲೀಮನು ಪುಲಕಾಂಕಿತನಾಗಿ ಹರ್ಷಾತಿರೇಕದ ಭರದಲ್ಲಿ ಎದ್ದುನಿಂತನು. ಸಲೀಮನ ಮನಸ್ಸಿನ ಸ್ಥಿತಿಯನ್ನು ಕಂಡು ಆ ಚತುರೆಯು ವಿನೋದಬಟ್ಟು ಮೃದುಹಾಸಗೈದಳು. ಆ ಕುಂದರದನೆಯ ಮಂದಸ್ಮಿತವಾದ ಮುಖಕಾಂತಿಯು, ಅವಳು ಧರಿಸಿದ ಸೂಕ್ಷ್ಮವಾದ ಮುಖಾವರಣವನ್ನೊಡೆದು ಕಂಡಿತು. ತೇಜಃಪುಂಜವಾದ ರತ್ನವು ಅಂಥ ಸೂಕ್ಷ್ಮವಾದ ಅರಿವೆಯಲ್ಲಿ ಅಡಗಬಲ್ಲದೇ! ಆ ಮನೋಹರೆಯು ಬಂದವಳೇ ಸಲೀಮ ಸುಲ್ತಾನನಿಗೆ ವಿನಯದಿಂದ ಪ್ರಣಾಮ ಮಾಡಿ ತನ್ನ ಆಸನದಲ್ಲಿ ಕುಳಿತುಕೊಂಡಳು.

ಸಲೀಮನು ತದೇಕದೃಷ್ಟಿಯಿಂದ ಆ ವಿಲಾಸಿನಿಯ ಮುಖಾವರಣವನ್ನು ನೋಡುತ್ತ ತುಸು ಹೊತ್ತು ಕುಳಿತ ಬಳಿಕ "ಮನೋರಮೆ, ಇನ್ನುಮೇಲೆ ನಿನ್ನ ಆಲ್ಹಾದಜನಕವಾದ ಮುಖವನ್ನು ಕಾಣುವದು ನನಗೆ ದುರ್ಲಭವಾದ ಸಂಗತಿಯಾಯಿತಲ್ಲವೆ?" ಎಂದು ನಿಟ್ಟುಸುರಿಟ್ಟು ಕೇಳಿದನು.

"ಶಹಜಾದಾಸಾಹೇಬ, ನಾನೀಗ ವಿವಾಹಿತಳಾದ ಸ್ತ್ರೀಯು. ನನ್ನ ಮುಖವನ್ನು ನೋಡುವೆನೆಂಬ ಹವ್ಯಾಸವೇ ನಿಮಗೆ ತಕ್ಕದ್ದಲ್ಲ." ಎಂದು ಮಿಹರ್ ಉನ್ನಿಸ್ಸೆಯು ಸಲೀಮನ ಉತ್ಸಾಹಭಂಗವಾಗುವಂತೆ ನುಡಿದಳು.

"ಮಿಹರ್‌ಉನ್ನಿಸ್ಸೆ, ನನ್ನ ಮೇಲೆ ನಿನ್ನ ನಿಜವಾದ ಪ್ರೇಮವಿರುವದೆಂದು ಹಿಂದಕ್ಕೆ ಅನೇಕಾವರ್ತಿ ಇದೇ ಮಂದಿರದಲ್ಲಿ ಕುಳಿತು ನೀನು ಹೇಳಿ ನನ್ನ ಕೈಮೇಲೆ ನಿನ್ನ ಆ ಮನೋಹರವಾದ ಕೈಯನ್ನು ಹಾಕಿದ್ದು ಈಗ ಸುಳ್ಳಾಯಿತೇನು?" ಎಂದು ಆ ರಾಜಕುಮಾರನು ದೀನನಾಗಿ ಕೇಳಿದನು.

"ಸುಲ್ತಾನ, ದೇವರ ಮನಸ್ಸಿಗೆ ಬಾರದಿದ್ದ ವಚನದ ಬೆಲೆಯೇನು? ನೀವಿನ್ನು ಅಂಥ ಮಾತುಗಳನ್ನು ತೆಗೆದು ಫಲವಿಲ್ಲ" ಎಂದು ಆ ಸುಂದರಿಯು ತನ್ನಿಂದ ಆದಷ್ಟು ಗಾಂಭೀರ್ಯವನ್ನು ತಂದುಕೊಂಡು ನುಡಿದಳು.

"ಪ್ರಿಯೇ, ನೀನೇ ನನ್ನನ್ನು ಹಾಗೆ ಪ್ರೇಮಪಾಶದಲ್ಲಿ ಕಟ್ಟಿ ಹಾಕಿ ಈಗ ನನ್ನನ್ನು ವ್ಯಸನದಲ್ಲಿ ನೂಕಿ ನಡೆದರೆ, ನಾನು ಬದುಕುವದು ಹೇಗೆ? ನನ್ನ ಮನಸ್ಸಿನ ಸ್ಥಿತಿಯನ್ನು ನೀನು ಅರಿತವಳಾಗಿ ಹೀಗೆ ನುಡಿದರೆ ಯತ್ನವೇನಿದೆ!" ಎಂದು ಆ ಕಾಮಿಯು ದುಃಖನಿರ್ಭೃತನಾಗಿ ಮಾತಾಡಿದನು.

" ಸಲೀಮಶಹಾ, ಯತ್ನವಿಲ್ಲದ ಮಾತಿಗೆ ಯಾರೇನು ಮಾಡತಕ್ಕದ್ದು? ನಾನು ಸತ್ತಿದ್ದರೆ, ನೀವೇನು ಮಾಡುತ್ತಿದ್ದಿರಿ? ಪರಸ್ತ್ರೀಯಾದ ಈ ಮಿಹಿರ್ ಉನ್ನಿಸ್ಸೆಯು ನಿಮ್ಮ ಪಾಲಿಗೆ ಸತ್ತಳೆಂದು ತಿಳಿದು ನೀವು ಜಾಣರಂತೆ ವರ್ತಿಸತಕ್ಕದ್ದು. " ಎಂದು ಮಿಹಿರ್ಉನ್ನಿಸ್ಸೆಯೂ ತುಸು ಉದ್ವಿಗ್ನಳಾಗಿ ನುಡಿದಳು.

" ತೋಬಾ! ತೋಬಾ! ಪ್ಯಾರಿ, ಎಂಥ ಅಭದ್ರವಾದ ಮಾತಾಡಿದಿ? ಮನಮೋಹಿನಿ, ನೀನು ನನ್ನವಳಾಗದಿದ್ದರೂ ಚಿಂತೆಯಿಲ್ಲ. ಆಗ್ರಾಪಟ್ಟಣ ವನ್ನು ಮಾತ್ರ ಬಿಟ್ಟುಹೋಗಬೇಡ ಕಂಡಿಯಾ? ಆಗಾಗ್ಗೆ ನಿನ್ನ ಮುಖ ಚಂದ್ರವನ್ನು ನೋಡಿ ಈ ಕಾಮಸಂತಪ್ತನಾದ ಸಲೀಮನು ಜೀವ ಹಿಡ ಕೊಂಡು ಇರಬಲ್ಲನು. "

ಇನ್ನು ಹೆಚ್ಚಿಗೆ ಆಸ್ಪದವನ್ನು ಕೊಡುವದು ಒಳಿತಲ್ಲವೆಂದು ತಿಳಿದು " ಸಲೀಮಶಹಾ, ನಾನೆಷ್ಟಾದರೂ ಪರಸತಿಯು. ಪಾತಿವ್ರತ್ಯವನ್ನು ನಾನು ದಕ್ಷತೆಯಿಂದ ಕಾದುಕೊಂಡಿರುವಂಥ ನಿಶ್ಚಯದ ಸ್ತ್ರೀಯು. ನನ್ನ ಕರ್ತವ್ಯ ವನ್ನು ನಾನು ಮಾಡುತ್ತಿರುವಾಗ ಅನ್ಯರ ಸುಖದುಃಖಗಳನ್ನು ನಾನು ತಿಲಮಾತ್ರ ಲೆಕ್ಕಿಸುವವಳಲ್ಲ. ನೀವು 'ಪ್ರಿಯೆ' ಮುಂತಾದ ಅನುಚಿತವಾದ ಶಬ್ದಗಳಿಂದ ನನ್ನನ್ನು ಸಂಬೋಧಿಸಕೂಡದು." ಎಂದು ನಿಷ್ಠುರವಾಗಿ ನುಡಿದಳು.

" ಮಿಹಿರ್ಉನ್ನಿಸ್ಸಾ, ಮಶೀದದಲ್ಲಿ ಕುಳಿತ ವೃದ್ಧನಾದ ಮುಲ್ಲಾನು ಆಡತಕ್ಕ ಮಾತುಗಳಿವು! ವಿಲಾಸಿನಿ, ಸ್ತ್ರೀಪುರುಷರಲ್ಲಿ ಒಂದಾವರ್ತಿ ಹುಟ್ಟಿದ ನಿಜವಾದ ಪ್ರೇಮವನ್ನು ಸಾಮಾಜಿಕ ನಿಯಮಗಳಾಗಲಿ, ಬಾದಶಹರ ಕಟ್ಟಳೆಗಳಾಗಲಿ, ಕುರಾಣದ ವಚನಗಳಾಗಲಿ, ಪೈಗಂಬರರ ಸಾಮರ್ಥ್ಯವಾಗಲಿ ಅಳಿಸಿಹಾಕಲಾರವು. "

" ನಿಮಗೆ ನನ್ನ ಮನೋನಿಶ್ಚಯದ ಸಾಮರ್ಥ್ಯವು ಚನ್ನಾಗಿ ತಿಳಿದಿಲ್ಲ. ನಿಮ್ಮ ಮೇಲೆ ನನ್ನ ಪ್ರೇಮವು ನೆಲಿಸಿದೆ ಎಂದು ಕಲ್ಪಿಸಿದರೂ, ಅದನ್ನು ನನ್ನ ಪಾತಿವ್ರತ್ಯಕ್ಕೂ, ಕರ್ತವ್ಯಕ್ಕೂ ಅಡ್ಡಬರಕೂಡದಂತೆ ವಿಚಾರವೆಂಬ ದೃಢವಾದ ಶೃಂಖಲೆಯಿಂದ ಬಿಗಿದು ಕಟ್ಟಿಹಾಕಲು ನಾನು ಸಮರ್ಥಳು ಇದ್ದೇನೆ." ಎಂದು ಆರ್ದ್ರತೆಯಿಂದ ನುಡಿಯುತ್ತಿರುವ ಮಿಹಿರ್ ಉನ್ನಿಸ್ಸೆಯ

ವಿಚಾರಶೃಂಖಲೆಗಳು, ಬಿಗಿಬಿಗಿಯುತ್ತಿರುವಾಗಲೇ ಲಟಲಟನೆ ಮುರಿಯುತ್ತ ನಡೆದವೆಂಬಂತೆ ಅವಳಿಗೆ ಭಾಸವಾಯಿತು.

"ಇನ್‍ಕಾ ಅಲ್ಲಾ! ಇನ್‍ಕಾ ಅಲ್ಲಾ!! ಪ್ರಿಯೆ, ನಿನ್ನಂಥ ಸತ್ಯವತಿಯಾದ ಮಹಾತ್ಮಳನ್ನು, ಹಿಂದುಸ್ಥಾನದ ಚಕ್ರವರ್ತಿಯನ್ನಾಗಿ ಮಾಡಬೇಕೆಂದೇ ಖುದಾ ಪರವರ್ದಿಗಾರನು ಅಷ್ಟು ಮನಸ್ಸುಕೊಟ್ಟು ನಿರ್ಮಿಸಿದನು. ನೀನು ಆಗ್ರಹ ತೊಡಬೇಡ. ನನ್ನ ಮಾತು ಕೇಳು. ನನ್ನ ಪಟ್ಟದ ರಾಣಿಯಾಗಿ, ಇಹಲೋಕದ ಸಮಸ್ತವಾದ ಸುಖಗಳನ್ನು ಭೋಗಿಸಿ ಜಗದ್ವಿಖ್ಯಾತಳಾದ ನಾರೀಶಿರೋಮಣಿಯೆಂದು ಹೊಗಳಿಸಿಕೊಳ್ಳುವದು ಕಂಡಕಂಡವರಿಗೆ ಬಾರದು!"

"ಕಡೆಯ ಮಾತು ಹೇಳುತ್ತೇನೆ! ನಾನು ಮಹಮ್ಮದೀ ಧರ್ಮಶಾಸ್ತ್ರದ ಪ್ರಕಾರ ಶೇರ ಅಫಗಾನರ ಧರ್ಮಪತ್ನಿಯಾಗಿರುವೆನು. ನನ್ನ ಮೇಲೆ ಅಭಿಲಾಷೆ ಇಡುವದು ಪಾಪದ ಕೆಲಸವು. ಇನ್ನು ಈ ಸಂವಾದವೇ ಸಾಕು!"

"ಮೋಹಿನಿ, ಧರ್ಮಪತ್ನಿ-ಗಿರ್ಮಪತ್ನಿ ಮುಂತಾದ ವಿಚಾರಗಳು ಕಾಫರರಾದ ಹಿಂದೂ ಜನರವು. ನಮ್ಮ ಧರ್ಮದ ಪ್ರಕಾರ ಪತಿಪತ್ನೀಸಂಬಂಧವು ಕೇವಲ ಐಹಿಕವಾದ ಸುಖದ ಸಂಬಂಧವು. ತಲಾಕ್‍ದಿಂದ ನಾವು ಈ ಸಂಬಂಧವನ್ನು ಮುರಕೊಳ್ಳಬಲ್ಲೆವಷ್ಟೆ?"

"ತಲಾಕ್ ಕೊಡುವ ಅಧಿಕಾರವು. ಕೇವಲ ಪತಿಯಾದವರ ಸ್ವಾಧೀನದ ಮಾತು. ಹೆಂಗಸರಿಗೆ ಈ ಅಧಿಕಾರವಿಲ್ಲೆಂಬದನ್ನು ನೀವು ಮರೆತಿರೇನು?"

"ಶಾಬಾಸ್! ಪ್ರಿಯೇ, ಬಹು ಸಮರ್ಪಕವಾಗಿ ಮಾತಾಡಿದಿ. ನೀನು ನನಗೆ ಅನುಕೂಲೆಯಾದರೆ, ನಾನು ಶೇರ ಅಫಗಾನರ ಕಡೆಯಿಂದ ನಿನಗೆ ತಲಾಕ್ ಕೊಡಿಸುವೆನು."

"ಪುರುಷವ್ಯಾಘ್ರರಾದ ಶೇರ ಅಫಗಾನರು ತಲಾಕ್ ಕೊಡಲಿಕ್ಕೆ ಅವರಲ್ಲಿ ಅಭಿಮಾನವಿಲ್ಲೆಂದು ನೀವು ತಿಳಿದಿರುವಿರೇನು?"

"ಆ ಪುರುಷವ್ಯಾಘ್ರನಿಗೆ ನನ್ನ ಈ ಶಸ್ತ್ರದ ಒಂದೇ ಹೊಡೆತ ಸಾಕು!" ಎಂದು ಸಲೀಮನು ತನ್ನ ಖಡ್ಗವನ್ನು ಹಿಡಿದು ತೋರಿಸಿದನು.

“ ಓ ನಿಮ್ಮ ಶಸ್ತ್ರವೆ ! ಸಲೀಮಶಹಾ, ನೀವು ಬಾದಶಹರ ಮಕ್ಕಳಾದರೆ ಮುತ್ತುರತ್ನಗಳಿಂದ ಅಲಂಕೃತವಾದ ಸಿಂಹಾಸನವು ನಿಮ್ಮ ದಾದೀತು. ಪರಾಕ್ರಮವು ಮಾತ್ರ ಪಿತ್ರಾರ್ಜಿತವಾಗಿ ಬರಲಾರದು. ಹತ್ತು ಜನ ಸಲೀಮರಿಗೆ ಮೀರಿದ ಬಹದ್ದರರು ನನ್ನ ಪತಿಗಳವರು ! ” ಎಂದು ಮಿಹಿರೆಯು ತುಸು ಆವೇಶದಿಂದ ನುಡಿದಳು.

“ ಆಗಿ ಹೋಗಲಿ ಹಾಗಾದರೆ ! ಈಗಲೆ ನಾನು ನಿನ್ನನ್ನು ಬಲಾತ್ಕಾರ ದಿಂದ ವಶಮಾಡಿಕೊಳ್ಳುವೆನು. ಬರಲಿ, ನಿನ್ನ ಆ ಹುಲಿಯು ಎಲ್ಲಿದ್ದಾನೆ ನೋಡೋಣ ! ” ಎಂದು ಸಲೀಮನು ಉದ್ದಾಮನಾಗಿ ಎದ್ದು ನಿಂತನು.

“ ಖಬರ್‌ದಾರ್ ಸಲೀಮ್ ! ” ಎಂದು ಕ್ರೋಧವಶಳಾಗಿ ಮಿಹಿರ್ ಉನ್ನಿಸ್ಸೆಯು ಪ್ರೌಢಿಮೆಯಿಂದ ಎದ್ದು ನಿಂತು ಗದ್ದರಿಸಿ ನುಡಿದು ಸಲೀಮನ ಔದ್ಧತ್ಯದ ವ್ಯಾಪಾರವನ್ನು ನಿಷೇಧಿಸಿದಳು.

ಅದೇ ಕ್ಷಣವೇ ಜುಲೇಕೆಯೂ, ಶರೀಫೆಯೂ ತಮ್ಮತಮ್ಮ ಶಸ್ತ್ರಗಳನ್ನು ತೆಗೆದುಕೊಂಡು ಸಲೀಮನ ವ್ಯಾಪಾರಗಳನ್ನು ನಿರೀಕ್ಷಿಸುತ್ತ ನಿಂತರು.

ಸಮರಸಿಂಹನಾದ ರಾಣಾಪ್ರತಾಪಸಿಂಹನೊಡನೆ ಯುದ್ಧ ಮಾಡಿದ ವೀರನಾದ ಸಲೀಮನು ಈ ವ್ಯಾಘ್ರಿಣಿಯ ಗರ್ಜನೆಯನ್ನು ಕೇಳಿ ಮೇಷದಂತೆ ಗದಗದ ನಡುಗಿದನು. ಕಾರ್ಯದೋಷದ ಮೂಲಕವಾಗಿ ಪುರುಷನ ತೇಜಸ್ಸು ನಷ್ಟವಾಗುವದಲ್ಲವೆ! ಇಲ್ಲದಿದ್ದರೆ ಮೃಣಾಲಕೋಮಲಳಾದ ಆ ವಿಲಾಸಿನಿಯ ದರ್ಪವೇನು ! ಸಲೀಮನಂಥ ವೀರನು ಆ ದರ್ಪಕ್ಕೆ ಬಾಗುವದೇನು !

ಆ ದುಂದುಗಾರನು ಎದೆ ಕಳಕೊಂಡದ್ದು ಕಂಡು ಇನ್ನೇನು ಭಯ ವಿಲ್ಲೆಂದರಿತು ಮಿಹಿರ್ ಉನ್ನಿಸ್ಸೆಯು ಅವನನ್ನು ಕುರಿತು “ ರಾಜಪುತ್ರರೆ, ನಿಮ್ಮ ಅವಿಚಾರವನ್ನು ಕಂಡು ನನಗೆ ಖೇದವಾಗುತ್ತದೆ. ಅಕಬರ ಬಾದಶಹರಿದ್ದ ಸ್ಥಳ ಬಿಟ್ಟು ನೂರು ಹರದಾರಿಯ ಮೇಲೆ ಕುಳಿತು ಯಾವ ನಾದರೂ ಕುಕರ್ಮವನ್ನು ಮಾಡುತ್ತಿದ್ದರೆ ಉಗ್ರಪ್ರತಾಪಿಗಳಾದ ಆ ಬಾದಶಹರು ಜಿತಾಬ್ರಹ್ಮೇತಿಯಂತೆ ಆಗಲೆ ಆ ಪಾಪಿಯ ಎದೆಯ ಮೇಲೆ ಕಾಲು ಮೆಟ್ಟಿ ತುಳಿದುಹಾಕುವರು. ಹೀಗಿರಲು ಸಮೀಪದಲ್ಲಿಯ ಮಂದಿರ ದಲ್ಲಿಯೇ ಕಾಳಸರ್ಪನಂತೆ ಆ ಬಾದಶಹನು ಜಾಗರೂಕನಾಗಿ ಕುಳಿತಿರಲು ಇಂಥ ಅವಿಚಾರದ ಕೆಲಸಕ್ಕೆ ನೀವು ಪ್ರವೃತ್ತರಾಗಬಹುದೆ ? ”

ಸಲೀಮನು ವಿಚಾರಸಂಮೂಢನಾಗಿ ಮಿಹಿರ್ ಉನ್ನಿಸ್ಸೆಯು ಹೇಳುವ ಮಾತು ಕೇಳಿ ಏನೂ ಮಾತಾಡದೆ ಸುಮ್ಮನೆ ಕುಳಿತನು. ಅವನ ಹೃದಯ ಸಂಚಾರಿಣಿಯಾದ ಆ ಸುಂದರಿಯು ಸಲೀಮನ ವ್ಯಾಕುಲತೆಯನ್ನು ಕಂಡು ವಿಷಾದವನ್ನು ತಳೆದವಳಾಗಿ ತಾನಾದರೂ ಮಾತನಾಡದೆ ಸುಮ್ಮನೆ ಇದ್ದಳು. ತುಸು ಹೊತ್ತಿನ ಮೇಲೆ ಸಲೀಮನು ಆ ಮಂದಿರದ ಕಿಟಿಕೆಯಲ್ಲಿ ನಿಂತು ಕೊಂಡು ಕೆಳಗೆ ಹರಿಯುತ್ತಿರುವ ಯಮುನಾನದಿಯ ಪ್ರವಾಹವನ್ನು ನಿರೀಕ್ಷಿಸುತ್ತಿರುವವನಂತೆ ಕಂಡನು. ಸಂಗಡಲೇ ಅವನು ಹಿಂತಿರುಗಿ ಮಿಹಿರ್ ಉನ್ನಿಸ್ಸೆಯನ್ನು ನೋಡಿ "ವಂಚಕಳೆ, ಆ ಕಿಟಿಕೆಯಲ್ಲಿ ತುಸು ಮೋರೆ ಹಾಕಿ ನೋಡಬಾರದೆ! ನದಿಯಲ್ಲಿ ಕಾಣುವ ನಾವೆಗಳಲ್ಲಿ ಕುಳಿತ ನೂರಾರು ಜನ ನನ್ನ ಭಟರು ನಿನ್ನನ್ನು ಇಲ್ಲಿಂದ ಎತ್ತಿಕೊಂಡು ಹೋಗಲಿಕ್ಕೆ ಸಿದ್ಧರಾಗಿ ನಿಂತಿದ್ದಾರೆ. ಆಕೋ! ಆ ಸಿಳ್ಳು ಕೇಳಿದಿಯಾ? ಈ ಮಂದಿರವನ್ನು ನನ್ನ ಭಟರು ಸುತ್ತುಗಟ್ಟಿದರೆಂದು ಅದು ಸೂಚಿಸುತ್ತದೆ. ಇನ್ನು ನೀನು ನನಗೆ ಅನುಕೂಲೆಯಾದರೂ ನನ್ನ ವಶಳೇ; ಪ್ರತಿಕೂಲಳಾದರೂ ನನ್ನ ವಶಳೇ. ಹೇಗೆ ವಶಳಾಗುವಿಯೆಂಬದನ್ನು ಹೇಳು." ಎಂದು ಸಲೀಮನು ದುರುಳತನದ ನಗೆಯನ್ನು ತಳೆದು ಮಿಹಿರೆಯನ್ನು ಜರಿದು ನುಡಿದನು.

ಮತ್ತೊಂದು ಕಿಟಿಕೆಯಲ್ಲಿ ನಿಂತು ನೋಡುತ್ತಿದ್ದ ಮಿಹಿರ್ ಉನ್ನಿಸ್ಸೆಯು ಸಲೀಮನ ಮಾತು ಕೇಳಿ ಹೆದರಿ ಗದಗದ ನಡುಗಿದಳು. ನೀಲೋತ್ಪಲ ದಂತಿರುವ ಅವಳ ಕಣ್ಣುಗಳಲ್ಲಿ ನೀರು ತುಂಬಿ ಬಂದು ಅಶ್ರುಬಿಂದುಗಳು ಟಪಟಪನೆ ಯಮುನಾನದಿಯ ಪ್ರವಾಹದಲ್ಲಿ ಉದುರಿದವು. ಅಷ್ಟರಲ್ಲಿಯೇ ಅವಳು ಮತ್ತೇನೋ ಕಂಡು ಧೈರ್ಯವನ್ನು ತಾಳಿ ಉದ್ರೇಕದಿಂದ "ಸುಲ್ತಾನಸಾಹೇಬ, ನೀವೇ ಆ ನಿಮ್ಮ ಕಿಟಿಕೆಯಲ್ಲಿ ನಿಂತು ಚನ್ನಾಗಿ ನಿರೀಕ್ಷಿಸಿ ನೋಡಿರಿ! ನದಿಯಗುಂಟ ಉತ್ತರದಿಂದಲೂ, ದಕ್ಷಿಣದಿಂದಲೂ ಬೇರೆ ನಾವೆಗಳು ಒಳ್ಳೇ ರಭಸದಿಂದ ಬರುತ್ತಿರುವವು. ಅವು ನಿಮ್ಮವರ ನಾವೆಗಳೋ ನಿಮ್ಮ ಸಮಾಚಾರಕ್ಕಾಗಿ ಬಂದ ಬಾದಶಹರ ನಾವೆಗಳೋ ನೋಡಿಕೊಳ್ಳಿರಿ. ನದಿಯ ಆಚೆಯ ದಂಡೆಗೆ ತುಸು ಲಕ್ಷ್ಯಕೊಟ್ಟು ನೋಡಿರಿ. ನೂರಾರು ಜನ ರಾವುತರು ಶಸ್ತ್ರಪಾಣಿಗಳಾಗಿ ಧಾವಿಸುತ್ತ ನದಿಯ ಕಡೆಗೆ ಬರುತ್ತಿರುವರು. ಇನ್ನು ನೀವೇ ಹೇಳಿರಿ. ನಿಮ್ಮ ಸಾಹಸದ ಕೃತ್ಯಕ್ಕಾಗಿ

ನಿಮಗೇನು ಪ್ರಾಯಶ್ಚಿತ್ತವಾಗುವದೆಂಬದು ?" ಎಂದು ನುಡಿದು ಆ ಧೀರೆಯು ಸೆಟೆಯಿಂದ ನಿಂತುಕೊಂಡಳು.

ಮಿಹಿರ್‌ಉನ್ನಿಸ್ಸೆಯು ಹೇಳಿದ್ದೆಲ್ಲ ನಿಜವಾದ ಸಂಗತಿಯೇ ಆಗಿತ್ತು. ತನ್ನ ಬಲವನ್ನು ಮುರಿಯುವದಕ್ಕಾಗಿ ಪ್ರತಿಬಲವು ಸಿದ್ಧವಾಗಿರುವದನ್ನು ಕಂಡು ಸಲೀಮನ ಮೋರೆಯ ದ್ರವವೇ ಹಾರಿತು. ಭೀತಿಯಿಂದ ಅವನ ಎದೆಯೊಡೆದು ನೀರಾಯಿತು. "ಇದೆಲ್ಲ ನಮ್ಮ ತಂದೆಯ ಕೃತಿಯು! ಅವನ ಬಳಿಯಲ್ಲಿ ಕರ್ಣಪಿಶಾಚವಿರುವದೋ, ಅವನೇನು ಪ್ರತ್ಯಕ್ಷ ಸೈತಾನನೋ ಕಾಣೆನು!" ಎಂದು ತನ್ನಲ್ಲಿ ತಾನೇ ಗುಣಗುಡುತ್ತ ಕಿಟಿಕೆಯ ಹೊಸ್ತಿಲಕ್ಕೆ ತನ್ನ ಗದ್ದವನ್ನಾನಿಸಿಕೊಂಡು ಹುಚ್ಚನ ಹಾಗೆ ನೋಡುತ್ತ ನಿಂತನು.

ಅಷ್ಟರಲ್ಲಿ ಸೋಪಾನದ ಮಾರ್ಗದಲ್ಲಿ ಜನರ ಗುದುಮುರಿಗೆಯ ಸಪ್ಪಳವಾಯಿತು. ಸರಕಾರದ ಸಿಪಾಯರಿಗೂ, ಸಲೀಮನ ಪುಂಡಾಳುಗಳಿಗೂ ಕದನವಾಗುತ್ತಿರುವದೆಂಬದು ಸಲೀಮನಿಗೂ, ಮಿಹಿರ್‌ಉನ್ನಿಸ್ಸೆಗೂ ಕೂಡಿಯೇ ತಿಳಿದು ಬಂದಿತು. ಆಗ ಮಿಹಿರ್‌ಉನ್ನಿಸ್ಸೆಯು ನಗುತ್ತ "ಶಾಹಾಜಾದಾ ಸಾಹೇಬ, ನನ್ನ ಮೇಲೆ ಬಲಾತ್ಕಾರ ಮಾಡಬರುವಿರಲ್ಲ ? ಇಲ್ಲಿ ನೋಡಿರಿ, ನಮ್ಮ ಸುಕುಮಾರಿಯಾದ ಜುಲೇಕೆಯೂ ಅವಳ ಅಕ್ಕನೂ ಖಡ್ಗಪಾಣಿಗಳಾಗಿ ನಿಮ್ಮ ಸಮಾಚಾರಕ್ಕಾಗಿ ನಿಂತಿರುವರು." ಎಂದು ನುಡಿದಳು.

ಹತಾಶನಾದ ಸಲೀಮನು ಮಿಹಿರ್‌ಉನ್ನಿಸ್ಸೆಯ ಮುಂದೆ ಮೊಳಕಾಲೂರಿ ನಿಂತು "ಪ್ರಿಯೆ, ಇನ್ನು ಈ ಸಲೀಮನ ಅವತಾರ ಮುಗಿಯಿತು. ಯಾವ ಪ್ರಿಯತಮೆಯನ್ನು ನನ್ನ ಅರ್ಧಾಂಗಿಯನ್ನಾಗಿ ಮಾಡಿಕೊಂಡು ದಿಲ್ಲಿಯ ಸಿಂಹಾಸನವನ್ನು ಅಲಂಕರಿಸಬೇಕೆಂದು ನಾನಿದನ್ನೆಲ್ಲ ಮಾಡಿದೆನೋ ಅದೇ ಪ್ರಿಯತಮೆಗೆ ನಾನು ಬೇಡಾದ ಮೇಲೆ ನನಗಿನ್ನು ರಾಜ್ಯವೇಕೆ ? ವೈಭವವೇಕೆ ? ನಾನಿನ್ನು ಫಕೀರನಾಗಿ ಅಬೂಪಹಾಡಕ್ಕೆ ಹೋಗಿ "ಅಲ್ಲಾ ! ಅಲ್ಲಾ ! ಇಲ್ಲಿಲ್ಲಾ !" ಎಂದು ಕೂಗುತ್ತ ಹುಚ್ಚನ ಹಾಗೆ ತಿರುಗಾಡಿ ಸತ್ತುಹೋಗುವೆನು. ನನ್ನ ಸುಖದಲ್ಲಿ ಮಣ್ಣು ಕಲಿಸಿದ ಬಾದಶಹರೇ ಕಲ್ಪಾಂತರದ ವರೆಗೆ ಈ ರಾಜ್ಯವನ್ನಾಳಲಿ! ನನಗಿನ್ನು ಅಪ್ಪಣೆ ಕೊಡು." ಎಂದು ನುಡಿದು ಕಣ್ಣಿಗೆ ನೀರು ತಂದನು.

ಮಿಹಿರ್‌ಉನ್ನಿಸ್ಸೆಯು ಎಷ್ಟಾದರೂ ಸ್ತ್ರೀಯು. ಮೇಲಾಗಿ ಅವಳು

ಸಲೀಮನಲ್ಲಿ ಪ್ರೇಮಾಸಕ್ತಳಾದವಳು. ಆ ರಾಜಕುಮಾರನು ತನ್ನ ಮುಂದೆ ಮೊಳಕಾಲೂರಿ ದೀನವಾಣಿಯಿಂದ ನುಡಿದ ಮಾತು ಕೇಳಿ ಅವಳು ಕಳವಳಗೊಂಡಳು. ಅವಳ ಸುಮನೋಹರವಾದ ಕಪೋಲಗಳ ಕಾಂತಿಯಿಂದ ಹೊಳೆಯುತ್ತಿರುವ ಅಶ್ರುಬಿಂದುಗಳು ಉದುರುತ್ತಿರುವದು ಸೂಕ್ಷ್ಮವಾದ ಅವಳ ಮುಖಾವರಣದೊಳಗಿಂದ ಕೂಡ ಸ್ಪಷ್ಟವಾಗಿ ಕಾಣುತ್ತಿತ್ತು. ಅವಳು ವಿನಯದಿಂದಲೂ ಪ್ರೇಮಪೂರ್ವಕವಾಗಿಯೂ ನುಡಿದದ್ದು: "ಸಲೀಮ್, ನೀವು ನನ್ನ ಪ್ರೇಮವನ್ನು ಕಳೆದುಕೊಂಡವರಾದ್ದರಿಂದ ನಿಮ್ಮೊಡನೆ ನಿಷ್ಠುರವಾಗಿ ಮಾತಾಡಬೇಕಾದರೆ ನನಗೆ ವಿಷಾದವಾಗುತ್ತದೆ. ಆದರೆ ಏನು ಮಾಡುವದು? ವಿವಾಹಿತಳಾದ ಸ್ತ್ರೀಯು ಮರ್ಯಾದೆಯನ್ನು ನಾನೆಂದಿಗೂ ಉಲ್ಲಂಘಿಸಲಾರೆನು. ನಾನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ; ನೀವು ಈ ಹುಚ್ಚುತನವನ್ನು ಬಿಟ್ಟುಬಿಡಿರಿ. ನೀವು ವೈಭವದಿಂದ ರಾಜ್ಯವನ್ನಾಳುವದನ್ನು ಕೇಳಿ ನಾನು ದೂರ ದೇಶದಲ್ಲಿ ಇದ್ದರೂ ಆನಂದಪಡುವೆನು. ಸಲಾಮ್! ನೀವಿನ್ನು ನಿಮ್ಮ ರಾಣೀವಾಸದಲ್ಲಿ ಸೇರಿಕೊಳ್ಳಿರಿ. ನೋಡಿದಿರಾ, ರಾಖಿಯಾ ಬೇಗಮ್ಮರವರ ದಾಸಿಯು ನನ್ನನ್ನು ಕರೆಯುವದಕ್ಕಾಗಿ ಹೊರಗೆ ಬಂದು ನಿಂತಿದ್ದಾಳೆ."

"ಪ್ರಿಯೇ, ನಿನ್ನ ಮನಸ್ಸಿಗೆ ಬಂದರೆ ಹೀಗೆಯೇ ಆಗಲಿ. ನನ್ನದೊಂದು ಕಡೆಯ ಪ್ರಾರ್ಥನೆಯನ್ನು ಮನ್ನಿಸುವೆಯಾ?"

"ಏನದು?"

"ಚಂದ್ರಮಂಡಲವನ್ನು ಆಡರಿರುವ ಮತ್ಸರಿಯಾದ ರಾಹುವಿನಂತೆ ಅಭದ್ರವಾಗಿ ಕಾಣುವ ಆ ಆವರಣವನ್ನು ಹರಿದೊಗೆದು ಆನಂದದಾಯಕವಾದ ನಿನ್ನ ಮುಖಮಂಡಲವನ್ನು ಒಂದಾವರ್ತಿ ನನಗೆ ತೋರಿದಿಯಾದರೆ ಅದರ ಸ್ಮರಣದಿಂದಲೇ ನಾನು ಸಕಲ ತಾಪಗಳನ್ನು ಮರೆತು ಹೇಗಾದರೂ ಬದುಕಿಕೊಂಡಿರುವೆನು." ಎಂದು ಸಲೀಮನು ಔತ್ಸುಕ್ಯದಿಂದ ತನ್ನ ಬೊಗಸೆಯನ್ನೊಡ್ಡಿ ಬೇಡಿಕೊಂಡನು.

ಮಿಹಿರ್‌ಉನ್ನಿಸ್ಸೆಯು ಪ್ರೇಮಪರವಶಳಾಗಿ ತನ್ನ ಕೋಮಲವಾದ ಕರಾಂಗುಲಿಗಳಿಂದ ಚಿತ್ರಮಯವಾಗಿರುವ ಆ ಮುಖಾವರಣವನ್ನು ಲೀಲೆಯಿಂದ ಹಿಂದಕ್ಕೆ ನೂಕಿದಳು. ಶರದಭ್ರದಿಂದ ಮುಕ್ತವಾದ ಚಂದ್ರಬಿಂಬದಂತೆ ವಿರಾಜಿಸುತ್ತಿರುವ ಆ ಲೋಕೈಕಸುಂದರಿಯ ಮಂದಸ್ಮಿತವಾದ ಮುಖ

ಮಂಡಲವು ಜಗ್ಗನೆ ಪ್ರಕಟವಾಗಲು ಪರಿಚಯದವನಾದ ಸಲೀಮನು ಕೂಡ ಭ್ರಾಂತಿ ಬಡೆದು ನಿಂತನು. ಇನ್ನುಳಿದವರ ಗತಿ ಏನಾಗಬಹುದು ?

ನೀತಿವಂತರೆಂಬವರು ಬಾಯಿಯಿಂದ ಬೇಕಾದಷ್ಟು ಜಂಬದ ಮಾತು ಗಳನ್ನು ಬೆಳೆಸಿ ಹೇಳಲಿ. ಆ ಜಗನ್ಮೋಹಿನಿಯ ಅಪ್ರತಿಮವಾದ ಲಾವಣ್ಯ ರಾಶಿಯನ್ನು ನೋಡಿದ ಕೂಡಲೆ ಆ ದಾಂಭಿಕರ ಎದೆಗಳು ಶಕಲಶಕಲವಾಗಿ ಒಡೆದು ಹೋಗಬಹುದಾಗಿತ್ತು. 'ಯುವತೀನಾಂ ಚ ಲೀಲಯಾ । ಯಸ್ಯ ನ ದ್ರವತೇ ಹೃದಯಂ ಸ ಮೇಷ್ಟುಕ್ತೋऽಥವಾ ಪಶುಃ ' ಎಂಬ ನುಡಿಯನ್ನು ಕವಿಯು ಬೇರೆ ಸುಂದರಿಯರ ವಿಷಯವಾಗಿ ಹೇಳಿದನು. ಅವನು ಮಿಹರ್‌ಉನ್ನಿಸ್ಸೆಯನ್ನು ನೋಡಿದ್ದ ನಾದರೆ ತನ್ನ ಕವನದಲ್ಲಿ ಸ್ತಂಭಃ ಎಂಬ ಪದವನ್ನೇ ಇಡುತ್ತಿದ್ದಿಲ್ಲ. ಈ ರೂಪವನ್ನು ವರ್ಣಿಸಬೇಕೆಂದು ಹವಣಿಸಿದ ಆ ಕಾಲದ ಚಿತ್ರಕಾರರು ವ್ಯರ್ಥವಾಗಿ ಬಣ್ಣಗಳನ್ನು ಹಾಳುಮಾಡಿಕೊಂಡರು. ಕವಿಗಳು ಗಡ್ಡೆ ಗಡ್ಡೆ ಕಾಗದಗಳನ್ನು ಬರೆಬರೆದು ಹರಿದು ಹಾಕಿದರು.

ಚಂದ್ರಮಂಡಲವನ್ನು ಹೀಯಾಳಿಸುವಂಥ ಅವಳ ಮನೋಹರವಾದ ಮುಖವೂ ಆ ವಿಶಾಲವಾದ ನೇತ್ರಗಳ ವಿಲಕ್ಷಣವಾದ ಪ್ರಭೆಯೂ, ಮನ್ಮಥನ ಬಿಲ್ಲನ್ನು ಹೀಯಾಳಿಸುವಂಥ ಅವಳ ಭ್ರುಕುಟಿಯ ಶೋಭೆಯೂ, ಕಮನೀಯ ವಾಗಿರುವ ಅವಳ ಕಪೋಲಗಳ ಕಾಂತಿಯೂ, ನೋಡಿದರೆ ಬಾಯಿಗೆ ನೀರು ಬರುವಂಥ ಅವಳ ಬಿಂಬಾಧರದ ರಾಗವೂ ಅಮೃತಸೇಚನವನ್ನೇ ಮಾಡು ತ್ತಿರುವದೋ ಎಂಬಂತೆ ಆಲ್ಹಾದವನ್ನೀಯುವ ಅವಳ ಮೃದುಹಾಸವೂ ವರ್ಣನಾತೀತವಾದ ವಿಷಯಗಳೆಂಬ ಲೇಖವೇ ನೂರಜಹಾನಳ ವರ್ಣ- ನಾತ್ಮಕವಾದ ಉಪಲಬ್ಧ ಕಾವ್ಯವು. ಉಳಿದವುಗಳೆಲ್ಲ ರಗಳೆಗಳೇ ! ಮಿಹಿರ್ ಉನ್ನಿಸ್ಸೆಯಂಥ ನಿರುಪಮಳಾದ ಲಾವಣ್ಯವತಿಯನ್ನು ಪುನಃ ಪುನಃ ನಿರ್ಮಿ ಸುವದು ಬ್ರಹ್ಮದೇವರಿಗೆ ಸುಸಾಧ್ಯವಾದ ಮಾತಾಗಿದ್ದರೆ ಕುರೂಪಿಗಳಾದ ಹೆಂಗಸರನ್ನು ನಾವು ಕಾಣುತ್ತಲೇ ಇದ್ದಿಲ್ಲ. ಅಂಥ ರೂಪವನ್ನು ತೊಟ್ಟು ಬಂದವಳಾದ ನೂರಜಹಾನಳು ಹೋಗುವಾಗ ಅದನ್ನು ಕಟ್ಟಿಕೊಂಡು ಹೊರಟು ಹೋದಳು ! ನೋಡಿದ ಪುಣ್ಯವಂತರು ನೋಡಿದರು ; ಕಾಣದ ಪಾಪಿಗಳು ಕಾಣಲೇ ಇಲ್ಲ ! ಇನ್ನೇನು ಅಂಥ ಚೆಲುವೆಯು ಹುಟ್ಟಿಬರ ಬೇಕಾಗಿಲ್ಲ ; ಯಾರಾದರೂ ಕಾಣಬೇಕಾಗಿಲ್ಲ !

## ಇಪ್ಪತ್ತಾರನೆಯ ಅಧ್ಯಾಯ

## ಮುಸುಕು ತೆರೆಯಿತು

ಸಲೀಮನು ಹೊರಟು ಹೋದ ಬಳಿಕ ಜುಲೇಕೆ ಶರೀಫೆಯರು ಆ ಸಮಯದಲ್ಲಿ ತನಗೆ ಮಾಡಿದ ಉಪಕಾರಗಳನ್ನು ನೆನೆದು ಮಿಹಿರ್ ಉನ್ನಿಸ್ಸೆಯು ಅವರನ್ನು ಕೊಂಡಾಡಿದಳು.

" ಬೇಗಮ್‌ಸಾಹೇಬ, ನನ್ನ ಉಪಕಾರವೆಷ್ಟರದು. ಹೊಸಬಳಾದ ಈ ನನ್ನ ಅಕ್ಕನು ಕೇವಲ ಪರೋಪಕಾರದ ಬುದ್ಧಿಯಿಂದ ನಿಮ್ಮ ಸಂರಕ್ಷಣಾರ್ಥವಾಗಿ ಬಂದಿರುವಳು. ಬೇಕಾದರೆ ಆವಳ ಉಪಕಾರವನ್ನು ನೀವು ನೆನಿಸಿರಿ " ಎಂದು ಹೇಳಿ ಜುಲೇಕೆಯು ನರೇಂದ್ರನ ಮುಖವನ್ನು ನೋಡಿ ಯಥೇಷ್ಟವಾಗಿ ನಕ್ಕಳು.

"ಜುಲೇಕಾ, ಚೇಷ್ಟೆಯ ಮಾತು ಬೇಡ. ಆ ಸರದಾರರ ಮೈಮೇಲಿನ ಅಮಂಗಲವಾದ ಸ್ತ್ರೀವೇಷವನ್ನು ತೆಗೆ. ಅವರಿಗೆ ಉಚಿತವಾದ ಸನ್ಮಾನವನ್ನು ನಾನು ಮಾಡತಕ್ಕವಳು " ಎಂದು ಮಿಹಿರ್‌ಉನ್ನಿಸ್ಸೆಯು ಸ್ತ್ರೀವೇಷ ಧಾರಿಯಾದ ನರೇಂದ್ರನನ್ನು ನೋಡಿ ನುಡಿದಳು.

ನರೇಂದ್ರನು ಮರೆಗೆ ಹೋಗಿ ಜುಲೇಕೆಯ ಸಹಾಯದಿಂದ ಸ್ತ್ರೀವೇಷ ವನ್ನು ತೆಗೆದೊಗೆದು ತನ್ನ ನಿಜವಾದ ಪೋಷಾಕು ಸಮಮಾಡಿಕೊಂಡು ಮಿಹಿರ್‌ಉನ್ನಿಸ್ಸೆಯ ಮುಂದೆ ಬಂದು ನಿಂತುಕೊಂಡನು. ನಾಯಬ್ ಸರಲಷ್ಕರರ ಪೋಷಾಕು ತೊಟ್ಟುಕೊಂಡು ತನ್ನೆದುರಿಗೆ ನಿಂತಿರುವ ನರೇಂದ್ರನ ತೇಜಃಪುಂಜವಾದ ರೂಪವನ್ನು ಕಂಡು ಆ ವಿಲಾಸಿನಿಯು ಲಜ್ಜಾವನತ ಮುಖಿಯಾಗಿ ತನ್ನ ಮೃದುಸ್ಮಿತವಾದ ಮುಖವನ್ನು ಮತ್ತೆ ಬುರಖೆಯಿಂದ ತುಸು ಮುಚ್ಚಿಕೊಂಡಳು. ಬಳಿಕವಳು ಮಂಜುಲವಾದ ವಾಣಿಯಿಂದ " ಜುಲೇಕಾ, ಈ ತರುಣರಾದ ಸರದಾರರ ಹೆಸರೇನು ? " ಎಂದು ನಕ್ಕು ಕೇಳಿದಳು.

" ಬೇಗಮ್‌ಸಾಹೇಬ, ಪರಾಕ್ರಮಶಾಲಿಗಳಾದ ಈ ವೀರರ ಹೆಸರು...." ಎಂದು ತಡೆದು, ನರೇಂದ್ರನನ್ನು ಕುರಿತು " ಅಕ್ಕಾ, ನಿನ್ನ ಹೆಸರೇನು ? " ಎಂದು ಒಯ್ಯಾರದಿಂದ ನಗುತ್ತ ಕೇಳಿದಳು.

ನರೇಂದ್ರನೂ ವಿನೋದದಿಂದ ನಕ್ಕು "ಬೇಗಮ್‌ಸಾಹೇಬ, ನನ್ನ ಹೆಸರು ನರೇಂದ್ರನಾಥರಾಯ್" ಎಂದು ಮಿಹಿರೆಗೆ ಹೇಳಿದನು.

"ಓಹೋ! ಲಾಹೋರ ಪ್ರಾಂತದಲ್ಲಿ ಅಮೀರಖಾನನ ಬಂಡು ಮುರಿದ ವೀರಮಣಿಗಳು ನೀವೇ ಏನು?" ಎಂದು ಮಿಹಿರ್‌ಉನ್ನಿಸ್ಸೆಯು ಆದರದಿಂದ ನರೇಂದ್ರನಿಗೆ ಪ್ರಣಾಮಮಾಡಿ ಕೇಳಿದಳು.

ನರೇಂದ್ರನು ಎಡಗೈಯಲ್ಲಿ ಖಡ್ಗದ ಒರೆಯನ್ನೂ, ಬಲಗೈಯಲ್ಲಿ ಹಿಡಿಕೆಯನ್ನೂ ಹಿಡುಕೊಂಡು ಆ ಖಡ್ಗವನ್ನು ಸರಿಸ್ಯಾಡಿ ಆಡುತ್ತ ಮುಗುಳು ನಗೆ ನಕ್ಕು "ಅಮೀರಖಾನನ ಬಂಡು ಮುರಿಯಲಿಕ್ಕೆ ಮಾನಸಿಂಹರಾಜರು ಪಂಜಾಬಕ್ಕೆ ಹೋದಾಗ ಅವರ ಸಂಗಡ ನಾನೂ ಇದ್ದೆನು." ಎಂದು ಹೇಳಿದನು.

"ಜುಲೇಕಾ, ಈ ಪರಾಕ್ರಮಶಾಲಿಗಳು ಅಮೀರಖಾನನಂಥ ಪ್ರಚಂಡ ನಾದ ಬಂಡುಗಾರರನ್ನು ಸಂಹರಿಸಿದ್ದರಿಂದಲೇ ಪಂಜಾಬದಲ್ಲಿಯ ಬಂಡು ಮುರಿಯಿತೆಂದು ಸ್ವತಃ ಮಾನಸಿಂಹಜೀಯವರೇ ಬಾದಶಹರವರಿಗೆ ತಿಳಿಸಿದ್ದರಿಂದ ಬಾದಶಹರು ಇವರನ್ನು ಬಹುಪರಿಯಾಗಿ ಕೊಂಡಾಡಿದರೆಂದು ನಮ್ಮ ಯಜಮಾನರು ನನಗೆ ಹೇಳಿದ್ದಾರೆ. ಆತ್ಮಶ್ಲಾಘನಕ್ಕೆ ಅಂಜಿ ಇವರು ಹೀಗೆ ಹೇಳಿದರೇನಾಯಿತು?" ಎಂದು ಜುಲೇಕೆಯನ್ನು ಕುರಿತು ಮಾತಾಡುತ್ತಿರುವ ಮಿಹಿರ್‌ಉನ್ನಿಸ್ಸೆಯು ನರೇಂದ್ರನ ಗಂಭೀರವಾದ ಮುಖವನ್ನು ಕಣ್ಣುಬಿಟ್ಟು ನೋಡುತ್ತಲಿದ್ದಳು.

"ಇವರ ಶೌರ್ಯಕ್ಕೆ ಮೆಚ್ಚಿದವರಾಗಿಯೇ ಮಾನಸಿಂಹರಾಜರು ಅಂಬರದ ಬಾದಶಾಹಿಣಿಯವರಿಗೆ ಹೇಳಿ ಅವರ ಅತಿಥಿಮಂದಿರದಲ್ಲಿ ಇವರನ್ನು ತಂದಿರಿಸಿದರು." ಎಂದು ಜುಲೇಕೆಯು ಹೇಳಿದಳು.

"ನರೇಂದ್ರನಾಥರಾಯ್, ನಮ್ಮ ಜುಲೇಕೆಯು ಗಾಯವನ್ನು ಹೊಂದಿದಂಥ ವೀರರ ಆರೈಕೆ ಮಾಡುವದರಲ್ಲಿ ಬಲು ಜಾಣೆಯು. ಇವಳ ಆರೈಕೆಯ ಮೂಲಕವಾಗಿಯೇ ನಿಮಗೆ ಒಳಿತಾಯಿತೆಂದು ನಾನು ಕೇಳಿದ್ದೇನೆ." ಎಂದು ಮಿಹಿರ್‌ಉನ್ನಿಸ್ಸೆಯು ಜುಲೇಕೆಯ ಮುಖವನ್ನು ನೋಡುತ್ತ ಹೇಳಿದಳು.

"ಈ ಸುಚರಿತೆಯ ಆರೈಕೆಯಿಂದ ನನಗೆ ಹಿತವಾದಷ್ಟೇ ಇವಳ

ವಿನೋದಮಯವಾದ ಭಾಷಣಗಳನ್ನು ಕೇಳಿಯೂ ನಾನು ಉತ್ಸಾಹವನ್ನು ತಳೆದೆನು. ಈ ವಿನೋದಿನಿಯ ಮಾತುಗಳಲ್ಲಿ ಮಂತ್ರಸಾಮರ್ಥ್ಯವಿರುವದೆಂದು ಹೇಳಬಹುದು." ಎಂದು ನರೇಂದ್ರನು ಅವನತಮುಖಿಯಾದ ಜುಲೇಕೆಯನ್ನು ನೋಡುತ್ತ ನುಡಿದನು.

"ಹಾಃ! ಹಾಃ! ಹಾಃ!" ಎಂದು ಮಿಹಿರ್‌ಉನ್ನಿಸ್ಸೆಯು ನಕ್ಕು "ನರೇಂದ್ರನಾಥ, ಬಲು ಎಚ್ಚರಿಕೆ ಕಂಡಿರಾ! ಈ ಮಾಟಗಾರತಿಯು ನಿಮಗೆ ಮತ್ತೇನಾದರೂ ಮಾಡುವಳು." ಎಂದು ನುಡಿದಳು.

ಈ ವಿನೋದದ ಮಾತು ಕೇಳಿ ಜುಲೇಕೆಗೆ ಬಲವತ್ತರವಾದ ನಾಚಿಕೆ ಬಂದು ಆವಳು ಕೆಳಗೆ ನೋಡುತ್ತ ತನ್ನ ಕಾಲುಂಗುಷ್ಟದಿಂದ ನೆಲವನ್ನು ಗೀಚುತ್ತ ನಿಂತಳು. ಅವಳ ಮನೋಹರವಾದ ಮುಖವು ಲಜ್ಜೆಯಿಂದ ಕೆಂಪಗಾಗಿ ಬಹು ರಮಣೀಯವಾಗಿ ತೋರಿತು. ಮಿಹಿರ್‌ಉನ್ನಿಸ್ಸೆಯು ಆವಳ ಸ್ಥಿತಿಯನ್ನು ಕಂಡು "ಜುಲೇಕಾ, ಹೆಂಗಸರು ಹೆಂಗಸರಾಡಿದ ಮಾತಿಗೆ ಹೀಗೆ ನಾಚಿಕೊಳ್ಳಬಹುದೆ? ವೀರರ ಗಾಯಗಳನ್ನು ಕಟ್ಟಿ ಅವರ ಆರೈಕೆ ಮಾಡುವ ಭಾಗ್ಯವು ಕಂಡಕಂಡವರಿಗೆ ದೊರಕುವದೆ?" ಎಂದು ನುಡಿದಳು.

"ಪರಾಕ್ರಮಶಾಲಿಗಳಾದ ಶೇರ ಅಫಗಾನರ ಅರ್ಧಾಂಗಿಯಾದವರು ಇಂಥ ಅಭಿಪ್ರಾಯವನ್ನು ತಳೆದಿರುವದು ಸಕಲವೀರರ ಭಾಗ್ಯವೇ!" ಎಂದು ನರೇಂದ್ರನು ಮೆಲ್ಲಾಯುದ್ದು ನುಡಿದನು.

"ವೀರರು ವೀರರ ಅಭಿಮಾನಿಗಳೇ. ನೀವು ನಮ್ಮ ಯಜಮಾನರ ವಿಷಯವಾಗಿ ಆದರದಿಂದ ಮಾತಾಡಿದ್ದು ಕೇಳಿ ನನಗೆ ಸಂತೋಷವಾಯಿತು."

"ಸಮರವ್ಯಾಘ್ರರಾದ ಶೇರ ಅಫಗಾನರ ಅಭಿಮಾನವು ಪ್ರತ್ಯಕ್ಷ ಬಾದಶಹರಿಗೇ ಇರುವದರಿಂದಲೇ ಅವರು ಆ ವೀರಮಣಿಗೆ ಇಂಥ ಸುಂದರೀಮಣಿಯನ್ನು ಸಮರ್ಪಿಸಿದರು." ಎಂದು ನರೇಂದ್ರನು ನುಡಿದು ಮಿಹಿರ್‌ಉನ್ನಿಸ್ಸೆಯ ದಿವ್ಯವಾದ ಮೂರ್ತಿಯನ್ನು ನೋಡುತ್ತ ನಿಂತನು.

ಮಿಹಿರ್‌ಉನ್ನಿಸ್ಸೆಯು ನರೇಂದ್ರನ ಮಾತು ಕೇಳಿ ಸಲಜ್ಜಸ್ಮಿತಳಾಗಿ ಜುಲೇಕೆಯನ್ನು ಕುರಿತು "ಜುಲೇಕಾ, ಈ ವೀರರು ಶತ್ರುಗಳನ್ನು ಸೋಲಿಸುವಂತೆಯೇ ಮಾನಿನಿಯರನ್ನು ಕೂಡಾ ಸೋಲಿಸುವರು. ನೀನು ಬಲು

ಜೋಕೆಯಿಂದಿರು, ಕಂಡಿಯಾ ? " ಎಂದು ಅನ್ಯೋಕ್ತಿಯಿಂದ ತನ್ನ ಮನೋಭಾವವನ್ನು ಸೂಚಿಸಿದಳು.

" ಬೇಗಮ್‌ಸಾಹೇಬ, ನಿಮ್ಮ ಅಲೌಕಿಕವಾದ ಸೌಂದರ್ಯವನ್ನು ಕಂಡು ನನ್ನಂಥ ನಾರಿಯರು ಕೂಡ ಬೆರಗಾಗುತ್ತಿರಲು ನರೇಂದ್ರನಾಥರು ನಿಮ್ಮನ್ನು ಕುರಿತು ಸುಂದರೀಮಣಿಯೆಂದು ಹೇಳಿದ್ದು ಹೆಚ್ಚಿನ ಮಾತಲ್ಲ ! " ಎಂದು ಜುಲೇಕೆಯು ನರೇಂದ್ರ ಮಿಹಿರ್ ಉನ್ನಿಸ್ಸೆಯರಿರ್ವರಿಗೂ ತಗಲುವಂತೆ ನಿಪುಣತೆಯಿಂತ ವಾಗ್ಬಾಣವನ್ನು ಬಿಟ್ಟಳು.

" ಚತುರೆ, ನಿನ್ನ ಮಾತು ಹಾಗಿರಲಿ; ಈ ನಮ್ಮ ಸರದಾರರು ಬಂಗಾಲದಲ್ಲಿ ಜಮೀನದಾರರಾಗಿರುವರಲ್ಲ ? "

" ಅಹುದು, ಇವರು ರಾಜಮಹಾಲಿನ ಹತ್ತಿರ ಇರುವ ಬೀರನಗರದ ಜಮೀನದಾರರಾಗಿರುತ್ತಾರೆ. ಇವರ ಉತ್ಪನ್ನವು ದೊಡ್ಡದಾಗಿದೆ, ಎಂದು ಅಂಬರದ ಬಾದಶಾಹಿಣಿಯವರು ಹೇಳುತ್ತಿದ್ದರು. "

" ನರೇಂದ್ರನಾಥ, ನಮಗಾದರೂ ಬರದ್ವಾನದ ಸಮೀಪದಲ್ಲಿ ಒಂದು ಜಹಗೀರು ಬಾದಶಹರ ಕೃಪೆಯಿಂದ ಸಿಕ್ಕಿದೆ. ಬರದ್ವಾನದಿಂದ ನಿಮ್ಮ ಬೀರನಗರವು ಎಷ್ಟು ದೂರವಾದೀತು ? " ಎಂದು ಮಿಹಿರ್‌ಉನ್ನಿಸ್ಸೆಯು ಕೇಳಿದಳು.

" ಬರದ್ವಾನವು ನಮ್ಮ ಊರಿಂದ ಸಮೀಪದಲ್ಲಿಯೇ ಇದೆ. ನೀವೂ ನಾವೂ ನೆರೆಯ ಜಮೀನದಾರರೆಂದು ಹೇಳಬಹುದು. "

" ಸರದಾರರೇ, ಬಾದಶಹರವರ ಅನುಗ್ರಹವನ್ನು ಸಂಪಾದಿಸಿದವರು ಮತ್ಸರಿಗಳ ವೈರಕ್ಕೆ ಈಡಾಗುವದುಂಟು. ಅನೇಕರು ಬಹಿರಂಗವಾಗಿ ನನ್ನ ಪತಿಗಳ ಸ್ನೇಹಿತರಂತೆ ಆಚರಿಸುತ್ತಿದ್ದರೂ ಅಂತರಂಗದಲ್ಲಿ ಅವರು ನಮ್ಮ ನಾಶವನ್ನೇ ಬಗೆಯುತ್ತಿರುವರೆಂದು ನಮಗೆ ತಿಳಿದಿದೆ. ಅದಕ್ಕಾಗಿ ಪ್ರಸಂಗ ಬಂದಾಗ ನರೇಂದ್ರನಾಥರ ತೀಕ್ಷ್ಣವಾದ ಖಡ್ಗವು ನಮ್ಮನ್ನು ಕಾಪಾಡುವದೆಂದು ನಾನು ಕೋರುತ್ತೇನೆ." ಎಂದು ಮಿಹಿರ್ ಉನ್ನಿಸ್ಸೆಯು ತುಸು ಖಿನ್ನಳಾಗಿ ಕೇಳಿಕೊಂಡಳು.

ಹೀಗೆ ಆ ಚಾರುಲೀಲೆಯು ವಿನಯದಿಂದ ಮಾಡಿಕೊಂಡ ವಿನಂತಿಯು ಅಕಬರನ ಆಗ್ರಹದ ಆಜ್ಞೆಗಿಂತಲೂ ನರೇಂದ್ರನಿಗೆ ಮಾನ್ಯವಾಯಿತು.

“ಪ್ರಭಾವಶಾಲಿನಿ, ಅಸಹಾಯಶೂರರಾದ ಶೇರ ಅಫಗಾನರು ತಮ್ಮ ಸಂರಕ್ಷಣೆಯನ್ನು ಮಾಡಿಕೊಳ್ಳಲು ಸಮರ್ಥರೇ ಇದ್ದಾರೆ. ಆದರೂ ಈ ನರೇಂದ್ರನ ಖಡ್ಗವು ನಿಮ್ಮ ಸೇವೆಯಲ್ಲಿ ಯಾವಾಗಲೂ ಸಿದ್ಧವಾಗಿಯೇ ಇರುವದು.” ಎಂದು ನರೇಂದ್ರನು ತನ್ನ ಖಡ್ಗವನ್ನು ಹಿರಿದು ಅದನ್ನು ಅವಳ ಮುಂದೆ ಇಟ್ಟನು.

ಮಿಹಿರ್‌ಉನ್ನಿಸ್ಸೆಯು ಒಯ್ಯಾರದಿಂದ ತನ್ನ ಕೋಮಲವಾದ ಕರದಲ್ಲಿ ಆ ಕಠೋರವಾದ ಆಯುಧವನ್ನು ಲೀಲೆಯಿಂದ ತೆಗೆದುಕೊಂಡು ಅವನ್ನು ನೋಡುತ್ತ ನಿಂತಳು. ನರೇಂದ್ರನ ಉನ್ನತವಾದ ದೇಹವನ್ನೂ, ತಾರುಣ್ಯದ ಕಾಂತಿಯನ್ನೂ, ವೀರಶ್ರೀಯಿಂದ ವಿರಾಜಿಸುತ್ತಿರುವ ಅವನ ಸುಂದರವಾದ ಮುಖವನ್ನೂ ಅವನ ಸೌಜನ್ಯವನ್ನೂ ಕಂಡು ಆ ರಮಣಿಯ ಹೃದಯದಲ್ಲಿ ಒಂದು ಪ್ರಕಾರದ ಭಾವನೆಯು ಹುಟ್ಟಿ ಅವಳು ವಿಲಾಸದಿಂದ ತನ್ನ ಮುಖಾವರಣವನ್ನು ಹಿಂದಕ್ಕೆ ದೂಡಿ ಮಂದಹಾಸಗೈಯುತ್ತ ನರೇಂದ್ರನ ಖಡ್ಗವನ್ನು ಅವನ ಸ್ವಾಧೀನ ಮಾಡಿದಳು. ಆ ಸಮಯದಲ್ಲಿ ಆ ಕೋಮಲಾಂಗಿಯ ಮೃಣಾಲಕೋಮಲವಾದ ಅಂಗುಲಿಗಳು ನರೇಂದ್ರನ ಹಸ್ತಕ್ಕೆ ತಗಲಿದ್ದರಿಂದ ಆ ತರುಣನಾದ ವೀರನಿಗೆ ಒಂದು ಪ್ರಕಾರದ ಆನಂದವೂ ಒಂದು ಪ್ರಕಾರದ ಉದ್ವೇಗವೂ ಉಂಟಾಯಿತು. ಮಿಹಿರ್ ಉನ್ನಿಸ್ಸೆಗೂ ಒಂದು ಪ್ರಕಾರದ ಸಾಧ್ವಸಮಯವಾದ ಸ್ಪರ್ಶಸುಖವಾದಂತಾಗಿ ಅವಳು ನಾಚಿಕೊಂಡಳು. ಪ್ರಯತ್ನದಿಂದ ತನ್ನ ಕ್ಷಣಿಕವಾದ ವಿಕಾರವನ್ನು ಗೆದ್ದು ಸಮಾಧಾನವನ್ನು ತಳೆದ ಬಳಿಕ ಅವಳು ವಿನೋದದಿಂದ ನರೇಂದ್ರನನ್ನು ಕುರಿತು: “ಸರದಾರ, ನೀವು ಸೌಜನ್ಯದಿಂದ ಪರಕೀಯಳಾದ ನಮ್ಮಂಥವಳ ವಿನಂತಿಯನ್ನು ಮನ್ನಿಸಿದಿರಿ. ನಿಮ್ಮಂಥ ಉದಾರರ ಅರ್ಧಾಂಗಿಯಾಗಿರುವವಳು ಧನ್ಯಳೇ. ನಾನು ಬರದ್ವಾನಕ್ಕೆ ಬಂದಾಗ ಭಾಗ್ಯಶಾಲಿನಿಯಾದ ನಿಮ್ಮ ಸೌಭಾಗ್ಯವತಿಯ ಪರಿಚಯವನ್ನು ಮಾಡಿಕೊಡುವಿರೆಂದು ನಾನು ಕೋರುತ್ತೇನೆ.” ಎಂದು ನುಡಿದಳು.

ನರೇಂದ್ರನು ವಿಷಾದದಿಂದ ನಕ್ಕು “ಬೇಗಮ್, ನನಗೆ ಹೆಂಡತಿ ಇಲ್ಲ. ಮುಂದಾದರೂ ನಾನು ಕಾಣುವಂತೆ ಇಲ್ಲ.” ಎಂದು ಹೇಳುತ್ತಿರುವಾಗ ಅವನ ಮುಖವು ಉದ್ವೇಗದಿಂದ ಹುರಮಂಜಿನಂತೆ ಕೆಂಪಾಯಿತು.

"ಏನೆಂದರಿ, ನರೇಂದ್ರನಾಥ? ನಿಮ್ಮಂಥ ಸುಂದರರಾದ ಶ್ರೀಮಂತರಿಗೆ ಮಾಲೆ ಹಾಕಬೇಕೆಂದು ಸಾವಿರಾರು ಜನ ರೂಪಸಂಪನ್ನೆಯರಾದ ತರುಣಿಯರು ತಪಸ್ಸು ಮಾಡುತ್ತಿರುವರಾದೀತು !"

"ಚತುರೆ, ಸಾವಿರಾರು ಜನ ಸುಂದರಿಯರಿಂದ ಪ್ರಯೋಜನವೇನು ? ನನ್ನ ಪ್ರೇಮವನ್ನು ಸಮಗ್ರವಾಗಿ ಸೆಳಕೊಂಡಿರುವ ಮನೋಹರೆಯು ನನಗೆ ದುರ್ಲಭಳಾಗಿರುವಳು. ಉಳಿದವರ ಪಾಣಿಗ್ರಹಣವನ್ನು ನಾನು ಮಾಡುವದೇ ಇಲ್ಲ."

"ಜುಲೇಕಾ, ಯಾವ ಸ್ತ್ರೀಯ್ಯಾಳಿಯುವಳು ಇಂಥ ರುಸ್ತುಮನಂಥ ಪುರುಷಸಿಂಹನನ್ನು ನಿರಾಕರಿಸಿದವಳು ? ಆವಳಂಥ ಭಾಗ್ಯಹೀನೆಯಾದ ಮೂಢೆಯು ಇನ್ನೊಬ್ಬಳು ಎಲ್ಲಿಯಾದರೂ ಹುಟ್ಟುವದುಂಟೇ ?" ಎಂದು ಮಿಹಿರ್‌ಉನ್ನಿಸ್ಸೆಯು ಆಶ್ಚರ್ಯದಿಂದ ನುಡಿದಳು.

ಪಾಪ, ಜುಲೇಕೆಯು ಏನು ಹೇಳಬಲ್ಲಳು. ಆವಳಿಗೂ ನರೇಂದ್ರನ ಮನಸ್ಸಿನ ಸ್ಥಿತಿಯನ್ನು ಕಂಡು ವಿಷಾದವಾಗಿತ್ತು. "ನನಗೇನು ತಿಳಿದೀತು ಇಂಥ ಮಾತುಗಳಲ್ಲಿ ?" ಎಂದು ಆವಳು ನಾಚುತ್ತ ನುಡಿದಳು.

"ಬುಬ್ಬುಣೀ, ನಮ್ಮಂಥವರಿಗೆ ಕಲಿಸುವಷ್ಟು ನೀನು ಒಳ್ಳೇ ಚತುರೆ ಯಾಗಿರುವಿ!" ಎಂದು ಮಿಹಿರೆಯು ನುಡಿದು ನಕ್ಕಳು.

"ಆವಳು ಭಾಗ್ಯಹೀನಳೆ ಸರಿ" ಎಂದು ಜುಲೇಕೆಯು ಅಧೋಮುಖಿ ಯಾಗಿ ನುಡಿದಳು.

"ನರೇಂದ್ರನಾಥ, ನಾನೊಂದು ಮಾತು ಕೇಳುತ್ತೇನೆ; ಪುರೋ ಭಾಗಿನಿಯಂತೆ ಕೇಳಿದ್ದಕ್ಕೆ ಕ್ಷಮಿಸಿರಿ. ಆ ನಿಮ್ಮ ಮನೋಹಾರಿಣಿಯ ವಿವಾಹ ವಾಗಿರುವದೇನು ?"

"ಇಲ್ಲ."

"ಆವಳ ಪ್ರೇಮವು ಬೇರೊಬ್ಬ ಪುರುಷನಲ್ಲಿ ನೆಲಿಸಿರುವದೇನು ?"

ನರೇಂದ್ರನು ಮಂದಸ್ಮಿತನಾಗಿ ಮತ್ತೆ ಇಲ್ಲವೆಂದು ಹೇಳಿದನು.

"ಹಾಃ ! ಹಾಃ ! ಹಾಃ ! ನರೇಂದ್ರನಾಥ, ನೀವು ಚಿಂತೆ ಮಾಡ ಬೇಡಿರಿ. ಆವಳ ತಂದೆಯು ಮೂರ್ಖನಾಗಿರಲಿ, ನಿಮ್ಮ ಶತ್ರುವಾಗಿರಲಿ ಇರ ಬಹುದು. ಆ ಮಾನಿನಿಯು ನಿಮ್ಮನ್ನು ಬಿಟ್ಟು ಅನ್ಯರನ್ನು ಎಂದಿಗೂ ವರಿಸಳು."

"ನಿಮ್ಮಂಥ ಸೌಭಾಗ್ಯಶಾಲಿನಿಯರು ಹೇಳಿದ್ದು ನಿಜವಾದರೆ ಬಂಗಾರದಂತಾದೀತು!" ಎಂದು ಜುಲೇಕೆಯು ಹೇಳಿದಳು.

"ಈಗಲೇ ಹೊತ್ತಾಯಿತೇನು?" ಎಂದು ಬೇಗಮ್ಮಳು ನರೇಂದ್ರನ ಮುಖವನ್ನು ನೋಡುತ್ತ ಕೇಳಿದಳು.

"ಬೇಗಮ್‌ಸಾಹೇಬ, ತಮ್ಮಂಥ ವಿನೋದಿನಿಯರ ಸನ್ನಿಧಾನವನ್ನು ಬಿಟ್ಟು ಹೋಗುವ ಮನಸ್ಸು ಯಾರಿಂದ ಆದೀತು? ಆದರೂ ನಾವು ನಮ್ಮ ಸ್ಥಳಕ್ಕೆ ಹೋಗಿ ಮುಟ್ಟಬೇಕಾದರೆ ಅನೇಕ ತೊಂದರೆಗಳುಂಟು."

"ಸರಿ. ಸರಿ. ಹೋಗಿ ಬನ್ನಿರಿ. ಸಲಾಮ್!" ಎಂದು ಹೇಳಿ ಮಿಹಿರ್‌ಉನ್ನಿಸ್ಸೆಯು ತನ್ನ ಬುರಖೆಯನ್ನು ಹಾಕಿಕೊಂಡಳು.

## ಇಪ್ಪತ್ತೇಳನೆಯ ಅಧ್ಯಾಯ

## ಅತಿಥಿಗೃಹಕ್ಕೆ ಪುನರಾಗಮನವು

ಜುಲೇಕೆಯೂ ನರೇಂದ್ರನೂ, ಮಿಹಿರ್‌ಉನ್ನಿಸ್ಸೆಯ ಅಪ್ಪಣೆ ತೆಗೆದುಕೊಂಡು ಇನ್ನು ಹೊರಡುವವರು ಅಷ್ಟರಲ್ಲಿ ರಾಖಿಯಾ ಬೇಗಮ್ಮಳ ದಾಸಿಯಾದ ಗುಲ್ನೇರ್ ಎಂಬವಳು ಬಂದು ಜುಲೇಕೆಯನ್ನು ಕುರಿತು "ಜುಲೇಕಾ, ನಿನ್ನ ಸಂಗಡ ಇದ್ದ ಆ ಅಫಗಾನೀ ಸ್ತ್ರೀವೇಷವನ್ನು ಧರಿಸಿದವನು ಯಾರು?" ಎಂದು ಮೆಲ್ಲನೆ ಅವಳ ಕಿವಿಯಲ್ಲಿ ಕೇಳಿದಳು.

ಜುಲೇಕೆಯು ಅಂಜಿದವಳಾಗಿ "ಯಾಕೆ?" ಎಂದು ಕೇಳಿದಳು.

"ಸಲೀಮ ಸುಲ್ತಾನರು ಇಲ್ಲಿಂದ ಹೋಗುವಾಗ ಸಿದ್ದೀ ಮುಸ್ರೋರನನ್ನು ಕರೆದು 'ಸ್ತ್ರೀವೇಷವನ್ನು ಧರಿಸಿದ ಪುರುಷನೊಬ್ಬನು ಜುಲೇಕೆಯ ಕೂಡ ಬಂದಿರುವನು. ಎಚ್ಚರಿರು' ಎಂದು ಹೇಳಿದ್ದು ನಾನು ಕೇಳಿದೆನು. ಮುಸ್ರೋರನು ನಿಮ್ಮ ಕಳವು ಈ ರಾತ್ರಿ ಹಿಡಿದನೆಂದರೆ ಎಲ್ಲರ ಮೋರೆಗೂ ಕಪ್ಪು ಹತ್ತುವ ಹೊತ್ತು ಬಂದಿತೆಂದು ತಿಳಿಯತಕ್ಕದ್ದು. ಮುಂದೆ

ಏನು ಮಾಡತಕ್ಕದ್ದು ? ” ಎಂದು ಗುಲ್ನೇರಳು ವಿಚಾರಗ್ರಸ್ಥಳಾಗಿ ಕೇಳಿದಳು.

“ ಗುಲ್ನೇರ, ಒಳ್ಳೇ ವ್ಯಾಳ್ಯೇಕ್ಕೆ ಸೂಚನೆ ಕೊಟ್ಟೆ. ಇಲ್ಲದಿದ್ದರೆ ಕೆಲಸ ಕೆಟ್ಟು ಹೋಗುತ್ತಿತ್ತು. ನೀನು ನಮಗೆ ಅನುಕೂಲಳಾದರೆ ಈ ಸುದ್ದಿ ಬಯಲಿಗೆ ಬಾರದಂತೆ ನಾನು ಒಂದು ಹಂಚಿಕೆ ಮಾಡುವೆನು. ” ಎಂದು ಜುಲೇಕೆಯು ಹೇಳಿದಳು.

“ ಏನು ಹಂಚಿಕೆ ಮಾಡುವಿ ಜುಲೇಕಾ ? ” ಎಂದು ಗುಲ್ನೇರಳು ಕೇಳಿದಳು.

“ ಇಂಥ ಪ್ರಸಂಗವು ಬಂದೀತೆಂದು ತಿಳಿದು ನಾನೂ, ಮಿಹಿರ್-ಉನ್ನಿಸ್ಸಾಬೇಗಮ್‌ರೂ ಕೂಡಿಯೇ ಒಂದು ಆಲೋಚನೆಯನ್ನು ಮೊದಲೇ ಮಾಡಿದ್ದೇವೆ. ಈ ಅಫಗಾನ ಹೆಂಗಸಿಗೆ ರಜಪೂತ ದಾಸಿಯ ವೇಷವನ್ನು ಕೊಟ್ಟು ನಿನ್ನೊಡನೆ ಇವಳನ್ನು ಕಳಿಸುತ್ತೇನೆ. ನೀನು ಇವಳನ್ನು ನದಿಯ ಘಾಟಿನ ತನಕ ಮೊದಲು ಕರಕೊಂಡು ಹೋಗಿ ಮುಂದೆ ಅಂಬರದ ಅತಿಥಿ ಮಂದಿರದ ಹಾದೀ ಹಿಡಿ. ನಾನು ಬೇರೊಂದು ಮಾರ್ಗದಿಂದ ಆನೆಯ ಕಾರಂಜಿಯ ಹತ್ತರ ಬರುವೆನು. ನೀವು ಅಲ್ಲಿ ನನಗೆ ಭೆಟ್ಟಿ ಆಗಿರಿ. ” ಎಂದು ಜುಲೇಕೆಯು ಗುಲ್ನೇರಳಿಗೆ ಹೇಳಿ, ನರೇಂದ್ರನಿಗೆ ರಜಪೂತ ಹೆಂಗಸರ ಚುನರಿ ಕುಪ್ಪಸಗಳನ್ನು ತೊಡಿಸಿ ಅವಳನ್ನು ಗುಲ್ನೇರಳ ಸ್ವಾಧೀನ ಮಾಡಿದಳು.

“ ಏನು ವೇಚಾಟವಿದು ಜುಲೇಕಾ ? ” ಎಂದು ನರೇಂದ್ರನು ಚಿಂತಾಕುಲನಾಗಿ ಕೇಳಿದನು.

“ ಇದು ಅಂತಃಪುರದ ರಹಸ್ಯವು. ಬಹಳ ಪೃಚ್ಛೆ ಮಾಡಬಾರದು. ಮಾಣಿಕಬಾಯಿ ರಜಪೂತ ಯುವತಿಯೇ, ನಿನ್ನ ಹೆಸರು ಮಾಣಿಕಬಾಯಿಯೇ ಅಲ್ಲವೇ ? ” ಎಂದು ಜುಲೇಕೆಯು ಕೇಳಿದಳು.

“ ಬಾದಶಹರ ಅಂತಃಪುರದಲ್ಲಿ ಸೇರುವದೇ ಕಷ್ಟ ! ಇನ್ನು ಯೋಚಿಸಿ ಫಲವೇನು ? ನೀವು ಹೇಳಿದಂತೆ ಕೇಳಲೇಬೇಕಾಗಿದೆ. ” ಎಂದು ನರೇಂದ್ರನು ವಿಷಾದದಿಂದ ನುಡಿದನು.

“ ಮಾಣಿಕಬಾಯಿ, ಈ ಬೆಳ್ಳಿಯ ಬಿಂದಿಗೆಯನ್ನು ತೆಗೆದುಕೊಳ್ಳಿರಿ. ರಾಖಿಯಾ ಬೇಗಮ್ಮರವರಿಗೆ ಕುಡಿಯಲಿಕ್ಕೆ ನೀರು ಬೇಕಾಗಿದೆ. ನದಿಯ

ಘಾಟಿಗೆ ಹೋಗಿ ಬೇಗನೆ ನೀರು ತುಂಬಿಕೊಂಡು ಬನ್ನಿರಿ " ಎಂದು ಹೇಳಿ ಜುಲೇಕೆಯು ಮಿಹಿರ್‌ಉನ್ನಿಸ್ಸೆಯ ಮನೆಯಲ್ಲಿದ್ದ ಬಿಂದಿಗೆಯನ್ನು ನರೇಂದ್ರನ ಕೈಯಲ್ಲಿ ಕೊಟ್ಟಳು.

" ಆಗಲಿ ಜುಲೇಕಾಬಾಯಿ. ಈ ನನ್ನ ಗೆಳತಿಯ ಹೆಸರೇನು ? " ಎಂದು ಮಾಣಿಕಬಾಯಿಯಾದ ನರೇಂದ್ರನು ಕೇಳಿದನು.

" ಮಾಣಿಕಬಾಯಿ, ನನ್ನ ಹೆಸರು ಗುಲ್ನೇರಳು. ನೀನು ಈ ಅಂತಃಪುರಕ್ಕೆ ಹೊಸಬಳಾಗಿ ಕಾಣುತ್ತೀ " ಎಂದು ಅಂತಃಪುರದ ಕೌಟಿಲ್ಯವನ್ನು ಅರಿತವಳಾದ ಗುಲ್ನೇರಳು ನುಡಿದಳು.

ಮಾಣಿಕಬಾಯಿಯೂ, ಗುಲ್ನೇರಳೂ ಮಾತಾಡುತ್ತ ಅಂತಃಪುರದ ಬಾಗಿಲದ ತನಕ ಸುಸೂತ್ರವಾಗಿ ಬಂದರು. ಅಲ್ಲಿ ಬಂದ ಕೂಡಲೆ ಗವಾನನೆಂಬ ಸಿದ್ದಿಯು ಇವರನ್ನು ತಡೆದು " ಯಾರು ನೀವು ಗುಲ್ಲುಗಂಟೆಯರೇ ? ಇದುವರೆಗೆ ಎಲ್ಲಿಗೆ ಜಕ್ಕಿಸಲಿಕ್ಕೆ ಹೋಗಿದ್ದಿರಿ ? " ಎಂದು ದಾಸಿಯರಿಗೆ ಉಚಿತವಾದ ಸಂಭಾವನೆ ಮಾಡಿ ಕೇಳಿದನು.

" ನನ್ನ ಗುರುತು ನಿನಗೆ ಹತ್ತಲಿಲ್ಲವೆ ಗವಾನ್ ? " ಎಂದು ಗುಲ್ನೇರಳು ಕೇಳಿದಳು.

" ಗುಲ್ನೇರಳೇನು ? ನೀನೆಂದು ನನಗೆ ತಿಳಿಯಲಿಲ್ಲ. ಗುಲ್ನೇರ, ಈ ಗಂಡಠಾಮಿಯನ್ನು ಎಲ್ಲಿಂದ ತಂದಿ ? " ಎಂದು ಗವಾನನು ಸಲಿಗೆಯಿಂದ ಕೇಳಿದನು.

" ಹುಶ್ ! ಗವಾನ್, ಇವಳ ಹೆಸರು ತಡೆಯಬೇಡ. ರಾಖಿಯಾ ಬೇಗಮ್ಮರು ಇವಳನ್ನು ಮೊನ್ನೆ ರಜಪುತಸ್ಥಾನದಿಂದ ತರಿಸಿದ್ದಾರೆ. "

" ಇತ್ತ ಕರೆ ಅವಳನ್ನು ಚನ್ನಾಗಿ ನೋಡುವೆನು " ಎಂದು ಗವಾನನು ಹೇಳಿದನು.

" ಛೀ, ಛೀ. ರಜಪುತಾನಿಯರ ಹೆಸರು ತಡೆಯಕೂಡದು. ರಜಪುತಾನಿಯರು, ಜೋಳದ ದಂಟಿನಿಂದ ಕಾಡುಹಂದಿಗಳನ್ನು ಕೊಂದ ವರ್ತಮಾನವನ್ನು ನೀನು ಕೇಳಿಲ್ಲೆ ? "

" ನಾನೇನು ಕಾಡುಹಂದಿಯಲ್ಲ. ಅವಳ ಬಳಿಯಲ್ಲಿ ಗುರುತಿನ ಉಂಗುರವಿದೆಯೇನು ? " ಎಂದು ಗವಾನನು ತನ್ನ ಅಧಿಕಾರದ ಜಂಬದಿಂದ ಕೇಳಿದನು.

" ಗವಾನ್, ಇವಳಿಗೆ ಈ ಪ್ರಾಂತದ ಭಾಷೆ ಬರುವದಿಲ್ಲೆಂದು ನಿನ್ನ ಪರಿಣಾಮ ನೆಟ್ಟಗಾಯಿತು. ಇಕೋ ನೋಡು, ಇವಳ ಕೈಯಲ್ಲಿ ರಾಖಿಯಾ ಬೇಗಮ್ಮರ ಗುರುತದ ಉಂಗುರವಿದೆ."

ಗವಾನನು ಆ ಉಂಗುರಕ್ಕೆ ತಲೆಬಾಗಿ ಅವರೀರ್ವರನ್ನು ಬಿಟ್ಟುಬಿಟ್ಟನು. ಗುಲ್ನೇರಳು ಮಾಣಿಕಬಾಯಿಯನ್ನು ಕರಕೊಂಡು ಲಗಬಗೆಯಿಂದ ಘಾಟಿಗೆ ಹೋದಳು. ಅಲ್ಲಿ ಕೆಲಜನ ಮುಸಲ್ಮಾನ ದಾಸಿಯರು ರಾಧಾ ಎಂಬ ರಜಪೂತ ದಾಸಿಯೊಡನೆ ನಗೆಚಾಟಿಕೆಯ ಮಾತುಗಳನ್ನಾಡಿ ಆವಳನ್ನು ಅಳುವೋರೆಗೆ ತಂದಿದ್ದರು. ಅವಳು ಗುಲ್ನೇರಳನ್ನು ಕಂಡಕೂಡಲೆ ಮತ್ತಿಷ್ಟು ನಕ್ಕರು.

" ಗುಲ್ನೇರ್, ನಿನ್ನೆ ರಾತ್ರಿ ಈ ರಾಧೆಯು ಏನೇನು ವಿಲಾಸ ಮಾಡಿದ ಳೆಂಬದನ್ನು ನೀನು ಕೇಳಿಲ್ಲವೇನು ?" ಎಂದು ಫಾತಿಮಾ ದಾಸಿಯು ಕೇಳಿದಳು.

ಗುಲ್ನೇರಳು ತುಸು ನಕ್ಕು " ಏನಾದರೂ ಇದ್ದೀತು ಹೋಗು ಫಾತಿಮಾ! ಏನು ಹೆಚ್ಚಿನದಾಯಿತು ಅದರಲ್ಲಿ ? " ಎಂದು ಮಧ್ಯಸ್ಥಳಾಗಿ ಹೇಳಿದಳು.

" ತಾವು ರಜಪುತಾಣಿಯರೆಲ್ಲರೂ ಸಂಭಾವಿತರೆಂದು ಈ ರಾಧಾ ದೇವಿಯು ಗಂಗೀ ಅಳೆಯುತ್ತಿದ್ದಳು ! ಅವಕ್ಕಾಗಿ ಮಾತಾಡಬೇಕಾಗುತ್ತದೆ" ಎಂದು ಗುಲಾಬ ಎಂಬ ದಾಸಿಯು ರಾಧೆಯ ನೋರೆಗೆ ಕೈಚಾಚಿ ನುಡಿದಳು.

"ಗುಲಾಬ, ಸುಮ್ಮನಿರು. ಯಾರಿಗೆ ಯಾರೂ ನಗುವಂತೆ ಇಲ್ಲ. ನನ್ನ ಬಾಯಿಯಿಂದ ಯಾಕೆ ಆಡಿಸುತ್ತೀ? "ಎಂದು ಗುಲ್ನೇರಳು ನಗುತ್ತ ಕೇಳಿದಳು.

"ಆಕೆ ನಮ್ಮ ಹೆಸರು ತೆಗೆಯುವದು ಬಿಟ್ಟರೆ ನಾವು ಆಕೆಯ ಹೆಸರೇಕೆ ತೆಗೆಯೋಣ ? ಅಂಬರದ ಬಾದಶಾಹಿಣಿಯ ದಾಸಿಯಾದರೆ ಹೆಚ್ಚಿನಾಕೆ ಆದಳೇನು ? "

" ಹೋಗಲಿ ಬಿಡು ಗುಲಾಬ. ಸುಳ್ಳೇ ಮಾತು ಬೆಳಿಸುವದೇಕೆ ? " ಎಂದು ಗುಲ್ನೇರಳು ಗುಲಾಬಳನ್ನು ಸಮ್ಮತಿಸಿ ರಾಧೆಯನ್ನು ಕುರಿತು "ರಾಧಾ, ಕೊಡ ತುಂಬಿಕೋ. ನನಗೂ ಅಂಬರದ ರಾಣಿಯವರಿಗೆ ರಾಖಿಯಾ ಬೇಗಮ್ಮರು ಒಂದು ಮಾತು ಹೇಳಹೇಳಿದ್ದಾರೆ " ಎಂದು ಹೇಳಿ ಅವಳನ್ನೂ,

ಮಾಣಿಕಬಾಯಿಯನ್ನೂ ಕರಕೊಂಡು ಗುಲ್ನೆರಳು ಅಂಬರದ ರಾಣಿಯ ಮಂದಿರದ ಮಾರ್ಗ ಹಿಡಿದು ನಡೆದಳು.

ಮಾರ್ಗದಲ್ಲಿ ತುಸು ಹೊತ್ತು ರಾಧೆಯ ವೃತ್ತಾಂತವನ್ನು ಕೇಳಿಕೊಂಡಂತೆ ಮಾಡಿ ಗುಲ್ನೇರಳು ಅವಳನ್ನು ಕುರಿತು: "ರಾಧಾ, ಈ ಮಾಣಿಕಬಾಯಿಯನ್ನು ಕರಕೊಂಡು ಆನೆಯ ಕಾರಂಜಿಯ ತನಕ ಒಯ್ದು ಮುಟ್ಟಿಸು, ಅಲ್ಲಿ ನಿಮ್ಮ ಜುಲೇಕೆ ಇದ್ದಾಳೆ; ಮುಂದೆ ಅವಳು ಇವಳನ್ನು ಅಂಬರದ ಅತಿಥಿಮಂದಿರಕ್ಕೆ ಕರಕೊಂಡು ಹೋಗುವಳು. ಅತಿಥಿಗಳಿಗೆ ನೀರು ಕಾಯಿಸಿ ಕೊಡುವ ಕೆಲಸ ಇಂದು ಇವಳದಂತೆ. ಹೊಸ ತೊತ್ತುಗಳನ್ನು ಇಂಥ ಕೆಲಸಕ್ಕೆ ಯಾಕೆ ನಿಯಮಿಸುತ್ತಾರೋ ಕಾಣೆನು."

"ಆದರೇನಾಯಿತು, ನಾನು ಕರಕೊಂಡು ಹೋಗುತ್ತೇನೆ" ಎಂದು ತಪ್ಪಿನಲ್ಲಿ ಸಿಕ್ಕ ರಾಧೆಯು ಯಾವದೂ ಚಿಕಿತ್ಸೆಮಾಡದೆ ಒಪ್ಪಿಕೊಂಡು ಮಾಣಿಕಬಾಯಿಯನ್ನು ಕರಕೊಂಡು ನಡೆದಳು.

ಫಾತಿಮಾ ಗುಲಾಬಿಯರ ಕಾಟ ತಪ್ಪಿದ್ದರಿಂದ ರಾಧೆಯ ಮನಸ್ಸಿಗೆ ಸಮಾಧಾನವಾಗಿತ್ತು. ಅವಳು ಮಾರ್ಗದಲ್ಲಿ ಮೆಲ್ಲನೆ "ಆವೋ ಆವೋ ರಂಗೇಲಾ" ಎಂದು ಬಹು ಸವಿಯಾಗಿ ಹಾಡುತ್ತ ನಡೆದಳು.

"ಮಾಣಿಕಬಾಯಿ, ನಿಮಗೆ ಹಾಡಲಿಕ್ಕೆ ಬರುತ್ತದೇನು?" ಎಂದು ಹಾಡು ನಿಲ್ಲಿಸಿ ರಾಧೆಯು ಕೇಳಿದಳು.

"ನಾನು ಮೊನ್ನೆ ಮೊನ್ನೆ ಇಲ್ಲಿಗೆ ಬಂದವಳು. ದೊಡ್ಡ ಊರಲ್ಲಿ ಇರುವವರೇ ಹಾಡಬಲ್ಲರು. ನಮ್ಮಂಥ ಹಳ್ಳಿಗಾಡ ಹೆಂಗಸರೇನು ಹಾಡ್ಯಾರು?"

"ನನಗೆ ಕೃಷ್ಣಲೀಲೆಯ ನೂರಾರು ಪದಗಳು ಬರುತ್ತವೆ. ನಿನಗೂ ಕಲಿಸುವೆನಂತೆ!" ಎಂದು ರಾಧೆಯು ಹೇಳಿ ಮತ್ತೆ ಉಲ್ಲಾಸದಿಂದ ಹಾಡುತ್ತ ನಡೆದಳು.

"ರಾಧಾಬಾಯಿ, ನಿಮಗೆ ಕೃಷ್ಣಲೀಲೆಯ ಹೊರತಾಗಿ ಮತ್ತ್ಯಾವ ಪದಗಳು ಬರುತ್ತವೆ?"

"ಹಾಡುಗಳಿರುವವೇ ಕೃಷ್ಣಲೀಲೆಯ ಮೇಲೆ. ಬೇಕಾದ ಹಾಡು ಕೇಳಿರಿ, ಅದರಲ್ಲಿ ಕೃಷ್ಣ, ರಾಧಾ, ಯಮುನಾ, ಗೋಪಿ, ಮುರಲೀ ಹೊರತಾಗಿ ಬೇರೆ ಮಾತೇ ಇಲ್ಲ!"

ಹೀಗೆ ಮಾತಾಡುತ್ತ ಮಾತಾಡುತ್ತ ರಾಧೆಯು ಮಾಣಿಕಬಾಯಿಯನ್ನು ಆನೆಯ ಕಾರಂಜಿಗೆ ತಂದು ಮುಟ್ಟಿಸಿ "ಜುಲೇಕಾ, ನಿನ್ನ ವಸ್ತು ನಿನಗೆ ಮುಟ್ಟಿತು" ಎಂದು ಹೇಳಿ ನಗುತ್ತೆ ಹೊರಟು ಹೋದಳು.

ಜುಲೇಕೆಯೂ ನರೇಂದ್ರನನ್ನು ಕರಕೊಂಡು ಲಗಬಗೆಯಿಂದ ಅತಿಥಿಗೃಹಕ್ಕೆ ಬಂದಳು. ಬಳಿಕ ನರೇಂದ್ರನು "ಜುಲೇಕಾ, ಏನೇನು ಚಮತ್ಕಾರ ಇದು ?" ಎಂದು ವಿಸ್ಮಯದಿಂದ ಕೇಳಿದನು.

"ನಾವು ಮಿಹಿರ್ ಉನ್ನಿಸ್ಸೆಯ ಬಳಿಯಲ್ಲಿ ಶಸ್ತ್ರಗಳನ್ನು ಹಿಡುಕೊಂಡು ನಿಂತಾಗ ಸಲೀಮನು ನಿಮ್ಮ ಗುರುತು ಹಿಡಿದಂತೆ ಕಾಣುತ್ತದೆ. ಅದಕ್ಕಾಗಿ ಅವನು ಮುಸ್ರೋರನಿಗೆ ನಿಮ್ಮನ್ನು ಹಿಡಿಯುವದಕ್ಕಾಗಿ ಸೂಚನೆ ಕೊಟ್ಟನು. ಮುಸ್ರೋರನನ್ನು ತಪ್ಪಿಸಿ ಬರಬೇಕಾದರೆ ಇಷ್ಟೆಲ್ಲ ಆಟ ಮಾಡಬೇಕಾಯಿತು" ಎಂದು ಜುಲೇಕೆಯು ಸ್ವಲ್ಪದರಲ್ಲಿ ಹೇಳಿದಳು.

"ನಾನು ಸ್ತ್ರೀವೇಷವನ್ನು ತೊಟ್ಟು ಅಂತಃಪುರದಲ್ಲಿ ಸೇರಿದ ವರ್ತಮಾನವು ಪ್ರಕಟವಾದರೆ ಮುಂದೆ ಗತಿಯೇನು ಜುಲೇಕಾ ?" ಎಂದು ನರೇಂದ್ರನು ಭಯಗ್ರಸ್ತನಾಗಿ ಕೇಳಿದನು.

"ಅವನದೇ ಅವನಿಗೆ ಸಾಕುಬೇಕಾಗಿ ಹೋಗಿದೆ. ಅವನೇನು ಪ್ರಕಟಮಾಡುವದಿಲ್ಲ. ಆದರೆ ಸಲೀಮನು ಘಾತಕಿಯು. ನಿಮ್ಮ ಜೀವಕ್ಕೆ ಏನಾದರೂ ಅಪಾಯ ಮಾಡುವನು. ಬಲು ಎಚ್ಚರಿಕೆ ಕಂಡಿರಾ!"

"ಸಲೀಮನ ಅಂಜಿಕೆ ಹೇಳಬೇಡ. ಅಂತಃಪುರದಲ್ಲಿ ಸೇರಿದ ದೋಷವು ನನ್ನ ಹೆಸರಿಗೆ ತಗಲದಿದ್ದರೆ ಸಾಕು."

"ಅದರದೇನು ವಿಶೇಷವಾದ ಭೀತಿಯಿಲ್ಲ. ಸಲೀಮನೇ ಕುತ್ತಿಗೆಗೊಯಿಕನು, ನೋಡಿಕೊಳ್ಳಿರಿ. ನೀವು ನಾಳೆಗೇ ಈ ಮಂದಿರವನ್ನು ಬಿಟ್ಟು ಮತ್ತೆಲ್ಲಿಯಾದರೂ ಹೋಗಿರಿ."

"ಹಾಗಾದರೆ ನಾಳೆಗೇ ನಾನು ಸೈನ್ಯದಲ್ಲಿ ಹೋಗಿ ಇರುವೆನು. ಇನ್ನು ನಿನ್ನ ಭೆಟ್ಟಿ ಯಾವಾಗ ಜುಲೇಕಾ ?"

"ನನ್ನ ಭೆಟ್ಟಿಯಿಂದ ನಿಮಗೇನು ಪ್ರಯೋಜನ ?" ಎಂದು ಜುಲೇಕೆಯು ನಕ್ಕು ನುಡಿದಳು.

"ಜುಲೇಕಾ, ನೀನು ಪ್ರೇಮದಿಂದ ನನ್ನ ಆರೈಕೆ ಮಾಡಿ ನನ್ನನ್ನು

ಬದುಕಿಸಿಕೊಂಡಿ. ನಿನ್ನ ಭೆಟ್ಟಿಯ ಪ್ರಯೋಜನವೇನೆಂದರೇನು ? ”

“ ಆಗಲಿ, ನಾನು ಇಲ್ಲಿಯೇ ಇದ್ದು ಸಲೀಮನ ಕಪಟಕೃತ್ಯದ ಶೋಧ ಮಾಡುವೆನು. ನಿಮ್ಮ ಜೀವಕ್ಕೆ ಅಪಾಯವಿದೆ ಎಂದು ತಿಳಿದರೆ ಅವಶ್ಯವಾಗಿ ನಾನು ನಿಮ್ಮ ಬಳಿಗೆ ಬಂದು ತಿಳಿಸುವೆನು. ಸಲಾಮ್ ! ” ಎಂದು ಜುಲೇಕೆಯು ಹೊರಟು ಹೋದಳು.

## ಇಪ್ಪತ್ತೆಂಟನೆಯ ಅಧ್ಯಾಯ

## ಬಾದಶಹನ ದರಬಾರವು

ಆಗ್ರಾಪಟ್ಟಣದ ಒಂದು ಕೂಗಳತೆಯ ಅಂತರದ ಮೇಲಿದ್ದ ದಿನ್ನೆಯ ಮೇಲೆ ಗಗನಮಹಾಲವೆಂಬ ಅತಿ ಮನೋಹರವಾದ ಮಂದಿರವಿತ್ತು. ರಮಣೀಯವಾದ ಉದ್ಯಾನಗಳಿಂದಲೂ, ಚಿತ್ರಮಯವಾದ ವನೋಪವನಗಳಿಂದಲೂ, ಪೈರುಗಳಿಂದ ತುಂಬಿದ ಗದ್ದೆಹೊಲಗಳಿಂದಲೂ ಸುತ್ತುಗಟ್ಟಲ್ಪಟ್ಟ ಅತಿರಮಣೀಯವಾದ ಆ ಮಾನಸಿಂಹರಾಜನ ಮಂದಿರವು, ವನಶ್ರೀಯು ಒಳ್ಳೇ ಆಧ್ಯಕೆಯಿಂದ ಧರಿಸಿದ ಮುಕುಟದಂತೆ ವಿರಾಜಿಸುತ್ತಿತ್ತು. ಗಗನಮಹಾಲಿನಲ್ಲಿ ನಿಂತು ನೋಡಿದರೆ ಇಳುಕಲಿನ ಮೇಲಿದ್ದ ಆಗ್ರಾಪಟ್ಟಣದ ಸಮಗ್ರವಾದ ಶೋಭೆಯು ಬಹು ನಯನಾಭಿರಾಮವಾಗಿ ತೋರುತ್ತಿತ್ತು. ನಭೋಮಂಡಲವನ್ನು ಭೇದಿಸುತ್ತಿರುವಂತೆ ಉನ್ನತವಾಗಿ ಕಟ್ಟಿದ ರಾಜಮಂದಿರಗಳೂ, ಪ್ರೇಕ್ಷಣೀಯವಾಗಿ ಕಟ್ಟಿದ ಶ್ರೀಮಂತರ ಮನೆಗಳೂ, ಬಿಳಿಮೋಡಗಳ ವಿಶಾಲವಾದ ಪಡೆಗಳಂತೆ ಕಾಣುವ ಮಶೀದೆಗಳ ಭವ್ಯವಾದ ಗುಮ್ಮಟಗಳೂ, ಘನವಾಗಿ ಬೆಳೆದಿರುವ ತರುಸಂತಾನದ ಅಂತರದೊಳಗಿಂದ ಒಳ್ಳೇ ಚಮತ್ಕಾರವಾಗಿ ತೋರುತ್ತಿದ್ದವು. ವನದೇವಿಯು ನಗರದ ಸುತ್ತಲೂ ಒಳ್ಳೇ ಆಸ್ಥೆಯಿಂದ ಮರಕತದ ಉನ್ನತವಾದ ಕೋಟೆಯನ್ನೇ ಕಟ್ಟಿರುವಳೋ ಎಂಬಂತೆ ಆಗ್ರಾಪಟ್ಟಣದ ಸುತ್ತಲೂ ಇರುವ ಘನವಾದ ಉದ್ಯಾನಗಳು

ಶೋಭಿಸುತ್ತಿದ್ದವು. ಪಟ್ಟಣಕ್ಕೆ ಹೊಂದಿ ಹರಿಯುತ್ತಿರುವ ಯಮುನಾನದಿಯು ನೀಲರಾಗದ ಜಲಪ್ರವಾಹವೂ, ನದಿಯ ಉತ್ಸಂಗದಲ್ಲಿ ಚಿತ್ರಮಯವಾಗಿ ಬೆಳೆದಿರುವ ವನರಾಜಿಯೂ ಆ ರಾಜಧಾನಿಗೆ ನಿರುಪಮವಾದ ಅಲಂಕಾರಗಳೇ ಆಗಿದ್ದವು.

ಮಾರ್ಗಶೀರ್ಷ ಮಾಸವೆಂದರೆ ಸಕಲ ಮಾಸಗಳಲ್ಲಿ ಶ್ರೇಷ್ಠವಾದದು. 'ಮಾಸಾನಾಂ ಮಾರ್ಗಶೀರ್ಷೋಽಹಂ' ಎಂದು ಸಾಕ್ಷಾತ್ ಭಗವಂತನೇ ಹೇಳಿದ್ದಾನಷ್ಟೆ. ಮಳೆಗಾಲವೆಲ್ಲ ತೀರಿಹೋಗಿದ್ದರಿಂದ ನಭೋಮಂಡಲವು ಸುಪ್ರಸನ್ನವಾಗಿ ತೋರುತ್ತಿತ್ತು. ಗರ್ಭವತಿಯಾದ ಭೂದೇವಿಯು ಹಸರು ಸೀರೆಯನ್ನುಟ್ಟು ಅನೇಕ ಪ್ರಕಾರದ ಪುಷ್ಪಗಳಿಂದ ಅಲಂಕೃತಳಾಗಿ ಲೋಕಕ್ಕೆ ಸಂತೋಷವನ್ನೀಯುವಳಾಗಿ ಮೆರೆಯುತ್ತಿದ್ದಳು. ಸಮೃದ್ಧಿಮಯವಾದ ಫಲಪೈರುಗಳಿಂದ ಕಂಗೊಳಿಸುವ ತಮ್ಮ ಹೊಲಗಳನ್ನು ನೋಡಿ ರೈತರು ಆನಂದದಿಂದ ಕುಲು ಕುಲು ನಗುತ್ತಿದ್ದರು. ಪ್ರಜರ ಹರ್ಷವನ್ನು ಕಂಡು ಸಂತುಷ್ಟನಾದ ಬಾದಶಹನು ಪ್ರಸಾದೋನ್ಮುಖನಾಗಿದ್ದನು. ಇಂಥ ಮಾಸದಲ್ಲಿ ಅಕಬರಬಾದಶಹನು ಸಂಭ್ರಮದಿಂದ ದೊಡ್ಡ ದರಬಾರವನ್ನು ಕೂಡಿಸುತ್ತಿದ್ದನು.

ದರ್ಬಾರದ ದಿವಸ ಅರುಣೋದಯಕ್ಕೆ ಮುಂಚಿತವಾಗಿ ಕೋಟಿಕೊತ್ತಲುಗಳ ಮೇಲೂ, ಸೈನ್ಯದ ಠಾಣ್ಯಗಳಲ್ಲಿಯೂ, ರಾಜಮಂದಿರದ ಮುಂದೂ ನಗಾರಿ ನೌಬತ್ತುಗಳ ಘನವಾದ ನಿನಾದವೆಸಗಿತು. ವಾದ್ಯಗಳ ಸಪ್ಪಳವನ್ನು ಕೇಳಿ ನಗರವಾಸಿಗಳೆಲ್ಲರೂ ಹಾಸಿಗೆಯಿಂದೆದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ತಮ್ಮ ತಮ್ಮ ಉದ್ಯೋಗಗಳಲ್ಲಿ ತೊಡಗಿದರು. ಮಂತ್ರಿ-ಮುತ್ಸದ್ದಿಗಳೂ, ಸರದಾರ-ಸೇನಾಪತಿಗಳೂ, ಅಮೀರ-ಉಮ್ರಾವರೂ, ಸೆಟ್ಟಿ-ಸಾವುಕಾರರೂ ಸಡಗರದ ಉಡುಗೆ-ತೊಡಿಗೆಗಳನ್ನು ಮಾಡಿಕೊಂಡು ದರ್ಬಾರಕ್ಕೆ ಸಿದ್ಧರಾದರು. ಸೇನಾಪತಿಗಳು ದಿವ್ಯವಾದ ಲಷ್ಕರೀಪೋಷಾಕು ಮಾಡಿಕೊಂಡಿದ್ದರು. ವಜೀರ ಅಮಲದಾರರು ಅನರ್ಘವಾದ ವಸ್ತ್ರಪ್ರಾವರಣಗಳಿಂದ ಶೋಭಿಸುತ್ತಿದ್ದರು. ಮಿಕ್ಕುಳಿದ ಸರದಾರರು ತಮ್ಮ ತಮ್ಮ ಇಚ್ಛೆಯ ಮೇರೆಗೆ ಉಡುಗೆ-ತೊಡಿಗೆಗಳನ್ನು ಮಾಡಿಕೊಂಡರು. ಮನೆತನಸ್ಥನಾದ ವೃದ್ಧನೋರ್ವನು ತನ್ನ ಬಿಳಿಗಡ್ಡಕ್ಕೆ ಮದರಂಗಿಯ ಬಣ್ಣವು ಚನ್ನಾಗಿ ಹತ್ತಿದೆಯೋ ಇಲ್ಲವೋ ಎಂದು ಕನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದನು. ವಿಲಾಸಿಯೋರ್ವನು

ತನ್ನ ಮಂದೀಲವನ್ನು ಮೆರಿಗೆ ಮಾಡಿಮಾಡಿ ಸುತ್ತಿಕೊಳ್ಳುವದರಲ್ಲಿ ನಿರತನಾಗಿದ್ದನು. ಸಾಲಗೊಯಿಕನಾದ ಸರದಾರನೋರ್ವನು ಸೌದಾಗಾರನ ಅಂಗಡಿಯಿಂದ ಮಾಣಿಕದ ಉಂಗರವನ್ನು ತರಿಸಿ, ನಾಳೆ ಬೆಲೆ ಬಗಿಹರಿದರೆ ತೆಗೆದುಕೊಳ್ಳುತ್ತೇನೆಂದು ಹೇಳಿ, ಇಂದು ದರಬಾರಕ್ಕೆ ಉಂಗುರವಾಯಿತೆಂದು ನಡೆದನು. ಹೀಗೆ ದರಬಾರಕ್ಕೆ ಹೋಗುವವರೆಲ್ಲರೂ ಸಿಂಗಾರಾಗಿ ತಮತಮಗೆ ಉಚಿತವಾದ ಮೇಣೆ, ಅಂದಣ, ಕುದುರೆ, ಆನೆಗಳನ್ನು ಏರಿಕೊಂಡು ರಾಜಮಂದಿರದ ಮಾರ್ಗಹಿಡಿದು ನಡೆದರು.

ವೈಭವದಿಂದ ಸಿಂಗರಿಸಿದ ಗಜರಾಜನ ಮೇಲೆ ಕಟ್ಟಿದ ರತ್ನಖಚಿತವಾದ ಅಂಬಾರಿಯಲ್ಲಿ ಕುಳಿತುಕೊಂಡು ಮಾನಸಿಂಹರಾಜರು ತಮ್ಮ ಗಗನಮಹಾಲ ಮಂದಿರದಿಂದ ಹೊರಡುವವರಾದರು. ಆ ಸೇನಾಪತಿಯು ಆನೆಯ ಎಡಬಲದಲ್ಲಿ ಅನೇಕ ಜನ ರಾವುತರು ತಮ್ಮ ಕುದುರೆಗಳನ್ನು ಒಯ್ಯಾರದಿಂದ ಕುಣಿಸುತ್ತ ನಡೆದಿದ್ದರು. ಆ ರಾಜನ ಎದಿನಲ್ಲಿ ಅವನ ಮಗನಾದ ಗಜಪತಸಿಂಹನೂ, ನರೇಂದ್ರನಾಥನೂ ಕಾಠೇವಾಡದ ಕುದುರೆಗಳನ್ನೇರಿಕೊಂಡು ಆಪ್ತಾಲೋಚನದ ಮಾತುಗಳನ್ನಾಡುತ್ತ ನಡೆದಿದ್ದರು. ಈ ಸಡಗರದ ಮೆರವಣಿಗೆಯು ಗಡಗಡನೆ ನಡೆಯುತ್ತ ನಡು ಊರಿಗೆ ಬಂದಿತು.

ಸಾಲು ಹಿಡಿದು ಒಂದೇಸವನೇ ಕಟ್ಟಿದ ರಮಣೀಯವಾದ ಮಂದಿರಗಳುಳ್ಳ ವಿಸ್ತಾರವಾದ ಬೀದಿಗಳೊಳಗಿಂದಲೂ, ಪಗಡೆಯ ಮನೆಯಂತೆ ಕಟ್ಟಿದ ಪೇಟೆಗಳೊಳಗಿಂದಲೂ, ನಯನಮನೋಹರವಾಗಿರುವ ಉದ್ಯಾನಗಳೊಳಗಿಂದಲೂ ಹಾಯ್ದು ಮಾನಸಿಂಹರಾಜರ ಸವಾರಿಯು ನಡೆದಿತ್ತು. ಇಂಥ ವೈಭವದ ಮೆರವಣಿಗೆಯನ್ನು ನೋಡುವ ಕುತೂಹಲದಿಂದ ವಸ್ತ್ರಾಭರಣಭೂಷಿತರಾದ ನರನಾರಿಯರು ಉಪ್ಪರಿಗೆಯ ಕಿಟಿಕೆಗಳಲ್ಲಿ ನಿಂತು ನೋಡಿ ಕೌತುಕಬಡುತ್ತಿದ್ದರು. ಸಾಮಾನ್ಯ ಜನರು ಮನೆಗಳ ಕಟ್ಟೆಗಳ ಮೇಲೆಯೂ, ಬೀದಿಗಳ ಮಗ್ಗಲಿನಲ್ಲಿಯೂ ನಿಂತು ಮಾನಸಿಂಹನು ಬರುತ್ತಿರುವ ಉತ್ಸವದ ಮೇಳೆಯನ್ನು ಹುಬ್ಬುಗೈಯಿಕ್ಕಿ ನೋಡುತ್ತಿದ್ದರು. 'ಹಾದಿ! ಹಾದಿ!' ಎಂದು ಮಾವುತ ರಾವುತರು ಕೂಗಿಕೊಳ್ಳುತ್ತಿದ್ದರೂ ಅರಿವಿಲ್ಲದೆ ಜನರು ಹಿಂದಕ್ಕೆ ಸರಿಯದೆ ನಿಂತಿದ್ದರು.

ಪೇಟೆಗಳ ಶೋಭೆಯಂತೂ ಅವರ್ಣನೀಯವಾಗಿತ್ತು. ಅನೇಕ ಪುಷ್ಪವನಗಳನ್ನು ಸುಲಿದು ತಂದು ಹೂವಿನ ರಾಶಿಗಳನ್ನು ಒಟ್ಟಿಕೊಂಡು ಕುಳಿತಿದ್ದ ಹೂಗಾರರ ಅಂಗಡಿಗಳು ಹಾದಿಯಿಂದ ಹೋಗುವಾಗ ಮೈಮೇಲೆ ಮಕರಂದವನ್ನು ಉಗ್ಗುತ್ತಿದ್ದವು. ಕಾಬೂಲ, ಮಸ್ಕತ, ಕಾಶೀ, ನಾಗ ಪೂರ ಮುಂತಾದ ಸ್ಥಳಗಳಿಂದ ತರಿಸಿದ ಅತಿ ಮಧುರವಾದ ಫಲಗಳ ಒಟ್ಟಿಲ ಗಳು ಲೋಭನೀಯವಾಗಿ ಕಾಣುತ್ತಿದ್ದವು. ಇರಾಣ, ಚೀನ, ಡಾಕಾ, ಸೇಲಮ್, ಚಂದೇರಿ ಪೈಠಣ ಮುಂತಾದ ಸ್ಥಳಗಳಿಂದ ತಂದ ನೂಲು ರೇಶಿಮೆ, ಜರತಾರಿಯ ವಸ್ತ್ರಗಳನ್ನು ಮಾರವಾಡಿಗಳು ತಮ್ಮ ಅಂಗಡಿಗಳಲ್ಲಿ ಬಹು ಪರಿಷ್ಕಾರವಾಗಿ ಮಂಡಿಸಿಕೊಂಡು ರೊಕ್ಕದ ಬೆಲೆಯನ್ನು ಅರಿಯ ದವರಾದ ಶ್ರೀಮಂತರನ್ನು ಸುಲುಕೊಳ್ಳುತ್ತಿದ್ದರು. "ಇದು ನೋಡ್ರೀ ಸಾಹೇಬ, ಇದು ನೋಡ್ರೀ ಮೆಹರ್ಬಾನ್, ಈ ಜರದ ದುಪೇಟಾ ನೂರ್ ರೀಪಿಯಾಕೆ ಕೋಟ್ರೆ ನಾ ಬಡವಾನ್ ಹೋಟೆಗೆ ನಾಕ ದೂಡ್ ಉಳೂ ದಿಲ್ಲಾ!" ಎಂದು ಹೇಳಿ ಒಂದಕ್ಕೆ ಎರಡು ಗಂಟು ಮಾಡುತ್ತಿದ್ದರು. 'ಮೋತೀ ಬಾಜಾರ'ದಲ್ಲಿ ವೃದ್ಧರಾದ ಪರೀಕ್ಷಕರು ಕಣ್ಣಿಗೆ ಉಪನೇತ್ರ ಗಳನ್ನು ಇಟ್ಟುಕೊಂಡು ಅನರ್ಘವಾದ ಮುತ್ತು ಮಾಣಿಕಗಳ ಬೆಲೆಯನ್ನು ಕಟ್ಟುತ್ತಿದ್ದರು. ವಿಸ್ತಾರವಾದ ಅಂಗಡಿಗಳಲ್ಲಿ ತರತರದ ಬಣ್ಣದ ಕಾಚು ಪಾತ್ರೆಗಳನ್ನೂ, ಸುಣ್ಣಮಣ್ಣುಗಳ ಗೊಂಬೆಗಳನ್ನೂ, ಸರಾಯಿಗಳ ಕುಪ್ಪೆ ಗಳನ್ನೂ ಒಳ್ಳೇ ಆಡಂಬರದಿಂದ ಮಂಡಿಸಿ ಇಟ್ಟುಕೊಂಡು ಫ್ರೆಂಚ್, ಇಂಗ್ಲಿಷ್, ಡಚ್ ಮುಂತಾದ ಗೌರಾಂಗರಾದ ವರ್ತಕರು ಹಿಂದುಸ್ಥಾನದ ಭಾಷೆಗಳ ಜ್ಞಾನವಿಲ್ಲದಿದ್ದರೂ ಕೈಸೊನ್ನೆ ಬಾಯಿಸೊನ್ನೆಗಳಿಂದ ಅನೇಕ ಜನರನ್ನು ಮೋಹಗೊಳಿಸಿ ಮಣ್ಣು ಕೊಟ್ಟು ಹೊನ್ನು ಹಿರಕೊಳ್ಳುತ್ತಿದ್ದರು.

ಹೀಗೆ ಪರಿವಾರದೊಡನೆ ನಗರಶೋಭೆಯನ್ನು ನೋಡುತ್ತ ಮಹನೀಯ ರೆಲ್ಲರೂ ಕೋಟೆಯ ಮುಂದಿದ್ದ ವಿಸ್ತಾರವಾದ ಬೈಲಿನಲ್ಲಿ ಮಿಲಿತರಾದರು. ಅಲ್ಲಿ ದೊಡ್ಡದೊಂದು ಜಾತ್ರೆಯೇ ನೆರೆದಂತಾಯಿತು. ಕೆಂಪು ಜೂಲಗಳನ್ನು ಹೊದ್ದುಕೊಂಡು ಕೊರಳಲ್ಲಿ ಬೆಳ್ಳಿಯ ಗೆಜ್ಜೇಸರಗಳನ್ನು ಕಟ್ಟಿಕೊಂಡು ಸುಲಿಸ್ಯಾಡುತ್ತ ನಿಂತ ಮದಗಜಗಳ ಶ್ರೇಣಿಗಳೂ, ಸ್ಫೂರ್ತಿಯಿಂದ ಹೇಂಕರಿಸಿ ರಾವುತರು ಜಗ್ಗುತ್ತಿರುವ ಕಡಿವಾಣಗಳಿಗೆ ಒಳಗಾಗದೆ ಅಂತರಗಾಲಿಟ್ಟು

ಜಗಿದಾಡುವ ಕುದುರೆಗಳ ಸಾಲುಗಳೂ, ಚಿತ್ರಮಯವಾದ ಚಟ್ಟುಗಳನ್ನು ಹಣೆಗೆ ಬಡುಕೊಂಡು ಉಗ್ರರಾಗಿ ಕಾಣುತ್ತಿರುವ ರಜಪೂತ ವೀರರೂ, ನಿಬಿಡವಾಗಿ ಬೆಳೆದ ಗಡ್ಡ ಮೀಸೆಗಳಿಗೆ ಹುರಿಯನ್ನು ಇಕ್ಕುತ್ತ ನಿಂತ ಪ್ರಚಂಡರಾದ ಮುಸಲ್ಮಾನ ಕಲಿಗಳೂ ಅತಿ ವಿಸ್ತೀರ್ಣವಾಗಿರುವ ಆ ಬೈಲು ಹಿಡಿಸದೆ ನಿಂತಿದ್ದರು. ಭೇರಿ ನಗಾರಿ ಮುಂತಾದ ವಾದ್ಯಗಳ ಘನವಾದ ನಿನಾದಕ್ಕೂ, ಜನರ ಕೂಗಾಟಕ್ಕೂ ಒಬ್ಬರ ಮಾತು ಒಬ್ಬರಿಗೆ ಕೇಳಬರದಂತಾಗಿತ್ತು. ಸಾಲುಸಾಲಾಗಿ ತೆರಪಿಲ್ಲದೆ ಹೋಗಿ ಬರುತ್ತಿರುವ ಆ ಜನಸಮ್ಮರ್ದವು ತರಂಗತತಿಗಳಿಂದ ಹೊಯ್ದಾಡುವ ಸಮುದ್ರದಂತೆ ಬಹು ವಿಚಿತ್ರವಾಗಿ ಕಾಣುತ್ತಿತ್ತು.

ಕೆಲಸವಿಲ್ಲದ ಜನರು ರಾಜಮಂದಿರದ ಆಳೋರಿಗೆಯಲ್ಲಿ ಬರಬಾರದಂತೆ ಕೋಟೆಯ ಅಗಸೇಬಾಗಿಲದ ಎರಡೂ ಮಗ್ಗಲಿಗೆ ಎರಡು ಭವ್ಯವಾದ ಆನೆಗಳನ್ನು ನಿಲ್ಲಿಸಿದ್ದರು. ಬಿಚ್ಚುಗತ್ತಿಯ ರಾವುತರು ಹಾದಿಯ ಎರಡೂ ಮಗ್ಗಲಿಗೂ ಸಾಲಾಗಿ ನಿಂತು ಯಾರನ್ನು ಬಿಡಬೇಕು ಯಾರನ್ನು ಬಿಡಬಾರದೆಂಬದನ್ನು ನೋಡುತ್ತಿದ್ದರು. “ಪ್ರತಾಪಶಾಲಿಗಳಾದ ಖಾನ ಖಾನನ್‌ಸಾಹೇಬರು ಬಂದಿದ್ದಾರೆ, ಆದರದಿಂದ ಪ್ರಣಾಮ ಮಾಡಿ ಒಳಗೆ ಕರಕೊಂಡು ಹೋಗಿರಿ.” ಎಂದು ವ್ಯವಸ್ಥಾಪಕನಾದ ಕಾಮದಾರನು ಹೇಳಿದ ಕೂಡಲೆ ಬಾಗಿಲದಲ್ಲಿದ್ದವರೆಲ್ಲರೂ ಆ ಮಹಾತ್ಮನಿಗೆ ಪ್ರಣಾಮ ಮಾಡಿ ಸನ್ಮಾನದಿಂದ ಒಳಕ್ಕೆ ಕರಕೊಂಡು ಹೋದರು. “ಮಹಾ ವೈಭವಶಾಲಿಗಳಾದ ರಾಜಾ ಮಾನಸಿಂಹರು ದಯಮಾಡಿದ್ದಾರೆ. ಎಲ್ಲರೂ ಆಯುಧಗಳನ್ನೆತ್ತಿ ಹಿಡಿದು ಪ್ರಣಾಮ ಮಾಡಿರಿ” ಎಂದು ಆಜ್ಞೆಯಾದ ಕೂಡಲೆ ಆ ರಾಜರನ್ನು ಸನ್ಮಾನದಿಂದ ಒಳಗೆ ಕರದೊಯ್ದರು. ಹೀಗೆ ಎಲ್ಲರಿಗೂ ಅವರವರ ಯೋಗ್ಯತೆಯ ಮೇರೆಗೆ ಸನ್ಮಾನಮಾಡಿ ಸ್ವಾಗತ ಮಾಡುತ್ತಿದ್ದರು.

ಕೋಟೆಯೊಳಗೆ ಹೋದ ಕೂಡಲೆ ಅತಿ ವಿಸ್ತೀರ್ಣವಾದದ್ದೊಂದು ಪಟಾಂಗಣವಿತ್ತು. ಅದರ ನಾಲ್ಕೂ ಮಗ್ಗಲಿಗೆ ರಾಜವಂಶಕ್ಕೆ ಹೊಂದಿದ ಮಹಾತ್ಮರ ಭವ್ಯವಾದ ಮಂದಿರಗಳು ನೋಡಿದವರ ಮನಸ್ಸಿನಲ್ಲಿ ಆಶ್ಚರ್ಯವನ್ನುಂಟುಮಾಡುತ್ತಿದ್ದವು. ಅಗಸೆಯ ಎದುರಿಗಿನ ಭಾಗದಲ್ಲಿ (ಪಟಾಂಗಣದ ಆಚೆಗೆ) ದರಬಾರದ ಭವ್ಯವಾದ ಮಂದಿರವೂ, ಬೇರೆ ದೊಡ್ಡ ದೊಡ್ಡ

ಕಚೇರಿಗಳೂ ಇದ್ದವು. ಅಗಸೆಯಿಂದ ಸಭಾಮಂದಿರಕ್ಕೆ ಹೋಗುವ ಮಾರ್ಗವು ವಿಸ್ತಾರವಾಗಿದ್ದು ಅದನ್ನು ಬಹು ನುಣುಪಾಗಿ ಮಾಡಿದ್ದರು. ದರಬಾರದ ನಿಮಿತ್ತ ಆ ರಾಜಮಾರ್ಗವನ್ನು ತಳಿರುತೋರಣ ಹಂದರುಗಳಿಂದ ಅಲಂಕರಿಸಿದ್ದರು. ಬೀದಿಯ ಎರಡೂ ಮಗ್ಗಲಿಗೂ ರಾವುತರು ಇದಿರು ಬದಿರಾಗಿ ತಮ್ಮ ಕುದುರೆಗಳನ್ನು ಸಾಲು ಹಿಡಿದು ಸಮಾಂತರದ ಮೇಲೆ ನಿಲ್ಲಿಸಿ ಕೊಂಡು ನಿಂತು ಮಧ್ಯದಲ್ಲಿ ಜನರಿಗೆ ಹೋಗಿಬರಲು ಹಾದೀ ಬಿಟ್ಟಿದ್ದರು.

ಲಷ್ಕರೀ ಪೋಷಾಕು ಮಾಡಿಕೊಂಡು ಖಡ್ಗಪಾಣಿಗಳಾಗಿ ನಡೆದಿರುವ ವೀರರೂ, ವಸ್ತ್ರಾಲಂಕಾರಗಳಿಂದ ಭೂಷಿತರಾದ ಶ್ರೀಮಂತರೂ, ಗಂಭೀರವಾದ ಮುಖಮುದ್ರೆಗಳನ್ನು ತಳೆದ ಮಂತ್ರಿಗಳೂ, ಶಾಂತಮೂರ್ತಿಗಳಾದ ಮೌಲವೀ ಪಂಡಿತರೂ, ತಂಬೂರಿ, ವೀಣೆ ಮುಂತಾದ ವಾದ್ಯಗಳನ್ನು ಹೊರಿಸಿಕೊಂಡು ನಡೆದಿರುವ ಗಾಯಕರೂ ಆ ರಾಜಮಾರ್ಗದಿಂದ ಹಿಡಿಸಲಾರದೆ ಅಕಬರನ ಸಭಾಮಂದಿರಕ್ಕೆ ನಡೆದಿದ್ದರು.

ಅತ್ಯುನ್ನತವಾಗಿರುವ ಆ ಸಭಾಮಂದಿರವನ್ನು ಆ ದಿವಸ ಬಹು ಪರಿಷ್ಕಾರವಾಗಿ ಅಲಂಕರಿಸಿರುವದರಿಂದ ಇದು ಕುಬೇರನ ಸಭಾಮಂದಿರಕ್ಕೂ ಹೆಚ್ಚಾದ ಶೋಭೆಯನ್ನು ತಳೆದಿತ್ತು. ಪೃಗ್ಭಾಗದಲ್ಲಿ ಭವ್ಯವಾದದ್ದೊಂದು ಬೈಲುಪಡಸಾಲೆ ಇದ್ದು ಆ ಪಡಸಾಲೆಯಿಂದ ಒಳಗೆ ಹೋದ ಕೂಡಲೆ ಅತಿ ಶೋಭಾಯಮಾನವಾಗಿರುವ ಸಭಾಸ್ಥಾನವಿರುವದು. ಜಗತ್ಪ್ರಸಿದ್ಧರಾದ ಚಿತ್ರಕಲಾನಿಪುಣರು ಆ ಸಭಾಮಂದಿರದ ಗೋಡೆಗಳ ಮೇಲೆ ಅತಿ ಮನೋಹರವಾಗಿರುವ ಚಿತ್ರಗಳನ್ನು ತೆಗೆದಿದ್ದರು. ಮೇಲ್ಭಾಗದಲ್ಲಿ ಪೂರ್ವಕ್ಕೆ ಸಹಸ್ರಾಂಶುವಾದ ಸೂರ್ಯನಂತೆ ಕಾಣುವ ಕಿಟಕಿಯಿದ್ದು ಆ ಕಿಟಕಿಗೆ ಸಮಾಂತರವಾಗಿ ನಾಲ್ಕೂಗೋಡೆಗಳ ಮೇಲೆ ಮೇಷ, ವೃಷಭಾದಿ ಹನ್ನೆರಡು ರಾಶಿಗಳ ಚಿತ್ರಗಳನ್ನು ನೋಡಲಾಗಿ ಸೂರ್ಯನ ಸುತ್ತಲೂ ರಾಶಿಚಕ್ರವು ಧಾವಿಸುತ್ತಿರುವದೋ ಎಂಬಂತೆ ಭಾಸವಾಗುತ್ತಿತ್ತು. ನಭೋನೀಲವಾಗಿ ಕಾಣಿಸುವಂತೆ ವರ್ಣಿಸಿದ ಮೇಲ್ಕಟ್ಟಿನಲ್ಲಿ ಬಂಗಾರದ ಬಣ್ಣದಿಂದ ತಾರಕೆಗಳ ಚಿತ್ರಗಳನ್ನು ಬಹು ಕೌಶಲ್ಯದಿಂದ ಬರೆದಿದ್ದರು. ವಿಸ್ತೀರ್ಣವಾಗಿರುವ ಆ ಮಂದಿರದ ನೆಲತುಂಬ ಚಿತ್ರಮಯವಾಗಿ ಕಾಣುತ್ತಿರುವ ರತ್ನಗಂಬಳಿ ಗಳನ್ನು ಹಾಸಿ ಗೋಡೆಗಳಗುಂಟ ಅಸಂಖ್ಯವಾದ ಜರತಾರೀ ತಿವಾಸಿಗೆ

ದಿಂಬಗಳನ್ನು ಇಟ್ಟಿದ್ದರು. ಸಭಾಮಂದಿರದ ಪೃಗ್ಭಾಗದಲ್ಲಿ ಎತ್ತರವಾದ ಕಟ್ಟೆಯ ಮೇಲೆ ಬಾದಶಹನ ಘನವಾದ ಸಿಂಹಾಸನವನ್ನು ಇರಿಸಿದ್ದರು. ಶಹಾಜಹಾನನ ಅನರ್ಘವಾದ ಮಯೂರಾಸನದ ಸೊಬಗು ಅಕಬರನ ಸಿಂಹಾಸನದಲ್ಲಿ ಇಲ್ಲದಿದ್ದರೂ ಸಾಮ್ರಾಜ್ಯಸ್ಥಾಪಕನಾದ ಆ ಪ್ರತಾಪಶಾಲಿಯ ಸಿಂಹಾಸನದ ಪ್ರಾಶಸ್ತ್ಯವೆಯು ವಿಲಾಸಗಾರನಾದ ಶಹಾಜಹಾನನ ಸಿಂಹಾಸನಕ್ಕೆ ಹೇಗೆ ಬಂದೀತು ?

ಅನೇಕ ಪ್ರಕಾರದ ವೇಷ ಭಾಷೆಯವರಾದ ಮಹನೀಯರೆಲ್ಲರೂ ಕ್ರಮ ಕ್ರಮದಿಂದ ಸಭಾಮಂದಿರದಲ್ಲಿ ಪ್ರವೇಶಮಾಡಿ ತಮತಮಗೆ ಉಚಿತವಾದ ಆಸನಗಳಲ್ಲಿ ಕುಳಿತುಕೊಂಡರು. ಮುಸಲ್ಮಾನರು, ರಜಪೂತರು, ಸೀಖರು, ಬಂಗಾಲಿಗಳು, ಗುರ್ಜರರು, ಕರ್ನಾಟಕರು, ಚೀನದವರು, ಯುರೋಪದವರು ಹೀಗೆ ಅನೇಕ ಜನಾಂಗದವರು ತಮ್ಮ ತಮ್ಮ ದೇಶಭೇದ ಜಾತಿಭೇದಗಳನ್ನು ಮರೆತು ಸಮಾನಸ್ಕಂಧರಾಗಿ ಆದರದಿಂದ ಮಾತುಕಥೆಗಳನ್ನಾಡುತ್ತ ಕುಳಿತರು. ಬಾದಶಹನು ದರಬಾರಕ್ಕೆ ಬರಲು ಹೊರಟನೆಂದು ಸೂಚಿಸುವದಕ್ಕಾಗಿ ಚೌಘಡದವರು ಬಹು ಇಂಪಾಗಿ ತಮ್ಮ ವಾದ್ಯಗಳನ್ನು ಬಾರಿಸಿದರು.

ಸಭಾಸದರೆಲ್ಲರೂ ಸಾವಧಾನಚಿತ್ತರಾಗಿ ಬಾದಶಹನು ಬರುವ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತರು. ತುಸು ಹೊತ್ತಿನಲ್ಲಿಯೇ ಭಾಲದಾರನೊಬ್ಬನು ಬಂದು "ಎಲ್ಲರೂ ಕೇಳಿರಿ! ಸರ್ವಶಕ್ತಿಮಾನ್ ಪ್ರಭುವಾದ ಪರಮಾತ್ಮನ ಪ್ರತಿನಿಧಿಗಳಾದವರೂ, ಸಕಲ ರಾಜಾಧಿರಾಜರೂ, ಪುಣ್ಯಪ್ರತಾಪಶಾಲಿಗಳೂ ಆದ ಅಕಬರಶಹಾ ಬಾದಶಹರವರು ಕೃಪಾವಂತರಾಗಿ ಪ್ರಜಾಜನರಿಗೆ ಸಂತೋಷವನ್ನೀಯಲು ಈ ಸಭೆಗೆ ದಯಪಾಲಿಸಿರುವರು. ಎಲ್ಲರೂ ಎದ್ದು ಅವರಿಗೆ ಸನ್ಮಾನದಿಂದ ಪ್ರಣಾಮಮಾಡತಕ್ಕದ್ದು" ಎಂದು ಸೂಚಿಸುವಷ್ಟರಲ್ಲಿಯೇ ಮತ್ತೊರ್ವ ಭಾಲದಾರನು ಬಂದು "ಮಹಾಪ್ರಭುಗಳು ಹೀಗೆ ದಯಮಾಡಿ ಈ ಮಹಾಸಿಂಹಾಸನವನ್ನು ಅಲಂಕರಿಸಬೇಕು!" ಎಂದು ಶಿಷ್ಟಾಚಾರಕ್ಕನುಸರಿಸಿ ಬಾದಶಹರಿಗೆ ಸಿಂಹಾಸನದ ಮಾರ್ಗವನ್ನು ತೋರಿಸಿದನು. ಪ್ರಸನ್ನವದನನಾದ ಅಕಬರನು ಮುಗುಳುನಗೆ ನಗುತ್ತ ಸಿಂಹಾಸನವನ್ನು ಅಲಂಕರಿಸಿ ಪ್ರಜಾಜನರು ಮಾಡಿದ ಪ್ರಣಾಮಗಳನ್ನು ಆದರದಿಂದ ಸ್ವೀಕರಿಸಿದನು.

ಅಕಬರನು ಉನ್ನತಾಂಗನೂ, ವಿಶಾಲವಕ್ಷನೂ, ಅಜಾನುಬಾಹುವೂ ಆದ ಪುರುಷನು. ಅವನು ತುಸು ಸಾದಗಪ್ಪಿನವನಾಗಿದ್ದರೂ ಸುಂದರನೂ, ತೇಜಸ್ವಿಯೂ ಆಗಿದ್ದನೆಂದು ಹೇಳಬಹುದು. ಲೋಕೈಕವೀರನೂ, ಮೇಧಾವಿಯೂ, ಉದಾರನೂ, ದಯಾಪರನೂ ಆದ ಆ ಚಕ್ರವರ್ತಿಗೆ ದಂಭವೆಷ್ಟು ಮಾತ್ರವೂ ಇದ್ದಿಲ್ಲ. ಅವನಿಗೆ ಒಪ್ಪುತ್ತಿರುವ ಪೋಷಾಕು ಮೇಲ್ತರದ್ದೂ ಸರಿ; ಆದರೆ ಉಳಿದ ರಾಜರಂತೆ ಅದಕ್ಕೆ ಅವನು ಮುತ್ತುಮಾಣಿಕಗಳನ್ನು ಪೋಣಿಸಿಕೊಂಡಿದ್ದಿಲ್ಲ.

ಪ್ರಸ್ತುತವಾದ ಕಾಲಕ್ಕೆ ಅಕಬರನಿಗೆ ಸುಮಾರು ಐವತ್ತಾರು, ಐವತ್ತೇಳು ವರ್ಷಗಳಾಗಿರಬಹುದು. ಪ್ರಚಂಡವಾದ ಸಾಮ್ರಾಜ್ಯದ ಭಾರವನ್ನು ಹೊತ್ತುಕೊಂಡಿದ್ದನಾದ್ದರಿಂದ ಅವನು ತನ್ನ ವಯಸ್ಸಿಗಿಂತಲೂ ಹೆಚ್ಚಿಗೆ ವೃದ್ಧನಾಗಿ ಕಾಣುತ್ತಿದ್ದನು. ಅವನು ಇಂದೊಂದು ಹೊಸ ಪ್ರಾಂತವನ್ನು ಗೆದ್ದನಿಲ್ಲವೋ ಎಂಬಷ್ಟರಲ್ಲಿಯೇ ಬೇರೊಂದು ಪ್ರಾಂತದಲ್ಲಿ ಸುವ್ಯವಸ್ಥೆಯನ್ನು ಇಡಬೇಕಾಗುತ್ತಿತ್ತು. ಬಂಗಾಲದಲ್ಲಿ ಇಂದು ಅವನು ಅಯುಬಖಾನನ ಪಾರಿಪತ್ಯವನ್ನು ಮಾಡಿದನೆಂದೆನ್ನುವದರೊಳಗಾಗಿಯೇ ನಾಳೆಗೇ ಗುಜರಾಥದಲ್ಲಿ ಬಂಡು ಎದ್ದಿತೆಂಬ ವಾರ್ತೆ ಬಂದಿತ್ತೇ. ಶತ್ರುಗಳನ್ನು ಮುರಿದು ನಾನು ನಿಶ್ಚಿಂತನಾದೆನೆಂದು ಅವನು ಸಂತೋಷಪಡುವಾಗಲೇ ಮನೆಯ ಮಗನಾದ ಸಲೀಮನೇ ಬಂಡು ಮಾಡಿರುವನು. ಹೀಗೆ ಅವಿಶ್ರಾಂತ ಶ್ರಮಪಟ್ಟು ಸಕಲ ಪ್ರಜರ ಸ್ತುತಿಗೆ ಪಾತ್ರನಾಗಬೇಕಾದರೆ ಆ ಮಹಾತ್ಮನಿಗೆ ಮಾನಸಿಕ, ಶಾರೀರಿಕ ಶ್ರಮಗಳನ್ನು ಎಷ್ಟಾದರೂ ಸಹಿಸಬೇಕಾಗಿರಬಹುದು! ಅಕಬರನ ಕೂದಲು ಬೆಳ್ಳಗಾಗಿದ್ದರೂ, ಅವನ ಹಣೆಯ ಮೇಲೆ ಚಿಂತೆಯ ಗೆರೆಗಳು ಮೂಡಿದ್ದರೂ, ಅವನ ಗಲ್ಲಗಳು ಪಚ್ಚುಬಿದ್ದು ಹೋಗಿದ್ದರೂ ಆ ಮಹಾಪ್ರಭುವು ಅಧಿಕವಾಗಿಯೇ ಶೋಭಿಸುತ್ತಿದ್ದನು. अलंकरोति हि जरा, राजामात्य भिषग्यतीन्.

ಪ್ರಣಾಮಗಳ ಮರ್ಯಾದೆ ಆದ ಬಳಿಕ ದರಬಾರದ ಕೆಲಸಕ್ಕೆ ಪ್ರಾರಂಭವಾಯಿತು. ಅನೇಕವಾದ ರಾಜಕಾರಣಗಳ ಚರ್ಚೆಯಾಯಿತು. ಪರರಾಯರ ನಿಯೋಗಿಗಳು ತಂದ ಕಾರ್ಯದ ವಿಚಾರವಾಯಿತು. ಸುಭೇದಾರರು ತಮ್ಮ ತಮ್ಮ ತೊಂದರೆಗಳನ್ನು ಬಾದಶಹನ ಚರಣಾರವಿಂದಕ್ಕೆ ನಿವೇದಿಸಿ ತಮ್ಮ ಕರ್ತವ್ಯಗಳನ್ನು ಕೇಳಿಕೊಂಡರು. ದುಃಖಿತರ ವಿನಂತಿಗಳನ್ನು ಕೇಳಿಕೊಂಡು

ಬಾದಶಹನು ವಿಚಾರಮಾಡುವೆನೆಂದು ಅವರಿಗೆ ಆಶ್ವಾಸನ ಕೊಟ್ಟನು. ಬಳಿಕ ಯುದ್ಧಗಳಲ್ಲಿ ಪರಾಕ್ರಮವನ್ನು ತೋರಿಸಿದ ವೀರರಿಗೂ, ರಾಜ್ಯಕಾರಭಾರ ಗಳನ್ನು ದಕ್ಷತೆಯಿಂದ ಮಾಡಿದ ಅಧಿಕಾರಿಗಳಿಗೂ, ಪಂಡಿತರಿಗೂ, ಕವಿಗಳಿಗೂ ಆ ಪ್ರಸಂಗದಲ್ಲಿ ಬಾದಶಹನು ಉಂಬಳಿಗಳನ್ನೂ, ಧನಕನಕ ವಸ್ತ್ರಾಭರಣ ಗಳನ್ನೂ ಬಹುಮಾನವಾಗಿ ಕೊಟ್ಟನು. ಕೆಲವರಿಗೆ ಹೊಸ ಹೊಸ ಅಧಿಕಾರ ಗಳೂ, ಬಹುಮಾನದ ಬಿರುದುಗಳೂ ಕೊಡಲ್ಪಟ್ಟವು. ಯುದ್ಧದಲ್ಲಿ ಪರಾಜಿತ ರಾದ ಶತ್ರುಗಳನ್ನು ಅಕಬರನು ಸನ್ಮಾನಪೂರ್ವಕವಾಗಿ ಬಿಗಿದಪ್ಪಿಕೊಂಡು ಅವರ ಮನಸ್ಸಿನಲ್ಲಿಯ ಕಲ್ಮಷಗಳನ್ನು ಹಿಂಡಿ ತೆಗೆದನು. ಆ ದಿವಸ ಸಭೆಗೆ ಬಂದು ಸಂತುಷ್ಟರಾಗದೆ ಹೋದವರಿಲ್ಲ.

"ಪ್ರಿಯಪುತ್ರನಾದ ಯುವರಾಜ ಸಲೀಮಶಹಾ,...." ಎಂದು ಬಾದ ಶಹನು ಉಪಕ್ರಮಿಸಿದ ಕೂಡಲೆ ಭಾಲದಾರ ಚೋಪದಾರರು "ಸಾವಧಾನ! ಸಾವಧಾನ! ಸಕಲಭೂಮಂಡಲಾಧೀಶ್ವರರ ದಿವ್ಯವಚನಗಳನ್ನು ಕೇಳಿರಿ!" ಎಂದು ಹೇಳಿ ಸಭಾಸದರ ಧ್ವನಿಗಳನ್ನು ನಿಲ್ಲಿಸಿದರು.

"ಸಲೀಮಶಹಾ, ಯೌವನದ ಮದದಲ್ಲಿ ಯಾರಾದರೂ ತುಸು ತಪ್ಪು ಮಾಡುವದುಂಟು. ನೀನೇನು ತಪ್ಪು ಮಾಡಿದ್ದರೂ ನಾವು ನಿನ್ನನ್ನು ಕ್ಷಮಿಸಿದ್ದೇವೆ. ಇನ್ನು ಮೇಲೆ ನೀನು ಜಾಣನಂತೆ ವರ್ತಿಸಿ ನಮಗೆ ಸಂತೋಷ ವನ್ನು ಕೊಡುವವನಾಗು. ಈ ದರಬಾರದಲ್ಲಿ ಅಗ್ರಮರ್ಯಾದೆಯು ನಿನ್ನ ದಾದ್ದರಿಂದ ನಾವು ಈ ಅನರ್ಘವಾದ ಖಡ್ಗವನ್ನೂ, ಈ ಮಹಾವಸ್ತ್ರವನ್ನೂ ನಿನಗೆ ಸಮರ್ಪಿಸುತ್ತೇವೆ" ಎಂದು ಹೇಳಿ ಬಾದಶಹನು ಆ ವಸ್ತುಗಳನ್ನು ಸಲೀಮನ ಸ್ವಾಧೀನಮಾಡಿದನು.

ಸಲೀಮನು ಸಿಂಹಾಸನಕ್ಕೆ ಪ್ರಣಾಮಮಾಡಿ ಆ ಬಹುಮರ್ಯಾದೆ ಯನ್ನು ಸ್ವೀಕರಿಸಿದನು. ಬಂದಿಗಳು ಅಕಬರನ ಔದಾರ್ಯವನ್ನೂ, ಜಾಣತನ ವನ್ನೂ ಕೊಂಡಾಡಿ ಹಾಡಿದರು. ಉಳಿದ ರಾಜವಂಶಜರಿಗೆ ತಾರತಮ್ಯಾನು ಸಾರವಾಗಿ ಮರ್ಯಾದೆಗಳಾದವು.

"ಅಂಬರದ ಮಹಾರಾಜರಾದ ಮಾನಸಿಂಗಜೀ, ಯುದ್ಧಗಳ ಮೂಲಕ ನಿಮಗೆ ನಮ್ಮ ದರಬಾರಕ್ಕೆ ಬರಲು ಅವಕಾಶವಿಲ್ಲದಿದ್ದರೂ, ನಿಮ್ಮ ಕೀರ್ತಿ ದೇವತೆಯು ಎಡೆಬಿಡದಲೆ ನಮ್ಮ ಮುಂದೆ ಹಾಯ್ದು ಹೋಗದೆ ಬಿಟ್ಟೀ

ಇಲ್ಲ. ನೀವು ನಮ್ಮ ಸಾಮ್ರಾಜ್ಯದ ಆಧಾರಸ್ತಂಭರೇ ಆಗಿರುವಿರಿ. ನಾನೇನು ಕೊಟ್ಟರೂ ನಿಮ್ಮ ಉಪಕಾರ ತೀರದು " ಎಂದು ನಿಷ್ಕಲಂಕ ಹೃದಯನಾದ ಅಕಬರನು ರುಚಿರವಾದ ವಾಣಿಯಿಂದ ನುಡಿದನು.

" ಪ್ರತಾಪಶಾಲಿಗಳಾದ ಸಾರ್ವಭೌಮರೆ, ನನ್ನ ಹೃದಯದಲ್ಲಿ ನೆಲಸಿದ್ದಷ್ಟು ಕೃತಜ್ಞತೆಯನ್ನು ನಿವೇದಿಸುವಷ್ಟು ವಕ್ತೃತ್ವವು ನನ್ನಲ್ಲಿಲ್ಲ. ಪ್ರಭೋ, ಈ ಮಾನಸಿಂಹನ ಖಡ್ಗವು ಈ ಚರಣಗಳ ಸೇವೆಯಲ್ಲಿ ಯಾವಾಗಲೂ ತತ್ಪರವಾಗಿರುವದು " ಎಂದು ಆ ವೃದ್ಧನಾದ ವೀರನು ತನ್ನ ಗಂಭೀರವಾದ ವಾಣಿಯಿಂದ ಮಾತಾಡಿದನು.

" ಮಾನಸಿಂಗಜೀ, ಕಾಲಕಾಲಕ್ಕೆ ನೀವು ಮಾಡುತ್ತ ಬಂದ ಮಹತ್ ಕಾರ್ಯಗಳನ್ನು ನೆನಿಸಿ ಇಂದು ನಾನು ನಿಮಗೆ "ಸಾತಹಜಾರಿಯು" (ಏಳು ಸಹಸ್ರ ಸೈನ್ಯವನ್ನು ಸ್ವತಂತ್ರವಾಗಿ ತನ್ನ ಕೈಯಲ್ಲಿ ಇಟ್ಟುಕೊಂಡಿರುವ ಅಧಿಕಾರ) ಅಧಿಕಾರವನ್ನು ಕೊಡುತ್ತೇವೆ. ಈ ಮರ್ಯಾದೆಯು ಇದುವರೆಗೆ ರಾಜವಂಶಜರಿಗೆ ಮಾತ್ರ ಸಲ್ಲುತ್ತ ಬಂದಿದೆ. ಹೊರತಾಗಿ ಇದನ್ನು ನಾವು ಅನ್ಯರಿಗೆ ಕೊಟ್ಟವರಲ್ಲ. ಇಕೋ ಈ ಮಹಾವಸ್ತ್ರವನ್ನು ಸ್ವೀಕರಿಸಿರಿ. "

ಮಾನಸಿಂಹನು ಆ ಬಹುಮಾನದ ವಸ್ತ್ರಗಳನ್ನು ಸ್ವೀಕರಿಸಿ ಬಾದಶಹನಿಗೆ ಪ್ರಣಾಮಮಾಡಿದನು.

" ಖಾನಖಾನನ್‌ಸಾಹೇಬ! " ಎಂದು ನಗುತ್ತ ಬಾದಶಹನು ಖಾನ್ ಖಾನನ್‌ನನ್ನು ಕರೆದನು. ಖಾನನು ಬಂದು ಪ್ರಣಾಮ ಮಾಡಿದ ಬಳಿಕ " ಖಾನಖಾನನ್, ನೀವು ಮಾನಸಿಂಗಜೀ ಅವರ ಸಮಾನರಾದ ಪರಾಕ್ರಮಿಗಳಾಗಿರುವದಲ್ಲದೆ ಕವಿಗಳೂ ಆಗಿರುವಿರಿ. ಬನ್ನಿರಿ ನಿಮಗೆ 'ಪಾಚಹಜಾರಿಯು' ಬಹುಮಾನವನ್ನು ಕೊಡುತ್ತೇನೆ. ಈ ವಸ್ತ್ರಗಳನ್ನು ಸ್ವೀಕರಿಸಿರಿ " ಎಂದು ಹೇಳಿ ಅಪ್ಪಣೆಕೊಟ್ಟನು.

" ಪೃಥ್ವೀರಾಜ, ಹೀಗೆ ಬನ್ನಿರಿ. " ಎಂದು ಅಕಬರನು ಮಂದಹಾಸದಿಂದ ನುಡಿದು ಅವನನ್ನು ಕರೆದು " ಬಿಕಾನೇರದ ತರುಣರಾದ ರಾಜರೆ, ನೀವೂ ಮಹಾವೀರರೂ, ನಿಪುಣರಾದ ಕವಿಗಳೂ ಆಗಿರುವಿರಿ. ವರ್ಣನಾಪೂರಿತವಾದ ನಿಮ್ಮ ಕವಿತೆಗಳನ್ನು ಓದಿದರೆ ರಜಪೂತರ ಪರಾಕ್ರಮದ ಕೃತ್ಯ

ಗಳನ್ನು ಪ್ರತ್ಯಕ್ಷವಾಗಿ ಕಂಡಂತಾಗುತ್ತದೆ."

"ರಾಜಾಧಿರಾಜ, ರಜಪೂತರ ಪರಾಕ್ರಮದ ವರ್ಣನೆಯನ್ನು ಮಾಡುವಷ್ಟು ಯೋಗ್ಯತೆ ನನ್ನದಲ್ಲ. ನಮ್ಮ ಪೂರ್ವಜರ ಅದ್ಭುತವಾದ ಪರಾಕ್ರಮವನ್ನು ವರ್ಣಿಸಬೇಕಾದರೆ ಪೂರ್ವಕಾಲದ ವಂದೀಯರಾದ ಚಾರಣರೇ ಸಮರ್ಥರು. ಅನ್ಯರ ಕೆಲಸವದಲ್ಲ. ಆ ಚಾರಣರೂ ಹೊರಟು ಹೋದರು. ಪರಾಕ್ರಮಶಾಲಿಯಾದ ರಾಣಾಪ್ರತಾಪಸಿಂಹನು ಹೋದಂದಿನಿಂದಗ ಸತ್ವಶಾಲಿಳಾದ ರಜಪೂತರ ಹೆಸರೇ ಅಳಿದುಹೋಯಿತು! ನಾವು ಕವಿಗಳಾಗಿ ವರ್ಣಿಸುವದಾದರೂ ಏನು?" ಎಂದು ಪೃಥ್ವೀರಾಜನು ವ್ಯಸನದಿಂದ ನುಡಿದನು.

"ಪೃಥ್ವೀರಾಜ, ನೀನೇ ಆ ಪ್ರತಾಪಸಿಂಹನ ಪರಾಕ್ರಮದ ವರ್ಣನೆಯನ್ನು ಬಹುಪರಿಯಾಗಿ ಮಾಡಿದ್ದರಿಂದಲೇ ಆ ಅಸಹಾಯಶೂರನು ಅಖಂಡವಾಗಿ ನಮ್ಮೊಡನೆ ಕಾದಿದನು. ನಮಗೆ ನೀನು ದ್ರೋಹಿ ಎಂದು ನಾವು ಯಾಕೆ ತಿಳುಕೊಳ್ಳಬಾರದು?" ಎಂದು ನಗುತ್ತ ವೀರರ ಪಕ್ಷಪಾತಿಯಾದ ಅಕಬರನು ಕೇಳಿದನು.

"ಪ್ರಭೋ, ಪ್ರತಾಪಸಿಂಹನ ಪರಾಕ್ರಮವನ್ನು ಕಂಡು ಕೌತುಕಪಡುವದು ಅಪರಾಧವಾಗಿದ್ದರೆ ನನಗೆ ಒಡೆಯರಾದವರೊಬ್ಬರು ಇಂಥದೇ ಅಪರಾಧವನ್ನು ಮಾಡಿರುವರಲ್ಲ!"

"ಶಾಬಾಸ್! ಪೃಥ್ವಿರಾಜ, ನಮ್ಮ ಕಣ್ಣುಗಳಲ್ಲಿಯೇ ನಮ್ಮ ಬೊಟ್ಟುಗಳನ್ನು ಆಡಿಸಿದಿರಿ! ಪೃಥ್ವೀರಾಜ, ಅಜಿಂಕ್ಯನಾದ ಪ್ರತಾಪಸಿಂಹನ ಪರಾಕ್ರಮದ ವರ್ಣನೆಯನ್ನು ಮಾಡದಿದ್ದವನೇ ಪಾಪಿಯು! ಪೃಥ್ವಿರಾಜ, ನಾನು ವಿನೋದಕ್ಕಾಗಿ ಹಾಗೆ ಆಡಿದೆನು. ನಿಮ್ಮಂಥ ಸ್ವಾಭಿಮಾನವುಳ್ಳವರು ದ್ರೋಹಿಗಳೇ? ಈ ಮಹಾವಸ್ತ್ರವನ್ನು ಸ್ವೀಕರಿಸಿರಿ. ಮಾನಸಿಂಗಜೀ, ಅಮೀರಖಾನನನ್ನು ಕೊಂದು ಪಂಜಾಬದ ಬಂಡು ಮುರಿದ ವೀರನೆಲ್ಲಿ? ಆ ಹುಡುಗನ ಹೆಸರು ನರೇಂದ್ರನಾಥನಲ್ಲಿ?"

"ಹುಜೂರ್, ಅಹುದು. ಈ ಪಾದಪೀಠದ ಸೇವಕನು ಕೇವಲ ನನ್ನ ಶಿಷ್ಯನು. ಅವನು ಇಲ್ಲಿಯೇ ಬಾದಶಹರ ಮುಂದೆ ನಿಂತಿದ್ದಾನೆ. ಅವಲೋಕಿಸಬೇಕು" ಎಂದು ಮಾನಸಿಂಹನು ಹೇಳಿ ಸಂತೋಷದ ನಗೆ ತೋರಿದನು.

" ನರೇಂದ್ರನಾಥರಾಯ್, ನಿನ್ನ ಪರಾಕ್ರಮದ ವಾರ್ತೆಯನ್ನು ಕೇಳಿ ನಾವು ಸಂತುಷ್ಟರಾಗಿರುತ್ತೇವೆ. ನಿನಗೆ ನಾವು " ಬಹದ್ದೂರ " ಎಂಬ ಬಿರುದು ಕೊಟ್ಟಿದ್ದೇವೆ. ಈ ಮಹಾವಸ್ತ್ರವನ್ನು ಸ್ವೀಕರಿಸು, ನರೇಂದ್ರನಾಥ ರಾಯ್ ಬಹಾದ್ದೂರ " ಎಂದು ಬಾದಶಹನು ಸ್ಮಿತವದನನಾಗಿ ನುಡಿದನು.

ಇಷ್ಟಾದ ಬಳಿಕ ತಾಂಬೂಲ ಗಂಧಪುಷ್ಪಗಳಾಗಿ ಸಭಾವಿಸರ್ಜನ ವಾಯಿತು. ಯಾರ ಬಾಯಿಯಲ್ಲಿಯೂ " ಏನು ಔದಾರ್ಯವಿದು! " " ಏನು ಪ್ರೇಮವಿದು ! " " ಏನು ಪ್ರಜಾವಾತ್ಸಲ್ಯವಿದು ! " ಎಂಬ ಉದ್ಗಾರಗಳು ಹೊರಡುತ್ತಿದ್ದವು.

## ಇಪ್ಪತ್ತೊಂಬತ್ತನೆಯ ಅಧ್ಯಾಯ

## ಅಕಬರನು ಕಣ್ಣಿಗೆ ನೀರು ತಂದನು

" ಆನೆಯ ಭಾರ ಆನೆಗೆ "

—ನಾಣ್ಣುಡಿ

ದರಬಾರದ ಮರುದಿವಸ ಅಕಬರನು ಆಪ್ತಾಲೋಚನದ ಸಭೆಯನ್ನು ಕೂಡಿಸಿದನು. ಈ ಸಭಾಮಂದಿರವು ದರಬಾರದ ಮಹಾಮಂದಿರಕ್ಕಿಂತ ಸಣ್ಣದಾಗಿತ್ತು. ಅಲ್ಲಿ ಸಿಂಹಾಸನವನ್ನಿಟ್ಟಿರುತ್ತಿದ್ದಿಲ್ಲ. ಬಾದಶಹನಿಗಾಗಿ ಒಂದು ಉಚ್ಚಾಸನವೂ, ಇತರ ಸಭಾಸದರಿಗಾಗಿ ಬೇರೆ ಆಸನಗಳೂ ಇರುತ್ತಿದ್ದವು. ಸಿಂಹಾಸನಾರೂಢನಾದ ಚಕ್ರವರ್ತಿಯ ಆಢ್ಯತೆಯು ಈ ಮಂದಿರದಲ್ಲಿ ಕುಳಿತ ಅಕಬರನಲ್ಲಿ ಕಂಡುಬರುತ್ತಿದ್ದಿಲ್ಲ. ರೋಗಿಯು ಚಿಂತಾಕುಲನಾಗಿ ವೈದ್ಯರ ಮುಂದೆ ಕುಳಿತಂತೆ ಇಲ್ಲಿ ಅಕಬರನು ತನ್ನ ದುಃಖಗಳನ್ನು ಪರಮವಿಶ್ವಾಸದವರಾದ ತನ್ನ ಮಂತ್ರಿಗಳ ಮುಂದೆ ತೋಡಿಕೊಳ್ಳುತ್ತಿದ್ದನು. ಈ ಸಭೆಗೆ ರಾಜಾ ಮಾನಸಿಂಹನೂ, ಖಾನಖಾನನ್‌ನೂ, ಅಬೂಲ ಫಾಜಲ್ಲನೂ ಹೀಗೆ ಮೂವರೇ ಬಂದಿದ್ದರು.

" ಮೋಲವೀ ಅಬೂಲ ಫಾಜಲಸಾಹೇಬ, ಮಾನಸಿಂಹಜೀ, ಖಾನಖಾನನ್ ಮನುಷ್ಯನ ವೈಭವವು ಹೆಚ್ಚು ಹೆಚ್ಚಾಗಿ ಬೆಳೆದಂತೆ ಅವನ ಚಿಂತೆ

ಯಾದರೂ ಅದೇ ಪ್ರಮಾಣದಿಂದ ಹೆಚ್ಚಾಗುವದುಂಟು. ತಕ್ಕಡಿಯ ಒಂದು ಪರಡಿಯಲ್ಲಿ ಹಾಕಿದ ಬೆಲೆಯುಳ್ಳ ಪದಾರ್ಥವು ಭಾರವಾಗಿ ಕಂಡರೆ ಬಣಜಿಗನು ಈಚೆಯ ಪರಡಿಯಲ್ಲಿ ಕಲ್ಲುಗಳನ್ನು ಹಾಕಿ ದಂಡಿಗೆಯನ್ನು ಸಮ ತೋಲವಾಗಿ ಮಾಡುತ್ತಿರುವಂತೆ, ಪರಮಾತ್ಮನು ವೈಭವಶಾಲಿಗೆ ಚಿಂತೆ ಯೆಂಬ ದೊಡ್ಡ ದಡಿಗಲ್ಲು ಕಟ್ಟಿ ಜಗತ್ತಿನಲ್ಲಿ ಸಮತೋಲತೆಯನ್ನು ರಕ್ಷಿಸು ವನು. ನಿಮ್ಮೆಲ್ಲರ ಸಹಾಯದಿಂದ ದಿಗ್ವಿಜಯಿಯೆಂದು ಹೊಗಳಿಸಿಕೊಂಡೆನು; ನನ್ನ ಮನೆಯು ಸಕಲ ಸಂಪತ್ತುಗಳಿಗೆ ತವರಮನೆಯಾಯಿತು. ಆದರೇನು? ಪ್ರತ್ಯಕ್ಷ ನನ್ನ ಮಗನೇ ಮುಂದೆ ನನ್ನ ಕೀರ್ತಿಧ್ವಜವನ್ನು ಕಿತ್ತಿ ಈಡಾಡಲು ಸಿದ್ಧನಾಗಿರುವನು. ನಾನು ಪ್ರಜಾಜನರ ಹಿತಕ್ಕೆ ಹೊಣೆಗಾರನಾಗಿರಲು ನಮ್ಮ ಚಿರಂಜೀವನು ಆ ಋಣವನ್ನು ಮುಳುಗಿಸಿಕೊಳ್ಳುವನು. ನನ್ನ ಪಾಶ್ಚಾತ್ ಈ ನನ್ನ ಸಾಮ್ರಾಜ್ಯವು ಹೇಗೆ ಸುಸೂತ್ರವಾಗಿ ಸಾಗೀತೆಂಬ ಬಲವತ್ತರವಾದ ಚಿಂತೆಯಿಂದ ಹಗಲಿರಳು ನನ್ನ ಹೊಟ್ಟೆ ಕಡೆಯುತ್ತದೆ." ಎಂದು ನುಡಿದು ಹಿಮಾದ್ರಿಯಂತೆ ಸ್ಥಿರಚಿತ್ತನಾದ ಅಕಬರನು ಕಣ್ಣಿಗೆ ನೀರು ತಂದನು.

ಖಾನಖಾನನ್ನನು ಬಾದಶಹನಿಗೆ ನೆಲಮುಟ್ಟಿ ಪ್ರಣಾಮ ಮಾಡಿ "ಆಲಂಪನಾ, ಘನವಂತರಾದ ಸಲೀಮಸುಲ್ತಾನರವರು ಇನ್ನೂ ಚಿಕ್ಕವರೇ ಸರಿ. ಅವರಿಂದ ಒಂದೆರಡು ಅಚಾತುರ್ಯದ ಕೆಲಸಗಳು ಆಗಿದ್ದರೂ ಅವರು ಕ್ಷಮೆಗೆ ಪಾತ್ರರಿರುತ್ತಾರೆ. ಈಗಾದರೂ ಏನಾಗಿದೆ? ಮಹಾಪ್ರತಾಪಶಾಲಿ ಗಳಾದ ಬಾದಶಹರವರ ಆಡಳಿತೆಯ ದಿವ್ಯವಾದ ರೀತಿಗಳನ್ನೂ, ಸೋಜ್ವಲ ವಾದ ಆಚರಣಗಳನ್ನೂ ನೋಡಿಕೊಂಡು ಮುಂದೆ ಯುವರಾಜರು ಸನ್ಮಾರ್ಗ ವರ್ತಿಗಳಾಗಿ ಈ ಸಾಮ್ರಾಜ್ಯವನ್ನು ಜನರು ಕೊಂಡಾಡುವಂತೆ ಆಳುವರೆಂದು ನನ್ನ ನಂಬಿಗೆಯುಂಟು." ಎಂದು ಸಲೀಮನ ತಂದೆಯ ಕಿವಿಗೆ ಇಂಪಾಗು ವಂತೆ ಹೇಳಿದನು.

"ಕುರಡನೇನು ಬೇಡುತ್ತಾನೆ! ಆದರೂ ಅಂಥ ದೈವವೆಲ್ಲಿ? ನನ್ನ ಸಿಂಹಾಸನವು ಸಲೀಮನನ್ನು ಬಿಟ್ಟು ಎಲ್ಲಿ ಹೋಗಬೇಕಾಗಿದೆ? ಆದರೂ ನೋಡಿರಿ, ಆ ಅವಿಚಾರಿಯು ಈಗಲೇ ನನ್ನನ್ನು ಪಟ್ಟದಿಂದ ತಳ್ಳಬೇಕೆಂದು ಯತ್ನ ಮಾಡಿದನಲ್ಲ!" ಎಂದು ಬಾದಶಹನು ವ್ಯಸನದಿಂದ ಉಸುರು

ಹಾಕಿದನು.

ಆಗ ಮಾನಸಿಂಹನು ಮುಂದರಿದು “ ಹುಜೂರ್, ಈ ಅವಿಚಾರದ ಬೀಜವು ಸಲೀಮಸುಲ್ತಾನರಲ್ಲಿ ಹುಟ್ಟಿದ್ದಲ್ಲ. ಸತ್ಯಶೋಧಕರಾದ ಬಾದ ಶಹನು ನಿರ್ಮಾಣಮಾಡಿದ “ ದೀನ್ ಇಲಾಹಿ ” ಎಂಬ ಸರ್ವಮಾನ್ಯ ವಾದ ಪಂಥವು ದುರಭಿಮಾನಿಗಳಾದ ಮುಲ್ಲಾಗಳಿಗೂ, ಸ್ವಾರ್ಥಪರಾಯಣ ರಾದ ಕೆಲಜನ ಸರದಾರರಿಗೂ ರುಚಿಸಲಿಲ್ಲ. ಆ ಮತ್ಸರಿಗಳು ಉನ್ಮತ್ತರಾದ ಕೆಲಜನ ಸರದಾರರಿಗೆ ದುರ್ಬೋಧನಗಳನ್ನು ಮಾಡಿ ಬಂಡು ಹೂಡಿದರು. ಯುವರಾಜರು ಮುಲ್ಲಾಗಳ ಮೋಸಕ್ಕೆ ಒಳಗಾಗಿ ಅಂಥ ಕೆಲಸ ಮಾಡಿದರು” ಎಂದು ಹೇಳಿದನು.

“ ಮಾನಸಿಂಗಜೀ, ಧರ್ಮದ ದುರಭಿಮಾನವು ಯಾರಿಗೂ ಹಿತ ವನ್ನೀಯಲಾರದು. ಇಂಥ ದುರಭಿಮಾನಕ್ಕಾಗಿಯೇ ಪ್ರಾಚೀನ ಕಾಲಗಳಲ್ಲಿ ನಿರರ್ಥಕವಾಗಿ ಘೋರತರವಾದ ಸಂಗ್ರಾಮಗಳಾಗಿ ಲಕ್ಷಾವಧಿ ಜನರು ತಮ್ಮ ರಕ್ತದ ರೂಪದಿಂದ ಮೂರ್ಖತನವನ್ನು ವ್ಯಕ್ತಪಡಿಸಿದರು. ಪರಮಾತ್ಮನ ಮಕ್ಕಳಾದ ಮನುಷ್ಯರೆಲ್ಲರೂ ಬಂಧುಗಳೇ ಅಲ್ಲವೆ! ಪಂಥಗಳನ್ನು ಸ್ಥಾಪಿಸಿದ ರಾರೋ, ಆ ಪಂಥಗಳೆಂದರೆ ಏನೆಂಬದನ್ನು ಅರಿಯದ ಈ ಕಾಲದ ಮೂಢ ರಾದ ದುರಭಿಮಾನಿಗಳಾರೋ, ವ್ಯರ್ಥವಾಗಿ ಬಂಧುಬಂಧುಗಳೇ ಹೋರಾಡಿ ರಕ್ತದ ಕಾಲುವೆಯನ್ನು ಹರಿಸುತ್ತಿರುವದು ನಮ್ಮ ತಂದೆಯಾದ ಪರಮಾ ತ್ಮನಿಗೆ ಪ್ರಿಯವಾದೀತೆ ? ಧರ್ಮದ ಪುರಸ್ಕರ್ತರೆಂಬವರು (ಅವರು ಮುಲ್ಲಾ ಗಳಿರಲಿ, ಪಾದ್ರಿಗಳಿರಲಿ, ಬ್ರಾಹ್ಮಣರೇ ಇರಲಿ) ತಮ್ಮ ವರ್ಚಸ್ವವನ್ನು ಬೆಳಸಿಕೊಳ್ಳುವದಕ್ಕೆ ಇಂಥ ಕಲಹಗಳನ್ನೆಬ್ಬಿಸಿ ಕಡೆಗೆ ನರಕಕ್ಕೆ ಹೋಗದೆ ಮತ್ತಿನ್ನೆಲ್ಲಿಗೆ ಹೋಗುವರು ? ” ಎಂದು ಸನುವೃತ್ತಿಯಾದ ಆ ಬಾದಶಹನು ತನ್ನ ಅಭಿಪ್ರಾಯವನ್ನು ಹೇಳಿದನು.

ಖಾನಖಾನನ್ನನಿಗೆ ಈ ಅಭಿಪ್ರಾಯವು ರುಚಿಸದಿದ್ದರೂ ಅವನು ದಂಭದಿಂದ ತನ್ನ ಗಡ್ಡವನ್ನು ಸಾವಕಾಶವಾಗಿ ತೀಡುತ್ತ “ ಖುದಾಯುವಂದ, ಸರ್ವಶಕ್ತಿಮಾನರಾದ ಅಲ್ಲಾರವರ ಪ್ರತಿನಿಧಿಗಳು ತಾವು. ತಮ್ಮ ಅಭಿ ಪ್ರಾಯವು ಸರ್ವ ಮತದವರಿಗೂ ಸಮ್ಮತವಾದದ್ದು. ಹಮ್‌ದುಲಿಲ್ಲಾ ! ಹಮ್‌ದುಲಿಲ್ಲಾ ! ” ಎಂದು ನುಡಿದು ತನ್ನ ಹಣೆಯನ್ನು ಮೂರಾವರ್ತಿ

ನೆಲಕ್ಕೆ ಹಚ್ಚಿ ಪ್ರಣಾಮ ಮಾಡಿದನು.

"ಮುಲ್ಲಾಗಳ ಪಾಪ ಮುಲ್ಲಾಗಳ ಸಂಗಡ! ನಮ್ಮ ಮಗನು ಅವರ ವಶನಾಗಿ ಇಂಥ ಅವಿಚಾರದ ಕೃತ್ಯಗಳನ್ನು ಮಾಡಬಹುದೆ? ಇಂಥ ಅವಿಚಾರಿಯು ಮೂವತ್ತುಮೂರು ಕೋಟಿ ಜನ ಪ್ರಜರನ್ನು ಆಳುತ್ತಾನೇನು? ಅವರು ಸುಖವನ್ನು ಕಾಣುವರೇನು?"

ಬಳಿಕ ವಿದ್ವದ್ವರ್ಯನಾದ ಅಬುಲ್‌ಫಾಝುಲ್ಲನಂದದ್ದು: "ಅಲಂಪನಾ, ತಾವು ಚಿಂತೆ ಮಾಡಲಾಗದು ಈ ಪಾದಗಳ ಹಿತವನ್ನು ಸಾಧಿಸುವದೇ ನಮ್ಮ ಜನ್ಮದ ಇತಿಕರ್ತವ್ಯತೆಯು. ಈ ಭೂಮಿಯಲ್ಲಿ ಮನುಷ್ಯನ ಸಾಹಸಕ್ಕೆ ವಶವಾಗದಿದ್ದ ಮಾತು ಯಾವದೂ ಇಲ್ಲ. ನಾನೇ ಇನ್ನೊಂದಾವರ್ತಿ ರಾಜಪುತ್ರರ ಉಪದೇಶಿಕನಾಗಿ ಅವರ ಸನ್ನಿಧಾನದಲ್ಲಿದ್ದು ಅವರನ್ನು ಸನ್ಮಾರ್ಗಕ್ಕೆ ತರಲು ಯತ್ನಮಾಡುತ್ತೇನೆ."

"ಮೋಲವೀಸಾಹೇಬರೇ, ನಿಮ್ಮ ಆಸ್ಥೆಯನ್ನು ಕಂಡು ನನಗೆ ತುಂಬಾ ಸಂತೋಷವಾಗಿದೆ. ದೇವರು ಹಿಂದಕ್ಕೆ ವಿಷ್ಣುಶರ್ಮನ ಪ್ರಯತ್ನಗಳಿಗೆ ಯಶಸ್ಸು ಕೊಟ್ಟಂತೆಯೇ ನಿಮ್ಮ ಪ್ರಯತ್ನಗಳಿಗೂ ಕೊಡಲಿ! ಕೆಟ್ಟ ಅಡಿಗೆಯನ್ನು ನೆಟ್ಟಗೆ ಮಾಡಿದವನೇ ಜಾಣ! ನೀವು ದೊಡ್ಡ ವಿದ್ವಾಂಸರೂ, ಬುದ್ಧಿಶಾಲಿಗಳೂ ಆಗಿರುವಿರಿ. ಏನು ಮಾಡುತ್ತಿರೋ ಮಾಡಿರಿ!" ಎಂದು ಬಾದಶಹನು ಅರ್ಧಮರ್ಧ ನಿರಾಶೆಯಿಂದಲೂ, ಅರ್ಧಮರ್ಧ ಆಸ್ಥೆಯಿಂದಲೂ ಮಾತಾಡಿದನು.

"ಬಾದಶಹರು ನಿರಾಶೆಯನ್ನು ತಳೆಯಕೂಡದು. ನಾನು ನನ್ನ ಕರ್ತವ್ಯವನ್ನು ಸಂಪೂರ್ಣವಾದ ಮನಸ್ಸಿನಿಂದ ಮಾಡುವೆನು" ಎಂದು ಅಬುಲ್ ಫಾಜಲ್ಲನು ವಿನಂತಿ ಮಾಡಿಕೊಂಡನು.

"ಮಾನಸಿಂಗಜೀ, ನೀವಾದರೂ ಆ ಅವಿಚಾರಿಯಾದ ಹುಡುಗನಿಗೆ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳುತ್ತಿರಿ" ಎಂದು ಅಕಬರನು ಮಾನಸಿಂಹನಿಗೆ ಹೇಳಿಕೊಂಡನು.

"ಬಾದಶಹರ ಆಜ್ಞೆಯನ್ನು ನಾನು ಶಿರಸಾವಹಿಸುತ್ತೇನೆ."

"ಮಹಸೀಯರೆ, ಇನ್ನು ಈ ಮಾತು ಸಾಕು. ಚಿಂತೆಗೆ ಬಹಳ ಆಸ್ಪದವನ್ನು ಕೊಟ್ಟರೆ ಅದು ನಮ್ಮನ್ನು ನುಂಗಿಯೇ ಬಿಡುವದು. ಅಂಬರದ

ರಾಜರೆ, ಬಂಗಾಲದಲ್ಲಿ ಸಂಪೂರ್ಣವಾಗಿ ಶಾಂತತೆಯು ನೆಲೆಗೊಂಡಿತೆಂದು ನೀವು ಹೇಳಲಿಲ್ಲವೆ ?" ಎಂದು ಅಕಬರನು ನಗೆಮುಖವನ್ನು ತಾಳಿ ಕೇಳಿದನು.

" ವೈಭವಶಾಲಿಗಳಾದ ಪ್ರಭುಗಳೇ, ಬಂಗಾಲಪ್ರಾಂತದ ಹೆಸರು ಇನ್ನು ಆಫಗಾನರು ಕನಸಿನಲ್ಲಿ ಕೂಡ ನೆನಿಸದಂತೆ ಮಾಡಿದ್ದೇನೆ. ಎಲ್ಲ ಜಮೀನದಾರರೂ, ಉಳಿದ ಜನರೂ ಬಾದಶಹರನ್ನು ಹಾಡಿಹರಸುತ್ತಿರುವರು."

" ಆಗಲಿ. ಮಾನಸಿಂಹಜೀ, ಖಾನಖಾನನ್, ಇನ್ನೊಂದು ಮಹತ್ವದ ಕೆಲಸ ಉಳಿದಿದೆ. "

" ಅದೇನು ಪ್ರಭೋ ? " ಎಂದು ಎಲ್ಲರೂ ಒಂದೇ ಉಸುರಿನಲ್ಲಿ ಕೇಳಿದರು.

" ಚಿತೋಡದ ಮಹಾಪ್ರತಾಪಶಾಲಿಯಾದ ರಾಣಾ ಪ್ರತಾಪಸಿಂಹನು ನಮ್ಮ ಅಧೀನನಾಗದೆ ವೀರಸ್ವರ್ಗವನ್ನು ಹೊಂದಿದನಷ್ಟೆ ? "

" ಅದರ ಚಿಂತೆ ಬಾದಶಹರಿಗೇಕೆ ? ಮೇವಾಡ ಪ್ರಾಂತವನ್ನು ನಾನು ಇನ್ನು ಹದಿನೈದು ದಿವಸಗಳಲ್ಲಿ ಜಯಿಸಿಕೊಂಡು ಬರುವೆನು " ಎಂದು ಖಾನಖಾನನ್ನನು ಆಢ್ಯತೆಯಿಂದ ನುಡಿದನು.

" ಖಾವಿಂದರು ಬೇಕಾದರೆ ನನ್ನನ್ನು ಕಳಿಸಬಹುದು. ಚಿತೋಡದ ರಾಜವಂಶವನ್ನು ನಿರ್ಮೂಲವಾಗಿ ಮಾಡದಿದ್ದರೆ ನನ್ನ ಎದೆಯೇ ಬೇಯುವಂತೆ ಇಲ್ಲ " ಎಂದು ಮಾನಸಿಂಹನು ಮುಂದರಿದು ನುಡಿದನು.

" ಮಾನಸಿಂಹಜೀ, ಖಾನಖಾನನ್, ಅಸಹಾಯಶೂರನೂ ಮಹಾ ಅಭಿಮಾನಿಯೂ, ಸಚ್ಚರಿತ್ರನೂ ಆದ ಪ್ರತಾಪಸಿಂಹನು ಮಡಿದು ಹೋದ ಮೇಲೆ ನಾವು ಯಾರ ಕೂಡ ಯುದ್ಧ ಮಾಡತಕ್ಕದ್ದು ? ಆ ಸಮರಸಿಂಹನು ಜೀವಂತನಿರುವಾಗ ಹೀಗೆ ನೀವು ಯಾರಾದರೂ ವೀಳ್ಯವನ್ನು ಎತ್ತಲಿಕ್ಕೆ ಸಿದ್ಧರಾಗಿದ್ದರೆ ನಾನು ನನ್ನ ಅರ್ಧ ರಾಜ್ಯವನ್ನು ಕೊಡುತ್ತಿದ್ದೆನು. ಮಾನಸಿಂಹಜೀ, ನಾನು ನಿಮ್ಮ ಪರಾಕ್ರಮವನ್ನು ಹೀಯಾಳಿಸಿದೆನೆಂದು ತಿಳಿಯಬೇಡಿರಿ. ಪ್ರತಾಪಸಿಂಹನು ಪ್ರತಾಪಸಿಂಹನೇ ಆಗಿದ್ದನು. ಪ್ರತ್ಯಕ್ಷ ನನಗೆ ಮೇವಾಡದಲ್ಲಿ ನಿಂತು ಆ ವೀರನೊಡನೆ ಯುದ್ಧಮಾಡಬೇಕಾದರೆ ಸಾಕು ಸಾಕಾಗಿ ಹೋಯಿತು. "

" ಪ್ರಭುಗಳಾಡುವದು ಯಥಾರ್ಥವು. ಕಾಡಿನಲ್ಲಿ ಇದ್ದುಕೊಂಡು

ತವಡಿನ ರೊಟ್ಟೀ ತಿಂದು ನಿದ್ದೆ ನೀರಡಿಕೆಗಳಿಲ್ಲದೆ ಇಪ್ಪತ್ತು ವರ್ಷ ಅಖಂಡ ವಾಗಿ ನಮ್ಮ ಪ್ರಚಂಡವಾದ ಸೇನೆಗೆ ಈಡಾಗದೆ ಯುದ್ಧ ಮಾಡಿದ ಮಹಾ ವೀರನು ಮನುಷ್ಯನೆ!" ಎಂದು ಅಬುಲ್‌ಫಾಜಲ್ಲನು ಉದ್ಗಾರ ತೆಗೆದನು.

"ಇನ್ನು ನಮಗೆ ಮೇವಾಡದ ಬೀಳುಭೂಮಿಯ ಆಶೆಯಿಲ್ಲ. ಅಜಿಂಕ್ಯನಾದ ಪ್ರತಾಪಸಿಂಹನ ವಂಶಜರು ಅಜಿಂಕ್ಯರೇ ಆಗಿ ಉಳಿಯಲಿ. ಮೇವಾಡದ ರಾಜನೊಡನೆ ನಾವು ಒಪ್ಪಂದ ಮಾಡಿಕೊಳ್ಳಬೇಕೆನ್ನುತ್ತೇವೆ."

"ಸ್ತುತ್ಯವಾದ ಮಾತು. ಅವಶ್ಯವಾಗಿ ಒಪ್ಪಂದ ಮಾಡತಕ್ಕದ್ದು." ಎಂದು ಅಬುಲ್‌ಫಾಜಲ್ಲನು ಹೇಳಿದನು. ಮಾನಸಿಂಹನಿಗೂ, ಖಾನ ಖಾನನ್ನನಿಗೂ ಈ ಅಭಿಪ್ರಾಯವು ರುಚಿಸದಿದ್ದರೂ ಅನಿವಾರ್ಯಹಕ್ಕಾಗಿ ಅವರೂ ತಲೆದೂಗಿದಂತೆ ಮಾಡಿದರು.

"ಬಿಕಾನೇರದ ತರುಣ ರಾಜನಾದ ಪೃಥ್ವೀರಾಜನಿಗೆ ಉದೇಪುರದವರ ಅಭಿಮಾನ ಬಹಳ. ರಜಪುತಸ್ಥಾನದಲ್ಲಿ ಪೃಥ್ವೀರಾಜನ ವರ್ಚಸ್ವವೂ ಬಹಳ. ಅದಕ್ಕಾಗಿ ನಾವು ಹೇಳುವದೇನಂದರೆ— ಉದೇಪುರದ ಅಮರಸಿಂಗನೊಡನೆ ನಾವು ಒಪ್ಪಂದ ಮಾಡುವ ವರೆಗೂ ಪೃಥ್ವೀರಾಜನು ರಜಪುತಸ್ಥಾನದಲ್ಲಿ ಇರಕೂಡದು."

"ಆ ಹುಡುಗನನ್ನು ಇಲ್ಲಿಯೇ ಕೆಲವು ದಿವಸ ಬಂದಿವಾಸದಲ್ಲಿ ಇಟ್ಟರಾಯಿತು." ಎಂದು ಮಾನಸಿಂಹನು ಸೂಚಿಸಿದನು.

"ಹಾಗೆ ಮಾಡತಕ್ಕದ್ದಲ್ಲ. ಪೃಥ್ವೀರಾಜನು ನಮ್ಮಲ್ಲಿ ರಾಜನಿಷ್ಠೆಯುಳ್ಳವ ನಾಗಿರುವದನ್ನು ನಾವು ಮನಗಂಡಿದ್ದೇವೆ. ಸಧ್ಯಕ್ಕೆ ಅವನ ಕೈಕೆಳಗೆ ಕೆಲವು ಸೈನ್ಯವನ್ನು ಕೊಟ್ಟು ಓಡಿಸ್ಸಾ ಪ್ರಾಂತದ ಸೀಮೆಯಲ್ಲಿಟ್ಟು ಅಲ್ಲಿ ಅಫಗಾನರ ಚಲನವಲನಗಳನ್ನು ನಿಲ್ಲಿಸಹೇಳಿದರೆ ಹೇಗೆ?"

"ಶಾಬಾಸ್! ಶಾಬಾಸ್! ಏನು ಜಾಣತನವಿದು! ಏಕ ಕಾಮ್, ಔರ್ ದೋ ಕಾಜ" ಎಂದು ಅಬುಲ್‌ಫಾಜಲ್ಲನಂದನು.

"ಹಾಗಾದರೆ ಪೃಥ್ವೀರಾಜನನ್ನೂ, ಬೀರನಗರದ ನರೇಂದ್ರಬಹದ್ದರ ನನ್ನೂ ಬೇಗನೆ ಕರಿಸಿರಿ" ಎಂದು ಬಾದಶಹನು ಆಜ್ಞಾಪಿಸಿದ ಕೂಡಲೆ ರಾವುತನು ಓಡಿ ಹೋಗಿ ಆ ವೀರರಿರ್ವರನ್ನೂ ಕರತಂದನು.

"ಮಾನಸಿಂಹಜೀ, ನೋಡಿದಿರಾ ಈ ತರುಣರು ಕ್ಷಾತ್ರತೇಜಸ್ಸಿನಿಂದ

ಹೇಗೆ ಶೋಭಿಸುತ್ತಾರೆ ! ಇವರೇ ಇನ್ನು ನಿಮ್ಮ ಪಶ್ಚಾತ್ ನಮ್ಮ ರಾಜ್ಯದ ಆಧಾರಸ್ತಂಭರಾಗತಕ್ಕವರು" ಎಂದು ಬಾದಶಹನು ಸಂತುಷ್ಟನಾಗಿ ನುಡಿದನು. ಮಾನಸಿಂಹನು ಸುಮ್ಮನೆ ತಲೆದೂಗಿದನು.

ಪ್ರತ್ಯಕ್ಷ ಬಾದಶಹನೇ ಆದರದ ನುಡಿಗಳಿಂದ ತಮ್ಮನ್ನು ಸತ್ಕರಿಸಿದ್ದು ಕೇಳಿ ಪೃಥ್ವೀರಾಜನಿಗೂ, ನರೇಂದ್ರನಾಥನಿಗೂ ಪರಮಾವಧಿಯು ಸಂತೋಷವಾಯಿತು. ಇಂಥ ಗುಣಗ್ರಾಹಿಯಾದ ಸಾರ್ವಭೌಮನ ಸೇವೆ ಮಾಡಿ ಅವನಿಂದ ಬಹುಮಾನವನ್ನು ಹೊಂದಿದರೆ ಜನ್ಮಕ್ಕೆ ಬಂದದ್ದು ಸಾರ್ಥಕವಾಗುವದೆಂದು ಅವರು ಎಣಿಸಿದರು. ಅವರನ್ನು ಕುರಿತು ಬಾದಶಹನು "ಪೃಥ್ವೀರಾಜ, ಮಾನಸಿಂಹರಾಜರು ಅಫಗಾನರನ್ನು ಬಂಗಾಲದಿಂದ ಹೊರಗೆ ಹಾಕಿದರು. ಆ ಬಂಡುಗಾರರು ಇನ್ನು ಓಡಿಸಾ ಪ್ರಾಂತದಲ್ಲಿ ನಿಂತುಕೊಂಡು ಮತ್ತೇನಾದರೂ ಕುಚೇಷ್ಟೆ ಮಾಡುವರು. ಮಾನಸಿಂಹರಾಜರಿನ್ನು ವೃದ್ಧರಾಗಿದ್ದಾರೆ. ಅವರಿಗೆ ನಾವಿನ್ನು ಎಲ್ಲಿಯ ವರೆಗೆ ಶ್ರಮ ಕೊಡತಕ್ಕದ್ದು ? ಅವರಿರುವಾಗಲೇ ನಿಮ್ಮಂಥ ತರುಣರು ಮಹತ್ವದ ಕೆಲಸಗಳನ್ನು ಮಾಡಿ ನಮಗೂ ಅವರಿಗೂ ಕೂಡಿಯೇ ಸಂತೋಷವನ್ನೀಯತಕ್ಕದ್ದು." ಎಂದು ಸವಿಮಾತಿನಿಂದ ಹೇಳಿದನು.

"ಪ್ರಭೋ, ಈ ಸಿಂಹಾಸನದಲ್ಲಿ ನಿಷ್ಠೆಯುಳ್ಳ ಈ ಸೇವಕರಿಗೆ ಎಂಥ ಸಾಹಸದ ಕೆಲಸವನ್ನು ಹೇಳಿದರೂ ಈ ಸೇವಕರು ಜೀವದ ಹಂಗುದೊರೆದು ಸೇವೆಮಾಡುವವರು; ತಪ್ಪಲಿಕ್ಕಿಲ್ಲ" ಎಂದು ಪೃಥ್ವೀರಾಜನು ತನ್ನ ಖಡ್ಗವನ್ನು ಮುಟ್ಟಿ ಬೆಸಗೊಂಡ ಬಳಿಕ ಬಾದಶಹನಿಗೆ ಮೂರಾವರ್ತಿ ನೆಲಮುಟ್ಟಿ ಪ್ರಣಾಮ ಮಾಡಿದನು.

"ಶಾಬಾಸ್ ! ಪೃಥ್ವೀರಾಜ, ಶಾಬಾಸ್ ! ನಿಮ್ಮ ಕೈಕೆಳಗೆ ಸಾಕಷ್ಟು ಸೈನ್ಯವನ್ನು ಕೊಡುತ್ತೇವೆ. ನೀವು ಓಡಿಸಾ ಪ್ರಾಂತದಲ್ಲಿ ಠಾಣ್ಯವನ್ನಿಟ್ಟು ಕೊಂಡು ಅಲ್ಲಿ ಅಫಗಾನರು ಬಂಡುಮಾಡುವ ಉದ್ಯೋಗವನ್ನು ಮುರಿದು ಹಾಕತಕ್ಕದ್ದು. ಈ ನರೇಂದ್ರಬಹದ್ದರನು ನಿಮ್ಮ ಸಹಾಯಕಾರಿಯಾದ ಅಧಿಕಾರಿಯಾಗುವನು."

"ಪ್ರಭುಗಳ ಆಜ್ಞೆಯೇ ಪ್ರಮಾಣವು." ಎಂದು ಆ ತರುಣರೀರ್ವರು ನುಡಿದು ಬಾದಶಹನಿಗೆ ಮತ್ತೆ ಪ್ರಣಾಮಮಾಡಿದರು.

ಆಮೇಲೆ ಸಭೆಯು ಮುರಿಯಿತು. ಎಲ್ಲರೂ ಹೊರಟು ಹೋದ ಬಳಿಕ ಬಾದಶಹನು ನರೇಂದ್ರನನ್ನೊಬ್ಬನನ್ನೇ ಬೇರೆಯಾಗಿ ಕರಿಸಿ "ಕೇಳು ನರೇಂದ್ರಬಹದ್ದೂರ, ನೀನಿನ್ನು ಆಗ್ರಾಪಟ್ಟಣದಲ್ಲಿ ಇರಕೂಡದಾದ್ದರಿಂದ ನಿನ್ನನ್ನು ನಾನು ಪೃಥ್ವೀರಾಜನ ಸಂಗಡ ಓಡಿಸಾಕ್ಕೆ ಕಳಿಸುತ್ತೇನೆ. ಇಲ್ಲಿಯ ಅಂತಃಪುರದಲ್ಲಿಯ ಯವನದಾಸಿಯರು ಪುರುಷರನ್ನು ಬಹುಪರಿಯಾಗಿ ಮೋಹಿಸುವರು. ಅಂತಃಪುರದ ಕಾವಲುಗಾರರಾದ ಖೊಜ್ಜಿಗಳಾದರೂ ಕುನಸಿನವರು, ತಿಳಿಯಿತೇ?" ಎಂದು ಬಹ್ವರ್ಥಕವಾದ ಮಾತು ಹೇಳಿದನು.

ಈ ಮಾತು ಕೇಳಿ ನರೇಂದ್ರನ ಎದೆ ಝುಲ್ಲೆಂದಿತು. ಭೀತಿಯಿಂದ ಅವನು ಥರಥರೆ ನಡುಗಿದನು. ಮೋರೆಯ ಮೇಲಿನ ದ್ರವ ಹಾರಿ ನಿಂತ ನರೇಂದ್ರನನ್ನು ನೋಡಿ ಬಾದಶಹನು ನಕ್ಕು "ಅಂಜಬೇಡ ನರೇಂದ್ರ. ಒಬ್ಬ ತರುಣಿಯ ಮಾನರಕ್ಷಣಕ್ಕಾಗಿ ನೀನು ಅಂತಃಪುರದಲ್ಲಿ ಸೇರುವಂಥ ಅಪರಾಧವನ್ನು ಮಾಡಿದಿ. ಆದರೂ ಚಿಂತೆಯಿಲ್ಲ. ಅಂತಃಪುರದಲ್ಲಿ ಸುರಕ್ಷಿತರಾಗಿದ್ದ ಮಾನಿನಿಯರ ಮಾನಭಂಗವನ್ನು ಮಾಡಲೆಸಗಿದವನ ದ್ರೋಹಕ್ಕಿಂತಲೂ ನಿನ್ನ ಅಪರಾಧವು ಹೆಚ್ಚಿನದಲ್ಲ. ಅದಕ್ಕಾಗಿ ನಿನ್ನನ್ನು ನಾವು ಕ್ಷಮಿಸುತ್ತೇವೆ. ಅಂತಃಪುರದಲ್ಲಿ ಪ್ರವೇಶ ಮಾಡಿದವರಿಗೆ ಏನಾದರೂ ಶಿಕ್ಷೆ ಮಾಡುವದು ವಿಹಿತವೆಂದೆಣಿಸಿ ನಿನ್ನನ್ನು ಒಂದು ವರ್ಷದ ವರೆಗೆ ಆಗ್ರಾಪಟ್ಟಣದಿಂದ ಹೊರಗೆ ಇಟ್ಟಿರುತ್ತೇವೆ. ಈ ಶಿಕ್ಷೆಯ ಕ್ರಮವು ನಿನಗೊಬ್ಬನಿಗೇ ತಿಳಿದಿರಬೇಕೆ ಹೊರತಾಗಿ ಅನ್ಯರಿಗೆ ಇದರ ವಾರ್ತೆಯನ್ನು ಕೂಡ ಹೇಳುವದಿಲ್ಲ. ಒಂದು ವರ್ಷದ ನಂತರ ನಿನ್ನನ್ನು ನಾವು ಮತ್ತೆ ಬಹುಮಾನದೊಂದಿಗೆ ನಮ್ಮ ಸನ್ನಿಧಾನಕ್ಕೆ ಕರಸಿಕೊಳ್ಳುವೆವು. ನೀನಿನ್ನೇನೂ ಮಾತಾಡಬೇಡ" ಎಂದು ಹೇಳಿ ಅವನಿಗೆ ಅಪ್ಪಣೆ ಕೊಟ್ಟನು.



## ಮೂವತ್ತನೆಯ ಅಧ್ಯಾಯ

### " ಗಂಡಸರಿಗೆ ಕಡೆತನಕ ಬುದ್ಧಿ ಬರುವದಿಲ್ಲ! "

ದರಬಾರದ ಕೆಲಸ ಮುಗಿದ ಎಂಟನೆಯ ದಿವಸವೇ ಮಾನಸಿಂಹೆ ರಾಜನು ಪೃಥ್ವೀರಾಜನನ್ನು ಓಡಿಸಾಪ್ರಾಂತಕ್ಕೆ ಅಟ್ಟಿದನು. ನರೇಂದ್ರ ನೊಬ್ಬನೇ ಕೆಲವು ಕೆಲಸದ ನಿಮಿತ್ತವಾಗಿ ಒಂದು ದಿವಸ ನಿಂತು ಹೋಗು ವವನಾಗಿದ್ದನು. ಪೃಥ್ವೀರಾಜನು ಆಗ್ರಾಪಟ್ಟಣದಿಂದ ಹತ್ತುಹರದಾರಿಯ ಮೇಲಿದ್ದ ಹರಪುರವೆಂಬ ಗ್ರಾಮದಲ್ಲಿ ನಿಂತುಕೊಂಡು ನರೇಂದ್ರನ ಮಾರ್ಗ ಪ್ರತೀಕ್ಷೆ ಮಾಡುತ್ತಿದ್ದನು.

ನಾಳೆ ಬೆಳಗ್ಗೆ ತಾನು ಹೊರಟು ಹೋಗುವವನೆಂದು ನರೇಂದ್ರನು ಮುನ್ನಾದಿನ ರಾತ್ರಿಯಲ್ಲಿ ಮಾನಸಿಂಹನ ದರ್ಶನ ತೆಗೆದುಕೊಂಡು ಅವನೊಡನೆ ತುಸು ಆಪ್ತಾಲೋಚನೆಗೈದು ತನ್ನ ಸ್ಥಳಕ್ಕೆ ಹೊರಟಿದ್ದನು. ಐದಾರು ತಾಸು ರಾತ್ರಿಯಾಗಿದ್ದು ಆಗ ಕತ್ತಲೆಯ ದಿವಸಗಳಿದ್ದವು. ಅಂಥ ರಾತ್ರಿಯಲ್ಲಿ " ಕೌನ್‌ಹೈ ? " " ಠೇರಜಾವ್ " ಎಂದು ನಿದ್ದೆಗಣ್ಣಲ್ಲಿ ಕೂಗಿಕೊಳ್ಳು ತ್ತಿರುವ ಕಾವಲುಗಾರರ ಧ್ವನಿಯು ಹೊರತಾಗಿ ಅನ್ಯರ ಉಲುವೇ ಇದ್ದಿಲ್ಲ. ಅಷ್ಟರಲ್ಲಿ " ಅಯ್ಯೋ ! " ಎಂದು ಒಂದು ಮುದುಕೆಯು ವೇದನೆಯಿಂದ ಕೂಗಿದ ಧ್ವನಿಯನ್ನು ನರೇಂದ್ರನು ಕೇಳಿದನು. ಧಾವಿಸಿ ಅವನು ಧ್ವನಿ ಬಂದ ಎಡೆಗೆ ಬರಲು ಕಾವಲುಗಾರನೊಬ್ಬನು ತುಬಾಕಿಯನ್ನು ಹೊತ್ತುಕೊಂಡು. ನರೇಂದ್ರನ ಠಾಣ್ಯದ ಕಡೆಗೆ ಹೋಗುವಾಗ, ಕಟ್ಟಿಗೆಯ ಹೊರೆಯನ್ನು ಹೊರಲಾರದೆ ಹೊತ್ತುಕೊಂಡು ಹೋಗುವ ಮುದುಕೆಯನ್ನು ಕತ್ತಲೆಯಲ್ಲಿ ಕಡೆಹಾಯ್ದುದ್ದರಿಂದ ಆ ಶ್ವೇತಕುಂತಲೆಯು ಕಡಕೊಂಡು ಬಿದ್ದು ' ಅಯ್ಯೋ! ಎಂದು ಕೂಗಿದಳೆಂಬ ಸಂಗತಿಯನ್ನು ಕೇಳಿದನು. ಅವನು ಕಾವಲುಗಾರನಿಗೆ ಛೀ ಮಾಡಿ ಆ ಮುದುಕೆಯನ್ನು ಎಬ್ಬಿಸಿ ಅವಳ ಹೊರೆಯನ್ನು ಅವಳ ತಲೆಯ ಮೇಲೆ ಹೊರಿಸಿ ಕಳಿಸಿದನು. ನರೇಂದ್ರನು ತುಸು ಮುಂದಕ್ಕೆ ಹೋದ ಕೂಡಲೆ ಯಾರೋ " ರಾಯ್ " ಎಂದು ಕೂಗಿದಂತೆ ಆವನಿಗೆ ಕೇಳಿಸಿತು. ಯಾರೆಂದು ಅವನು ತಿರುಗಿ ನೋಡಲಾಗಿ ಒಬ್ಬ ಫಕೀರನು ಅವನನ್ನು ಸಂಜ್ಞೆಮಾಡಿ ಕರೆದನು. ನರೇಂದ್ರನು ಆ ಫಕೀರನ ಸಮೀಪಕ್ಕೆ

ಹೋಗಿ “ ಸ್ವಾಮಿ, ನೀವು ನನ್ನನ್ನು ಕರೆದಿರೇನು ? ” ಎಂದು ಕೇಳಲು, ಆ ಫಕೀರನು “ ಅಹುದು ಸರದಾರ, ತುಸು ಹೀಗೆ ಬನ್ನಿರಿ, ಮಹತ್ವವಾದ ಕೆಲಸವಿದೆ.” ಎಂದು ಹೇಳಿ ಅವನು ನರೇಂದ್ರನನ್ನು ಹಿಂಬಾಲಿಸಿಕೊಂಡು ನಡೆದನು. ನಾಲ್ಕು ಹೆಜ್ಜೆ ಹೋದ ಬಳಿಕ ಫಕೀರನು ಒಳ್ಳೇ ವೇಗದಿಂದ ನಡೆಯಲಾರಂಭಿಸಿದನು. ನರೇಂದ್ರನೂ ಅವನನ್ನು ಹಿಂಬಾಲಿಸಿಯೇ ನಡೆದನು. ಹೀಗೆ ನಡೆಯುತ್ತ ಊರು ಬಿಟ್ಟು ಒಂದು ಕೂಗಳತೆಯ ಮೇಲಿದ್ದ ಒಂದು ಹಳ್ಳಕ್ಕೆ ಅವರಿಬ್ಬರೂ ಬಂದರು. ಅಷ್ಟರಲ್ಲಿ ಆ ಫಕೀರನು ಹಳ್ಳದ ದಂಡೆಯ ಗುಂಟ ಬೆಳೆದ ಗಿಡಗಳ ನೆಳಲಿನಲ್ಲಿ ಅಡಗಿದನು.

‘ ಈ ಫಕೀರನ್ಯಾರು ? ಇವನ ಬೆನ್ನು ಹತ್ತಿ ನಾನು ಬಂದೆನಾದರೂ ಯಾಕೆ ? ಅವನು ಹೀಗೆ ಅಡಗಿದನಾದರೂ ಯಾಕೆ ? ’ ಎಂದು ವಿಚಾರ ಮಾಡುತ್ತ ಕತ್ತಲೆಯಲ್ಲಿ ನರೇಂದ್ರನು ಎಷ್ಟು ದಿಟ್ಟಿಸಿ ನೋಡಿದರೂ ಆ ಫಕೀರನು ಕಾಣಿಸಲೊಲ್ಲನು. ಅಷ್ಟರಲ್ಲಿ ಯಾವಳೋ ಒಬ್ಬ ಹೆಂಗಸು ನರೇಂದ್ರನ ಸಮೀಪದಲ್ಲಿಯೇ ನಿಂತು ಖೊಳಖೊಳನೆ ನಕ್ಕಂತಾಯಿತು. ಅವನು ಚಕಿತನಾಗಿ “ ಯಾರವರು ? ” ಎಂದು ಕೂಗಿ ಕೇಳಿದನು.

“ ಗುರುತು ಹತ್ತಲಿಲ್ಲವೇನು ? ” ಎಂದು ಜುಲೇಕೆಯೇ ನರೇಂದ್ರನ ಎದಿರಿನಲ್ಲಿ ನಿಂತು ಕೇಳಿದಳು.

“ ಜುಲೇಕಾ ! ” ಎಂದು ನರೇಂದ್ರನು ಬೆರಗಾಗಿ ಉದ್ಗಾರ ತೆಗೆದನು.

“ ಅಹುದು ನಾನೇ. ರಾಯಬಹದ್ದೂರ, ಇಷ್ಟೇಕೆ ವಿಸ್ಮಯಾಕುಲ ರಾಗಿರುವಿರಿ ? ” ಎಂದು ಜುಲೇಕೆಯು ನಗುತ್ತ ಕೇಳಿದಳು.

“ ಜುಲೇಕಾ, ನೀನೇನು ಮನುಷ್ಯಳೋ ಭೂತವೋ ? ಇಂಥ ಕಗ್ಗತ್ತಲೆಯ ರಾತ್ರಿಯಲ್ಲಿ ನೀನೀ ಕಟ್ಟಡವಿಗೆ ಹೇಗೆ ಬಂದಿ ? ”

“ ನಾನೊಬ್ಬಳೇ ಬಂದೆನೇನು ? ಪ್ರತಾಪಶಾಲಿಯಾದ ವೀರನೊಬ್ಬನು ನನ್ನನ್ನು ಆಸ್ಥೆಯಿಂದ ಇಲ್ಲಿಗೆ ಕರೆತಂದನು ” ಎಂದು ಜುಲೇಕೆಯು ಸ್ಪಷ್ಟವಾಗಿ ಹೇಳಿದಳು.

“ ಎಂಥ ಮಾತು ಹೇಳುತ್ತಿರುವಿ ಜುಲೇಕಾ ! ಸದ್ಗುಣಿಯಾದ ನೀನು ಇಷ್ಟು ಸ್ವಲ್ಪ ದಿವಸಗಳಲ್ಲಿಯೇ ಹೀಗೆ ಉಚ್ಛೃಂಖಲೆಯಂತೆ ಆಚರಿಸಲು

ಆರಂಭಿಸಿದಿಯೇನು ?" ಎಂದು ನರೇಂದ್ರನು ತಿರಸ್ಕಾರದಿಂದ ಕೇಳಿದನು.

"ಏನೆಂದಿರಿ ನರೇಂದ್ರನಾಥ! ಈ ಜುಲೇಕೆಯು ಎಂದಿಗಾದರೂ ಕುಮಾರ್ಗದಲ್ಲಿ ನಡೆಯುವಳೆ ?"

"ಹಾಗಾದರೆ ನೀನು ಯಾರೊಡನೆ ಬಂದಿ ?"

"ಇಲ್ಲಿ ನನ್ನನ್ನು ಕಾಣುವದಕ್ಕೆ ಮುಂಚಿತವಾಗಿ ನೀವು ಒಬ್ಬ ಫಕೀರ ನೊಡನೆ ಇಲ್ಲಿಗೆ ಬಂದಿರಾ ? ಆ ಫಕೀರನನ್ನು ಕಾಣುವದಕ್ಕೆ ಮುಂಚಿತವಾಗಿ ನೀವು ಒಬ್ಬ ಕಟ್ಟಿಗೇ ಹೊರೆಯ ಮುದಿಕೆಯನ್ನು ಸಂತೈಸಿ ಕಳಿಸಿದಿರಾ ?"

"ಅಹುದು. ಇದೆಲ್ಲ ನಿನಗೆ ಹೇಗೆ ತಿಳಿಯಿತು ?"

"ಆ ಮುದುಕೆಯೂ, ಚಪಲನಾದ ಆ ಫಕೀರನೂ ನಿಮ್ಮ ಮುಂದೆ ನಿಂತಿರುವ ಈ ಜುಲೇಕೆಯು ಒಂದೇ ವ್ಯಕ್ತಿಯಾಗಿದ್ದರೆ ಹೇಗೆ ?"

ನರೇಂದ್ರನು ಆಶ್ಚರ್ಯಯುತನಾಗಿ ಜುಲೇಕೆಯ ಕೈಹಿಡಿದು "ಜುಲೇಕಾ, ಈ ನಿನ್ನ ಸುಕುಮಾರವಾದ ದೇಹದಲ್ಲಿ ಇಷ್ಟು ಸಾಹಸವೂ, ಮಾಟವೂ ತುಂಬಿರುವದೆಂದು ನಾನು ಹೇಗಾದರೂ ತಿಳಿಯಬೇಕು ಹೇಳು ? 'ಸ್ತ್ರಿಯಶ್ಚರಿತ್ರಂ....ದೇವೋ ನ ಜಾನಾತಿ' ಎಂಬ ಉಕ್ತಿಯು ಯಥಾರ್ಥ ವಾದದ್ದು !" ಎಂದು ಹೇಳಿ ನಕ್ಕನು.

"ನರೇಂದ್ರನಾಥ, ಸ್ತ್ರೀಯರ ದೇಹವು ಸುಕುಮಾರವಾಗಿದ್ದರೂ ಅವರ ಮನಸ್ಸು ಮಾತ್ರ ಯಾತಕ್ಕೂ ಹಣಿಯದು. ಅವರಲ್ಲಿ ಸದ್ಗುಣವು ನೆಲಿಸಿದ್ದರೆ ಅದನ್ನು ಎಳ್ಳಷ್ಟಾದರೂ ಕೆಡಿಸುವದು ಯಾರಿಂದಲೂ ಆಗದು. ಅವರು ಕೆಟ್ಟವರಾಗಿದ್ದರೆ ಅವರ ಮೇಲೆ ಸದುಪದೇಶದ ಮಳೆಗರೆದರೂ ಕ್ಷಣದಲ್ಲಿ ಮತ್ತೆ ಇದ್ದಕ್ಕಿದ್ದಂತೆಯೇ ಆಗುವರು. ಕೆಟ್ಟ ಹೆಂಗಸರು ಕುಮಾರ್ಗಕ್ಕಾಗಿ ಮಾಡಿದ ಸಾಹಸದ ಕಥೆಗಳನ್ನು ನೀವು ವಿಶ್ವಾಸದಿಂದ ಕೇಳುತ್ತೀರಿ. ಹಾಗೆಯೇ ಸುಚರಿತೆಯರು ಸದ್ಧೇತುವಿಗಾಗಿ ಸಾಹಸವನ್ನು ಮಾಡುವದು ಆಶ್ಚರ್ಯವೆ?"

"ಜುಲೇಕಾ, ನೀನು ಯಥಾರ್ಥವನ್ನೇ ಹೇಳಿದಿ. ನೀನಿಲ್ಲಿಗೆ ಏನು ಉದ್ದೇಶದಿಂದ ಬಂದಿ ?"

"ನೀವು ಹರಪುರಕ್ಕೆ ಹೋಗಬೇಕಾದರೆ, ಮರಳಿ ನಿಮ್ಮ ಬಿಡಾರಕ್ಕೆ ಹೋಗದೆ ಹೀಗಿಂದ ಹೀಗೆಯೇ ಹೊರಟುಹೋಗತಕ್ಕದ್ದು."

"ಯಾಕೆ ಜುಲೇಕಾ ?" ಎಂದು ನರೇಂದ್ರನು ಬೆರಗಾಗಿ ಕೇಳಿದನು.

" ಯಾಕೆ, ಎಂತು, ಎಂದು ವಿಚಾರಿಸುತ್ತ ನಿಲ್ಲುವ ಹಾಗಿಲ್ಲ; ನೀವು ಈಗ ಹಾದೀ ಹಿಡಿಯಲೇಬೇಕು. "

" ಕುದುರೆಯಿಲ್ಲ. ಕತ್ತಲೆಯ ರಾತ್ರಿ. ಮೇಲಾಗಿ ನಾನು ಹರಪುರದ ಮಾರ್ಗವನ್ನು ನೋಡಿದವನಲ್ಲ. ಹೋಗುವದು ಹೇಗೆ ? "

" ಅದರ ವ್ಯವಸ್ಥೆಯನ್ನು ಮಿಹಿರ್‌ಉನ್ನಿಸ್ಸೆಯು ಮಾಡಿ ಇಟ್ಟಿದ್ದಾಳೆ. ಅಕೋ! ಆ ಗಿಡದಡಿಯಲ್ಲಿ ಮೂರು ಕುದುರೆಗಳು ನಿಮ್ಮಗೋಸ್ಕರವಾಗಿ ಸಿದ್ಧವಾಗಿವೆ; ಬನ್ನಿರಿನ್ನು. ಅಲ್ಲಿ ನೋಡಿದಿರಾ, ಪಾಳತಿಗಾರನೊಬ್ಬನು ನಿಮ್ಮ ಬೆನ್ನುಮೇಲೆಯೇ ಇರುವನು " ಎಂದು ಜುಲೇಕೆಯು ಕುದುರೆಗಳಿದ್ದ ಸ್ಥಳದ ಹಾದೀ ಹಿಡಿದು ನಡೆದಳು.

"ಏನು ಸಂಗತಿಯಿದು ಜುಲೇಕಾ?" ಎಂದು ನರೇಂದ್ರನು ಅವಳೊಡನೆ ನಡೆಯುತ್ತ ಕೇಳಿದನು.

" ಘಾತಕಿಯಾದ ಸಲೀಮನು ನಿಮ್ಮನ್ನು ಕೊಲ್ಲಿಸಬೇಕೆಂದು ಕೊಲೆಗಡಕರನ್ನು ನಿಮ್ಮ ಮೇಲೆ ಇಟ್ಟಿರುವನು. ಆ ಕೊಲೆಗಡಕರೆಂದರೆ ಹೊರಗಿನವರಲ್ಲ. ನಾಳೆ ಮುಂಜಾವಿನಲ್ಲಿಯೇ ನಿಮ್ಮ ಸಂಗಡ ಹೊರಡತಕ್ಕವರಾದ ರಾವುತರೇ ಅವರು. "

" ಹೀಗೇನು ! ಜುಲೇಕಾ, ನಿನ್ನ ಉಪಕಾರವು ನನ್ನ ಮೇಲೆ ಬಹಳ ಆಯಿತು " ಎಂದು ಹೇಳಿ ನರೇಂದ್ರನು ಅವಳ ಕೈಯನ್ನು ಗಟ್ಟಿಯಾಗಿ ಹಿಡಿದು ಅದನ್ನು ಆದರದಿಂದ ಚುಂಬಿಸಿದನು.

"ಗಂಡಸರಿಗೆ ಕಡೆತನಕ ಬುದ್ಧಿ ಬರುವದಿಲ್ಲರಿ!" ಎಂದು ನುಡಿದು ಜುಲೇಕೆಯು ತನ್ನ ಕೈಬಿಡಿಸಿಕೊಂಡು ಸಿಟ್ಟುಮಾಡಿದಂತೆ ಮಾಡಿದಳು.

" ಜುಲೇಕಾ, ಈ ಸಮಯದಲ್ಲಿ ನಾನು ಅವಿನಯದಿಂದ ನಡೆಯಲಿಲ್ಲ. ಸುಳ್ಳೆ ಜಂಬಬಡಿಯಬೇಡ ನಡೆ. "

ಅವರೀರ್ವರೂ ಕುದುರೆಗಳಿದ್ದೆಡೆಗೆ ಬಂದರು. ಅಲ್ಲಿ ಓರ್ವ ರಾವುತನು ಕುದುರೆಗಳನ್ನು ಕಟ್ಟಿಕೊಂಡು ಇವರ ಮಾರ್ಗಪ್ರತೀಕ್ಷೆ ಮಾಡುತ್ತಿದ್ದನು.

" ಜಾಫರ, ತ್ವರೆ ಮಾಡು. ಈ ರಾಯಬಹದ್ದೂರರವರಿಗೆ ಆ ಕರೀ ಕಡವವನ್ನು ಕೊಡು " ಎಂದು ಜುಲೇಕೆಯು ಆ ರಾವುತನಿಗೆ ಆಜ್ಞಾಪಿಸಿ ತಾನೊಂದು ಕುದುರೆಯ ಮೇಲೆ ಚಟ್ಟನೆ ಏರಿ ಕುಳಿತಳು.

ನರೇಂದ್ರನು ತನ್ನ ಕುದುರೆಯ ಮೇಲೆ ಹಾರಿ ಕುಳಿತು ಜಾಫರನು ಕೊಟ್ಟ ಢಾಲೆ ಖಡ್ಗಗಳನ್ನು ತೆಗೆದುಕೊಂಡು ಜುಲೇಕೆಯನ್ನು ಕುರಿತು "ಜುಲೇಕಾ, ನೀನೆಲ್ಲಿಗೆ?" ಎಂದು ಕೇಳಿದನು.

"ನಾನೆಲ್ಲಿಗೆ ಹೋಗಲಿ. ನಿಮ್ಮ ಸಂಗಡಲೇ ಬರುವೆನು. ಹರಪುರದಲ್ಲಿ ನಮ್ಮ ಅಣ್ಣನು ಶಹಾಶರೀಫನೆಂಬ ಸಾಧುವಿನ ಬಳಿಯಲ್ಲಿ ಕುರಾಣವನ್ನು ಓದುತ್ತಾನೆ. ಅವನ ಭೆಟ್ಟಿ ಅನಾಯಾಸವಾಗಿ ಆಗುವದು."

"ಹಾಗಾದರೆ ನೆಟ್ಟಗೆ ಆಯಿತು ನಡೆ" ಎಂದು ಹೇಳಿ ನರೇಂದ್ರನು ತನ್ನ ಕುದುರೆಯನ್ನು ಜಾಫರನ ಕುದುರೆಯ ಬೆನ್ನುಹಚ್ಚಿ ಓಡಿಸುತ್ತ ನಡೆದನು. ಜುಲೇಕೆಯೂ ನರೇಂದ್ರನ ಬೆನ್ನು ಬಿಡದಲೆ ನಡೆದಳು.

ಬೆಳೆಗಳಿಂದ ತುಂಬಿದ ಹೊಲಗಳನ್ನೂ, ನಿಬಿಡವಾಗಿ ಬೆಳೆದಿರುವ ವನಗಳನ್ನೂ, ತಗ್ಗುದಿನ್ನೆಗಳನ್ನೂ ಅಡ್ಡಕಟ್ಟಿದ ಹಳ್ಳಗಳನ್ನೂ ಭರಭರನೆ ದಾಟುತ್ತ ಅವರು ಸಾದ್ರಾಗ್ರಾಮವನ್ನು ದಾಟಿ ನಡೆದರು. ತುಸು ಮುಂದಕ್ಕೆ ಹೋದ ಬಳಿಕ ಇವರ ದಾರಿಗೆ ಮತ್ತೊಂದು ದಾರಿಯು ಬಂದು ಕೂಡಿತು. ಆ ಸ್ಥಳಕ್ಕೆ ಬಂದ ಕೂಡಲೆ ಜಾಫರನು "ಹುಶಾರ್, ಕುದುರೆಗಳನ್ನು ತ್ವರದಿಂದ ಬಿಡಿರಿ. ಜುಲೇಕಾಬೀಬೀ, ನಿಮ್ಮ ಕುದುರೆಯನ್ನು ಮುಂದೆ ಹಾಕಿರಿ" ಎಂದು ಹೇಳಿ ಜುಲೇಕೆಯನ್ನು ಮುಂದೆ ಹಾಕಿಕೊಂಡು ತನ್ನ ಕುದುರೆಯನ್ನು ಒಳ್ಳೇ ವೇಗದಿಂದ ಬಿಟ್ಟನು. ನರೇಂದ್ರನೂ ತನ್ನ ಕುದುರೆಯ ಕಡಿವಾಣವನ್ನು ತುಸು ಜಗ್ಗಿ ಸೂಚನೆ ಮಾಡಿದ ಕೂಡಲೆ ಆ ಕರೀ ಕಡವವು ಫುರಗೊಟ್ಟು, ಆವೇಶದಿಂದ ಓಡಲಾರಂಭಿಸಿತು. ಮೂವರ ಕುದುರೆಗಳೂ ಗಾಳಿಯಂತೆ ಬಹು ರಭಸದಿಂದ ಓಡುತ್ತ ದೊಡ್ಡದಾದ ಒಂದು ಹಳ್ಳದ ದಂಡೆಗೆ ಬಂದು ನಿಂತವು. ಆಗ ಜಾಫರನು ಕಿವಿಗೊಟ್ಟು ಕೇಳಿದಂತೆ ಮಾಡಿ "ರಾಯಬಹದ್ದೂರ್, ನಮ್ಮ ಹಿಂದೆಯೇ ತುಸು ಅಂತರದ ಮೇಲೆ ಮೂರು ನಾಲ್ಕು ಕುದುರೆಗಳು ಓಡುತ್ತ ಇತ್ತಕಡೆಗೇ ಬರುವ ಸಪ್ಪಳವು ಕೇಳಬರುವದಿಲ್ಲೆ?" ಎಂದು ಕೇಳಿದನು.

"ಅಹುದು ಜಾಫರ್, ಯಾರವರು?" ಎಂದು ನರೇಂದ್ರನು ಕೇಳಿದನು.

"ಸಾಹೇಬ, ಯಾರೋ ನೀಚರು ನಮ್ಮ ಬೆನ್ನಟ್ಟಿ ಬರುವಂತೆ

ಕಾಣುತ್ತದೆ. ನಾನು ಹುಶಾರ್ ಎಂದು ಕೂಗಿದೆನಲ್ಲ, ಆ ಸ್ಥಳದಿಂದ ಒಂದು ಕೂಗಳತೆಯ ಅಂತರದ ಮೇಲೆ ನಾಲ್ಕೈದು ಜನ ರಾವುತರು ನಮ್ಮ ಮಾರ್ಗಕ್ಕೆ ಬರುವವರಾಗಿ ಕಂಡರು. ದಿನ್ನೇಮೇಲಿರುವ ನಮ್ಮನ್ನು ಕಂಡ ಕೂಡಲೆ ಆ ಜನರು ತಮ್ಮ ಕುದುರೆಗಳನ್ನು ಒಳ್ಳೇ ರಭಸದಿಂದ ಬಡಿದು ಓಡಿಸಲಾರಂಭಿಸಿದರು. ನೋಡಿರಿ, ಅವರು ಈಗಾಗಲೇ ನಮ್ಮನ್ನು ಸಮೀಪಿಸಿದರು. ನಾವು ಬೇಗನೆ ಈ ಹಳ್ಳವನ್ನು ದಾಟಿ ಮಾರ್ಗದ ಬಲಕ್ಕೆ ಕಾಣುತ್ತಿರುವ ಗಿಡಗಳ ಗುಂಪಿನಲ್ಲಿ ಮರೆಯಾಗಿ ನಿಲ್ಲೋಣ."

"ಸರಿ. ಸರಿ. ಜಾಫರ, ನೀನೊಳ್ಳೇ ಜಾಣನಾದ ಸೈನಿಕನಾಗಿರುವಿ. ಆ ಜನರು ನಮ್ಮ ಶತ್ರುಗಳೇ ಆಗಿದ್ದ ಪಕ್ಷದಲ್ಲಿ ಆ ಗಿಡಗಳಡಿಯಲ್ಲಿ ತುಸು ವಿಶ್ರಾಂತಿ ತೆಗೆದುಕೊಂಡು ಅವರೊಡನೆ ಕಾದಬಹುದು. ಅವರು ನಾಲ್ಕೈದು ಜನಕ್ಕಿಂತಲೂ ಹೆಚ್ಚಿರಲಿಕ್ಕಿಲ್ಲವಷ್ಟೆ ?" ಎಂದು ನರೇಂದ್ರನು ಕೇಳಿದನು.

"ಹೆಚ್ಚಿಲ್ಲ ಸಾಹೇಬ."

"ಹಾಗಾದರೆ ಚಿಂತಿಲ್ಲ. ನಾವು ನಿರ್ಭೀತರಾಗಿ ಅವರೊಡನೆ ಕಾದಬಹುದು. ಜಾಫರ, ನೀನು ಸೈನ್ಯದಲ್ಲಿಯ ರಾವುತನಲ್ಲವೆ ?"

"ಜೀ ಹುಜೂರ್, ನಾನು ಹತ್ತು ಜನ ಸವಾರರ ಮೇಲಿನ ನಾಯಕನು."

"ಉತ್ತಮವಾಯಿತು. ನಾವೀರ್ವರೂ ಕೂಡಿ ಆ ಜನರ ಸಮಾಚಾರವನ್ನು ಚನ್ನಾಗಿ ತೆಗೆದುಕೊಳ್ಳೋಣ." ಎಂದು ನರೇಂದ್ರನು ತನ್ನ ಕುದುರೆಯನ್ನು ಹಳ್ಳದೊಳಗೆ ಬಿಟ್ಟನು.

ಬಳಿಕ ಮೂವರೂ ಹಳ್ಳ ದಾಟಿ ಜಾಫರನು ತೋರಿಸಿದ ಗಿಡಗಳ ಗುಂಪಿನಲ್ಲಿ ಬಂದು ನಿಂತು ಶತ್ರುಗಳ ಚಲನವಲನವನ್ನು ನಿರೀಕ್ಷಿಸುತ್ತ ನಿಂತರು. ಜುಲೇಕೆಯೂ ತನ್ನ ಕುದುರೆಯನ್ನು ಒಂದು ಮರಕ್ಕೆ ಕಟ್ಟಿ ಮೆಲ್ಲನೆ ಆ ಮರವನ್ನೇರಿ ಕುಳಿತಳು.

ಬೆನ್ನಟ್ಟಿ ಬರುವವರು ನರೇಂದ್ರನ ಶತ್ರುಗಳೇ. ಅವರು ಐವರಾಗಿದ್ದರು. ತುಸು ಹೊತ್ತಿನಲ್ಲಿಯೇ ಅವರು ಧಾವಿಸುತ್ತ ಬಂದು ಹಳ್ಳವನ್ನು ದಾಟಿ ದಂಡೆಯ ಮೇಲೆ ನಿಂತುಕೊಂಡು ಹುಬ್ಬುಗೈಯಿಕ್ಕಿ ಮುಂದಿನ ಮಾರ್ಗವನ್ನು ಚನ್ನಾಗಿ ಪರೀಕ್ಷಿಸಿ ನೋಡಿದರು. "ಕರೀಮುಖಾನ್, ಅವರು ಮುಂದೆ

ಹೋಗಿಯೇ ಇಲ್ಲ. ಇಲ್ಲಿಯೇ ಎಲ್ಲಿಯಾದರೂ ಅಡಗಿರುವರಾದೀತು." ಎಂದು ಓರ್ವನು ಮತ್ತೋರ್ವನನ್ನು ಕುರಿತು ಮಾತಾಡಿದನು.

"ಹಾಗಾದರೆ ಶೋಧಮಾಡೋಣ. ನರೇಂದ್ರನೂ, ಒಬ್ಬ ಸ್ತ್ರೀಯೂ ಹೀಗೆ ಇಬ್ಬರೇ ಇರುವರು. ಮೂರು ಜನ ಎಡಮಗ್ಗಲಿಗೂ, ಇಬ್ಬರು ಬಲಭಾಗಕ್ಕೂ ಹೋಗಿ ಶೋಧಮಾಡೋಣ" ಎಂದು ಹೇಳಿ ಮೂವರು ವಿರುದ್ಧವಾದ ದಿಕ್ಕಿಗೆ ಹೋದರು. ಈರ್ವರು ನರೇಂದ್ರನಿದ್ದೆಡೆಗೆ ಬರಲಾರಂಭಿಸಿದರು.

"ಜಾಫರ, ನಡೆ ಹೋಗೋಣ, ಅವರೀರ್ವರೇ ನಮ್ಮ ಕಡೆಗೆ ಬರುತ್ತಾರೆ. ಬೇಗನೆ ಅವರ ಮೈಮೇಲೆ ನಮ್ಮ ಕುದುರೆಗಳನ್ನು ಓಡಿಸಿಕೊಂಡು ಹೋಗಿ ಅವರ ಸಮಾಚಾರವನ್ನು ತೆಗೆದುಕೊಳ್ಳೋಣ" ಎಂದು ಹೇಳಿ ನರೇಂದ್ರನು ತನ್ನ ಭಾಲೆಯನ್ನು ಚನ್ನಾಗಿ ಹಿಡುಕೊಂಡು ಜಾಫರನೊಡನೆ ಶತ್ರುಗಳ ಮೈಮೇಲೆ ನಡೆದನು. ಜಾಫರನು ಬುದಿಂಗನೆ ತನ್ನ ಕುದುರೆಯನ್ನು ಒಬ್ಬ ಶತ್ರುವಿನ ಮೈಮೇಲೆ ಹಾಕಿ ಬರ್ಚಿಯ ಹೊಡೆತದಿಂದ ಅವನನ್ನು ನೆಲಕ್ಕೆ ಕೆಡವಿದನು. ಅಷ್ಟರಲ್ಲಿ ನರೇಂದ್ರನು ತನ್ನ ಭಾಲೆಯಿಂದ ಕರೀಮಖಾನನನ್ನು ಚುಚ್ಚಿಹಾಕಿದ ಕೂಡಲೆ ಆ ಖಾನನು ಸತ್ತೇಬಿದ್ದನು. ಜಾಫರನ ಹೊಡೆತಕ್ಕೆ ಸತ್ತೇಬಿದ್ದವನು "ಘಾತ! ಘಾತ!" ಎಂದು ಕೂಗಿಕೊಳ್ಳುತ್ತ ಬಿದ್ದನಾದ್ದರಿಂದ ಅವನ ಸ್ವರವನ್ನು ಕೇಳಿ ಉಳಿದವರಾದ ಮೂವರೂ ಒಳ್ಳೇ ಆವೇಶದಿಂದ ಯುದ್ಧರಂಗಕ್ಕೆ ಬಂದರು.

ಆದರೂ ಶತ್ರುಗಳು ಮೂರು ಮಂದಿ, ನರೇಂದ್ರ, ಜಾಫರರಿಬ್ಬರೇ. ಶತ್ರುಗಳಿಬ್ಬರು ಜಾಫರನ ಮೈಮೇಲೆ ಹೋದರು. ಜಾಣನಾದ ಜಾಫರನು ತನ್ನ ಕುದುರೆಯನ್ನು ಗರಗರನೆ ಮಂಡಲಾಕಾರವಾಗಿ ಓಡಿಸುತ್ತ ಶತ್ರುಗಳ ಕೈಗೆ ಸಿಕ್ಕದೆ ಕಾದುತ್ತಿದ್ದನು. ನರೇಂದ್ರನಿಗೆ ಇದಿರಾಗಿ ನಿಂತ ಹತಭಾಗ್ಯನು ಬೇಗನೆ ನರೇಂದ್ರನ ಹೊಡೆತಕ್ಕೆ ಈಡಾಗಿ ಕುದುರೆಯ ಮೇಲಿಂದ ಬಿದ್ದು ಸಾಷ್ಟಾಂಗ ಹಾಕಿದನು.

ಪಾಪ, ಜಾಫರನು ಮಾತ್ರ ಇಬ್ಬರು ರಾವುತರ ಕೈಗೆ ಸಿಕ್ಕು ಪೇಚಾಡುತ್ತಿದ್ದನು. ಒಬ್ಬನು ತನ್ನ ಬರ್ಚಿಯ ಭಯಂಕರವಾದ ಹೊಡೆತದಿಂದ ಜಾಫರನ ಕುದುರೆಗೆ ಒಳಿತಾಗಿ ಗಾಯಮಾಡಿದ್ದರಿಂದ ಕುದುರೆಯೂ,

ಜಾಫರನೂ ಕೂಡಿಯೇ ನೆಲಕ್ಕೆ ಬಿದ್ದರು. ಉಳಿದವನು ಇನ್ನು ಜಾಫರ ನನ್ನು ತನ್ನ ಬರ್ಚಿಯಿಂದ ಚುಚ್ಚಿ ಹಾಕಬೇಕೆನ್ನುವಷ್ಟರಲ್ಲಿಯೇ ನರೇಂದ್ರನು ತನ್ನ ಬೇಟೆಯನ್ನು ಸಾಧಿಸಿಕೊಂಡು ಜಾಫರನ ಸಹಾಯಕ್ಕೆ ಬಂದನು. ಜಾಫರನು ಏಳುವಂತೆ ಇದ್ದಿಲ್ಲವಾದ್ದರಿಂದ ನರೇಂದ್ರನೇ ಇಬ್ಬರ ಕೈಗೆ ಸಿಕ್ಕಂತಾಯಿತು. ಆದರೆ, ಆ ರಾಯಬಹದ್ದರನು ತನ್ನ ಕುದುರೆಯನ್ನು ಮಂಡಲಾಕಾರವಾಗಿ ತಿರುವುತ್ತ ಒಮ್ಮೆ ಒಬ್ಬನ ಮೇಲೂ ಮತ್ತೊಮ್ಮೆ ಮತ್ತೊಬ್ಬನ ಮೇಲೂ ಏರಿ ಹೋಗುತ್ತಿದ್ದನು. ಶತ್ರುಗಳಾದರೂ ಜಾಣರಾದ ರಾವುತರಾದ್ದರಿಂದ ಅವರು ನರೇಂದ್ರನ ಹೊಡೆತಗಳನ್ನು ತಪ್ಪಿಸಿ ಕೊಂಡು ಅವನ ಮೈಮೇಲೆ ಬರುತ್ತಿದ್ದರು. ಕಡೆಗೆ ಒಬ್ಬನು ನರೇಂದ್ರನ ಹಿಂಭಾಗಕ್ಕೆ ಬಂದು ತನ್ನ ಬರ್ಚಿಯಿಂದ ಅವನ ಬೆನ್ನಿಗೆ ಚುಚ್ಚಬೇಕೆನ್ನು ವಷ್ಟರಲ್ಲಿಯೇ ಅವನ ಬೆನ್ನಿಗೇ ಜುಲೇಕೆಯ ಬರ್ಚಿಯು ಹೊಡತ ಬಿದ್ದದ್ದ ರಿಂದ ಅವನು ವೇದನೆಯಿಂದ ಒಳಿತಾಗಿ ಕೆರಳಿ ಬಿದ್ದುಬಿಟ್ಟನು. ಹೀಗೆ ತಾವು ನಾಲ್ವರು ಬಿದ್ದದ್ದು ಕಂಡು ಉಳಿದವನು ತನ್ನ ಜೀವದಂಜಿಕೆಗಾಗಿ ತನ್ನ ಕುದುರೆಯನ್ನು ತಿರುಗಿಸಿ ಹಿಡಿದು ಓಡಿಸುತ್ತ ಹಳ್ಳ ದಾಟಿ ಪಾರಾಗಿ ಹೋದನು. ಜುಲೇಕೆಯು ಓರ್ವಳೆ ಇರುವಳೆಂದು ತಿಳಿದು ನರೇಂದ್ರನು ಅವನ ಬೆನ್ನಟ್ಟುವದನ್ನು ಬಿಟ್ಟುಬಿಟ್ಟನು.

ಜುಲೇಕೆಯೂ, ನರೇಂದ್ರನೂ, ಕೂಡಿ ಜಾಫರನನ್ನು ಎಬ್ಬಿಸಿದರು. ಆವನಿಗೇನೂ ಗಾಯವಾಗಿರದಿದ್ದರೂ ಅವನ ಕಾಲು ರಿಕೇಬಿನಲ್ಲಿ ಸಿಕ್ಕಿರುವದ ರಿಂದ ಕುದುರೆಯು ಬಿದ್ದ ಭರಕ್ಕೆ ಆವನ ಕಾಲಿಗೆ ಪೆಟ್ಟುಹತ್ತಿತು. ನರೇಂದ್ರನು ಬೇಗನೆ ಮೃತರಾದ ಶತ್ರುಗಳಲ್ಲಿ ಒಬ್ಬನ ಕುದುರೆಯನ್ನು ತಂದು ಅವನನ್ನು ಮೆಲ್ಲನೆ ಅದರ ಮೇಲೆ ಕುಳ್ಳಿರಿಸಿ “ಜಾಫರ, ಮೆಲ್ಲನೆ ನಮ್ಮೊಡನೆ ಬರುವಿ ಯಷ್ಟೇ?” ಎಂದು ಕೇಳಲು ಜಾಫರನು ಏನೂ ಚಿಂತೆಯಿಲ್ಲವೆಂದು ಹೇಳಿದನು. ಬಳಿಕ ಮೂವರೂ ಕುದುರೆಗಳನ್ನೇರಿಕೊಂಡು ಸಾವಕಾಶವಾಗಿ ಮಾರ್ಗವನ್ನು ಹಿಡಿದರು.

ಪ್ರಾತಃಕಾಲವು ಸಮೀಪಿಸಿದ್ದರಿಂದ ಪೂರ್ವದಿಕ್ಕು ಬೆಳಗುತ್ತ ಬಂದಿತು. ಸುಳಿಗಾಳಿಯ ತಂಪಾದ ಝುಳುಕಿನಿಂದ ಆ ಪ್ರಯಾಣಸ್ಥರ ಶ್ರಮವು ಪರಿಹಾರ ವಾಯಿತು. ಅವರು ಆನಂದದಿಂದ ಈಗಲೆ ಸಂಭವಿಸಿದ ಯುದ್ಧದ ಸಂಗತಿ

ಗಳನ್ನು ಕುರಿತು ಒಳ್ಳೇ ಸ್ಫೂರ್ತಿಯಿಂದ ಮಾತಾಡುತ್ತ ನಡೆದರು. ಜುಲೇಕೆಯು ಸಮಯೋಚಿತವಾದ ಸಾಹಸದ ಕೃತ್ಯವನ್ನು ಕುರಿತು ನರೇಂದ್ರನು ಕೊಂಡಾಡಿದನು. ಅಷ್ಟರಲ್ಲಿ ಅವರ ಕಿವಿಗೆ ಚೌಘಡದ ಇಂಪಾದ ನಾದವು ಕೇಳಿಬಂದಿತು. "ಜಾಫರ, ಹರಪುರವನ್ನು ನಾವು ಸಮೀಪಿಸಿರುವೆವೇನು ?" ಎಂದು ನರೇಂದ್ರನು ಕೇಳಿದನು. "ಜೀ ಹುಜೂರ್. ಹರಪುರವು ಒಂದು ಕೂಗಳತಿಯಲ್ಲಿಯೇ ಇರುವದು. ಆ ಚೌಘಡವು ಪೃಥ್ವೀರಾಜನ ರಾಜ್ಯದಲ್ಲಿಯೇ ಬಾರಿಸುತ್ತಿರುವದು" ಎಂದು ಜಾಫರನು ಹೇಳಿದನು.

ಈ ಮಾತು ಕೇಳಿ ಜುಲೇಕೆಯು ತನ್ನ ಕುದುರೆಯನ್ನು ತಡೆದು ನಿಲ್ಲಿಸಿ "ರಾಯಬಹದ್ದೂರ, ನನಗಿನ್ನು ಅಪ್ಪಣೆ ಕೊಡಿರಿ. ಅಲ್ಲಿಯೇ ಆ ಗಿಡಗಳ ಗುಂಪಿನಲ್ಲಿ ಶಹಾಶರೀಫರವರ ಮಠವಿರುವದು. ಸಲಾಮ್" ಎಂದು ನುಡಿದು ನರೇಂದ್ರನ ಅನುಜ್ಞೆಯ ಮಾರ್ಗಪ್ರತೀಕ್ಷೆ ಮಾಡುತ್ತ ನಿಂತಳು.

"ಜುಲೇಕಾ, ಹೋಗುತ್ತೀಯಾ ? ಹೋಗಿ ಬಾ. ಮುಂದೆ ಭೆಟ್ಟಿ ಯಾವಾಗ ?" ಎಂದು ನರೇಂದ್ರನು ಆ ಚಮತ್ಕಾರಳಾದ ಹುಡುಗೆಯ ವಿರಹವಿಷಾದದಿಂದ ನುಡಿದನು.

"ಯೋಗಾಯೋಗದ ಮೇರೆಗೆ ಭೆಟ್ಟಿಯಾದೀತು. ಈಗಲೇ ಹೇಳಲಾಗದು."

"ಜುಲೇಕಾ, ನಾನು ದೂರ ದೇಶಕ್ಕೆ ಹೋಗುತ್ತೇನೆ. ಅಪರಿಚಿತನಾದ ನನ್ನ ಮೇಲೆ ಕರುಣವನ್ನಿಟ್ಟು ನೀನು ಅನೇಕ ಉಪಕಾರಗಳನ್ನು ಮಾಡಿದಿ. ನಿನ್ನನ್ನು ಮರೆದಿರುವದು ಹೇಗೆ ?" ಎಂದು ನರೇಂದ್ರನು ಖಿನ್ನನಾಗಿ ನುಡಿದನು.

"ರಾಯಬಹದ್ದೂರ್, ತಮ್ಮಂಥ ಉದಾರರೂ, ಧೀರರೂ, ವಿನಯಶೀಲರೂ ಆದವರನ್ನು ಅಗಲಿ ಇರಬೇಕಾದರೆ ನನಗಾದರೂ ವ್ಯಸನವೇ ಆಗುತ್ತದೆ. ಅದಕ್ಕೆ ಉಪಾಯವಿಲ್ಲ. ಆದರೂ ನಿಮ್ಮ ವಿವಾಹದ ಕಾಲಕ್ಕೆ ಬೀರನಗರಕ್ಕೆ ಬಂದು ಆನಂದದಿಂದ ನಿಮ್ಮ ಮಂಗಲೋತ್ಸವವನ್ನು ನೋಡುವೆನು."

"ಸತ್ಯವೇನಿದು ಜುಲೇಕಾ ? ಏನು ನಗೆಯಾಡುವಿಯೋ ?"

"ನಾನು ಬಾರದಿದ್ದರೆ ನಿಮ್ಮ ವಿವಾಹವೇ ಆಗುವಂತೆ ಇಲ್ಲ. ಸಲಾಮ್!" ಎಂದವಳೇ ಜುಲೇಕೆಯು ತನ್ನ ಕುದುರೆಯನ್ನು ಅಡ್ಡಹಿಡಿದು ಓಡಿಸುತ್ತ ನಡೆದಳು.

ಮಯೂರಪಿಚ್ಛವನ್ನು ಹೀಯಾಳಿಸುವಂಥ ಅವಳ ಮನೋಹರವಾದ ನೀಲಕುಂತಲದ ಕಲಾಪವು ಸುಳಿಗಾಳಿಗೆ ಹಾರಾಡುತ್ತಿರಲು ಅದು ಅವಳ ಮುಖವೆಂಬ ಚಂದ್ರನನ್ನು ಬಿಟ್ಟು ಓಡುತ್ತಿರುವ ನೀಲಮೇಘದಂತೆ ಕಂಡಿತು. ಬೆಳ್‌ಗುದುರೆಯನ್ನು ಏರಿಕೊಂಡು ಬಹು ವೇಗದಿಂದ ನಡೆದಿರುವ ಆ ಗೌರ ಸುಂದರಿಯು ಪ್ರಭಾತಲಕ್ಷ್ಮಿಯ ಆಗಮನದ ಸುವಾರ್ತೆಯನ್ನು ದಿಗಂತಕ್ಕೆ ಮುಟ್ಟಿಸಲು ಹೊರಟಿರುವ ಆ ಲಕ್ಷ್ಮಿಯ ಪರಿಚಾರಿಕೆಯಂತೆ ಶೋಭಿಸಿದಳು. ಅರುಣೋದಯದ ಶೋಭೆಯ ವರ್ಣನಾಪರವಾದ ಪದವನ್ನು ಹಾಡುತ್ತಿರುವ ಜುಲೇಕೆಯ ಮಂಜುಲವಾದ ಸ್ವರವು ಮೆಲ್ಲಮೆಲ್ಲನೆ ಕೇಳದಂತಾಯಿತು. ನಿಮಿಷ ನಿಮಿಷಕ್ಕೆ ತನ್ನನ್ನು ಬಿಟ್ಟು ದೂರಾಗುತ್ತಿರುವ ಜುಲೇಕೆಯ ಅತಿ ಮನೋಹರವಾದ ಮೂರ್ತಿಯು ಪ್ರಾತಃಕಾಲದ ಮಬ್ಬಿನಲ್ಲಿ ಕಡೆಗೆ ಕಾಣ ದಂತಾದ ಕೂಡಲೆ ನರೇಂದ್ರನು ಮನಸ್ಸಿನಲ್ಲಿ ದುಃಖಿತನಾದನು.

## ಮೂವತ್ತೊಂದನೆಯ ಅಧ್ಯಾಯ

### ಅವರು ಮತ್ತೇನಾದರೂ ಗುರುತು ಕೇಳಿದರೆ?

ಪೃಥ್ವೀರಾಜನು ಪ್ರಾತಃಕಾಲದಲ್ಲೆದ್ದು ಪೋಷಾಕು ಮಾಡಿಕೊಂಡು ಸೈನ್ಯದ ಸಮಾಚಾರಕ್ಕಾಗಿ ಇನ್ನು ಹೊರಬೀಳುವವನು, ಅಷ್ಟರಲ್ಲಿಯೇ ನರೇಂದ್ರನು ಅವನ ತಂಬುವಿನಲ್ಲಿ ಪ್ರವೇಶಮಾಡಿದನು.

"ನರೇಂದ್ರನಾಥರಾಯ್!" ಎಂದು ಪೃಥ್ವೀರಾಜನು ಆಶ್ಚರ್ಯ ಚಕಿತನಾಗಿ ಉದ್ಗಾರ ತೆಗೆದನು.

"ಇಷ್ಟ್ಯಾಕೆ ಆಶ್ಚರ್ಯ, ರಾಜಾಬಹದ್ದೂರ್?" ಎಂದು ನರೇಂದ್ರನು ಮಂದಸ್ಮಿತನಾಗಿ ಕೇಳಿದನು.

" ರಾಯ್‌ಬಹದ್ದೂರ, ಈಗ ನೀವು ಆಗ್ರಾಪಟ್ಟಣವನ್ನು ಬಿಟ್ಟು ಹೊರಡುವ ಸಮಯ. ಆದರೆ ರಾತ್ರಿಯಲ್ಲಿಯೇ ಹೊರಟಿದ್ದು ನೀವು ಓಡಿಬಂದ ಕಾರಣವೇನು ? "

" ರಾಜಾಬಹದ್ದೂರ, 'ದೀವಿಗೆಯ ಕುಡಿಯಲ್ಲಿಯೇ ಕಪ್ಪು' ಎಂಬಂತೆ ಆಗ್ರಾಪಟ್ಟಣದ ಪ್ರಭೆಯು ದಿಗ್ಮಂಡಲದಲ್ಲಿ ಪ್ರಕಾಶಿಸುತ್ತಿದ್ದರೂ ಆ ಪಟ್ಟಣದಲ್ಲಿಯೇ ಮೂರ್ಖ ಜನರ ಅತ್ಯಾಚಾರಗಳೆಂಬ ಕಲಂಕವು ಕಂಡು ಬರುತ್ತದಷ್ಟೆ ? "

" ನಿಮ್ಮ ಮೈಮೇಲೆ ಏನಾದರೂ ಅಂಥ ಪ್ರಸಂಗವು ಬಂದಿತ್ತೆಂಬದು ನಿಮ್ಮ ಪ್ರಸ್ತಾವನೆಯ ಮೇಲಿಂದಲೇ ತಿಳಿಯಬರುತ್ತದೆ. ಏನು ಪ್ರಸಂಗ ವದು ? "

ನರೇಂದ್ರನು ತನಗೆ ಸಂಭವಿಸಿದ ಎಲ್ಲ ಸಂಗತಿಯನ್ನು ಹೇಳಿ ಜುಲೇಕೆಯ ಜಾಣ್ಮೆಯಿಂದ ತಾನು ಹೇಗೆ ಪಾರಾದೆನೆಂಬದನ್ನೂ ಕೂಡಾ ಹೇಳಿ ಅವಳ ಸ್ತುತಿಯನ್ನು ಮಾಡಿದನು.

" ಓಹೋ ! ಎಂಥ ಸಾಹಸವತಿಯಾದ ತರುಣಿಯವಳು ! " ಎಂದು ಪೃಥ್ವೀರಾಜನೆಂದನು.

" ಒಂದು ಒಂದುವರೆ ತಿಂಗಳು ಅವಳ ಜೊತೆಯಲ್ಲಿ ಇದ್ದರೂ ಅವಳ ಸಾಹಸದ ಇಯತ್ತೆಯೇ ನನಗೆ ತಿಳಿಯಲಿಲ್ಲ. ಅವಳೆಷ್ಟು ಸಾಹಸ ವುಳ್ಳವಳೋ ಅಷ್ಟೇ ಸದ್ಗುಣಿಯೂ ಆಗಿರುವಳು. ರೂಪ ನೋಡಿದರಂತೂ ಅವಳು ನಕ್ಷತ್ರಮಾಲೆಯೇ."

" ನರೇಂದ್ರನಾಥ, ಸದ್ಗುಣಿಗಳಾದ ಸ್ತ್ರೀಯರಲ್ಲಿ ಸಾಹಸವು ಹೆಚ್ಚಾಗಿರುವದು, ಕೈಕೇಯಿ, ಸತ್ಯಭಾಮಾ ಮುಂತಾದ ಪುರಾಣಪ್ರಸಿದ್ಧರಾದ ಸ್ತ್ರೀಯರು ಸುರಾಸುರರ ಯುದ್ಧಗಳಲ್ಲಿ ತಮ್ಮ ಪರಾಕ್ರಮವನ್ನು ಮಾಡಿ ತೋರಿಸಿದರು. ನಮ್ಮ ರಜಪೂತಸ್ಥಾನದ ಪುರುಷಸಿಂಹನಾದ ಪೃಥ್ವೀರಾಜನ ಅರ್ಧಾಂಗಿಯಾದ ತಾರಾದೇವಿಯವರು ತಮ್ಮ ಪತಿರಾಜನೊಡನೆ ಯುದ್ಧಕ್ಕೆ ಹೋದಾಗ ಒಂದು ಸಮಯದಲ್ಲಿ ಮದೋದ್ರಿಕ್ತವಾದದ್ದೊಂದು ಭವ್ಯವಾದ ಗಜವು ಅಗಸೇಬಾಗಿಲಕ್ಕೆ ಅಡ್ಡಾಗಿ ನಿಂತು ಪೃಥ್ವೀರಾಜರ ಮಾರ್ಗವನ್ನು ಕಟ್ಟಿತ್ತು. ಮುಂದೇನು ಮಾಡಬೇಕೆಂದು ರಾಜರು ಆಲೋಚಿಸುವಷ್ಟ

ರಲ್ಲಿಯೇ ವೀರಪತ್ನಿಯರಾದ ತಾರಾದೇವಿಯವರು ತಮ್ಮ ಕುದುರೆಯನ್ನು ಆ ಗಜೇಂದ್ರನ ಮೇಲೆ ಹಾಕಿ ತತ್‍ಕ್ಷಣವೇ ಅದರ ಸೊಂಡೆಯನ್ನು ಕಡಿದು ತುಂಡುಮಾಡಿದರು. ಆಹಾ! ನರೇಂದ್ರನಾಥ, ಚಿತೋರದ ಹೊರಗೆ ಇಂಥ ಪರಾಕ್ರಮಶಾಲಿಗಳನ್ನು ಎಲ್ಲಿಯಾದರೂ ಕಂಡದ್ದುಂಟೆ?" ಎಂದು ಹೇಳಿ ಪೃಥ್ವೀರಾಜನು ಆನಂದಾಶ್ರುಗಳನ್ನು ಉದುರಿಸಿದನು.

ಹೀಗೆ ತುಸು ಹೊತ್ತು ಆವರು ಸ್ತ್ರೀಯರ ಪರಾಕ್ರಮವನ್ನು ಕುರಿತು ಮಾತಾಡುತ್ತ ಕುಳಿತ ಮೇಲೆ ಪೃಥ್ವೀರಾಜನು ಸೈನ್ಯದ ವ್ಯವಸ್ಥೆಯನ್ನು ನೋಡಿ ಬಂದು "ನಾಳೆ ಪ್ರಾತಃಕಾಲಕ್ಕೆ ಇಲ್ಲಿಂದ ಹೊರಡಬೇಕು" ಎಂದು ಎಲ್ಲರಿಗೂ ಆಜ್ಞೆ ಮಾಡಿದನು.

ಆ ದಿವಸ ರಾತ್ರಿ ನರೇಂದ್ರನೂ, ಪೃಥ್ವೀರಾಜನೂ ಭೋಜನ ತೀರಿಸಿ ಕೊಂಡು ಮಾತಾಡುತ್ತ ಕುಳಿತರು. ಬಿಕಾನೇರದ ಆ ತರುಣ ರಾಜನಿಗೆ ತನ್ನ ರಾಜಸ್ಥಾನದ ವೀರರ ಮಹಾತ್ಮೆಯು ಹೊರತಾಗಿ ಬೇರೆ ವಿಷಯಗಳೇ ಸವಿ ಯಾಗಿ ತೋರುತ್ತಿದ್ದಿಲ್ಲ. ಆವನು ರಜಪೂತ ವೀರರ ಅನೇಕ ಪ್ರಕಾರವಾದ ಸಾಹಸಗಳನ್ನು ಕುರಿತು ಪದಪದ್ಯಗಳನ್ನು ಹಾಡಿ ನರೇಂದ್ರನ ಮನೋರಂಜನ ಮಾಡಿದನು.

"ರಾಜಾಸಾಹೇಬ, ಚಿತೋರದ ರಾಜರಲ್ಲಿ ರಾಣಾಪ್ರತಾಪಸಿಂಹನೇ ಎಲ್ಲರಿಗೂ ಮಿಗಿಲಾದವನೆಂದು ನಾನು ಎಣಿಸುತ್ತೇನೆ." ಎಂದು ನರೇಂದ್ರನು ತನ್ನ ಅಭಿಪ್ರಾಯವನ್ನು ಹೇಳಿದನು.

"ರಾಣಾಪ್ರತಾಪಸಿಂಹನು ದೊಡ್ಡ ಪರಾಕ್ರಮಿಯೆಂದು ಪ್ರತ್ಯಕ್ಷ ಅಕಬರಬಾದಶಹರೇ ಪ್ರಾಂಜಲಿಗಳಾಗಿ ಒಪ್ಪಿಕೊಳ್ಳುತ್ತಾರಷ್ಟೆ? ಈ ಪ್ರತಾಪ ಸಿಂಹರ ಮುತ್ತಾತನಾದ ಸಂಗರಾಜನು ಪ್ರತಾಪಸಿಂಹರಾಜರಿಗೆ ಇಮ್ಮಡಿ ಯಾದ ರಣಧುರಂಧರನು. ಯುದ್ಧಗಳಲ್ಲಿ ತೊಂಬತ್ತು ಗಾಯಗಳನ್ನು ತಳೆದವನಾದ ಸಂಗ್ರಾಮಸಿಂಹನು (ವಾಡಿಕೆಯಲ್ಲಿ ಸಂಗರಾಜನು) ಸಂಗ್ರಾಮ ಸಿಂಹನೇ ಅಲ್ಲವೆ? ಆದರೆ, ಆ ಸಂಗ್ರಾಮಸಿಂಹನ ಅಣ್ಣನಾದ ಪೃಥುರಾಜ ನೆಂದರೆ ಪ್ರತಿ ಪಾರ್ಥನೇ. ಹೇಡಿಯೂ, ನೀಚನೂ, ಕೃತಘ್ನನೂ ಆದ ಶಿರೋಹಿಯ ರಾಜನು ವೀರಮಂಡಲಕ್ಕೆ ದಿನಮಣಿಯಾದ ಆ ಪೃಥುರಾಜನಿಗೆ ವಿಷ ಕೊಟ್ಟು ಕೊಂದು ಹಿಂದುಸ್ಥಾನಕ್ಕೆ ಅಂಧಕಾರವನ್ನು ತಂದನು. ಆ

ಪುರುಷಸಿಂಹನಿಲ್ಲದಾದ ಮೇಲೆಯೇ ಬಾಬರನಂಥ ನರಿಯು ಬಂದು ಕತ್ತೆಸಿಂಹ, ಕೋಣಸಿಂಹ, ಮಾನಸಿಂಹ, ಅಪಮಾನಸಿಂಹ ಎಂದು ಹೆಸರಿಟ್ಟು ಕೊಂಡು ಸಿಂಹ ಉದಗ್ರವಾದ ಪ್ರತ್ಯಯಕ್ಕೆ ಕಲಂಕ ತರುವಂಥ ಕ್ಷತ್ರಿಯಾಧಮ ರನ್ನು ಓಡಿಸಿದನು" ಎಂದು ನುಡಿದು ವ್ಯಸನದ ಉದ್ವೇಗದಿಂದ ಪೃಥ್ವೀರಾಜನು ಉಸ್ಸೆಂದು ಕುಳಿತನು.

ಹೀಗೆ ಇವರು ಮಾತಾಡುತ್ತ ಕುಳಿತಾಗ ತಂಬುವಿನ ಹೊರಗೆ ಸೈನಿಕರು ಒಬ್ಬ ಹಾಡುವ ಹುಡುಗನನ್ನು ಕರತಂದು ಪದ ಹಚ್ಚಿದ್ದರು. ಆ ಪೋರನು ಹಾಡಲು 'गोकुलसे श्याम मथुरा जो गयो' ಎಂಬ ಪದವನ್ನು ಬಹು ಮಂಜುಲವಾಗಿ ಹಾಡುತ್ತಿರುವದನ್ನು ಕೇಳಿ ಗಾನಲೋಲನಾದ ಪೃಥ್ವೀರಾಜನು ಆ ಹುಡುಗನನ್ನು ಒಳಕ್ಕೆ ಕರಿಸಿದನು. ಆ ಧಿಟ್ಟನಾದ ಪೋರನು ಬಂದು ಅದೇ ಪದವನ್ನು ಮತ್ತೆ ಬಹು ಸುರಸವಾಗಿ ಹಾಡಿದನು.

"ನರೇಂದ್ರನಾಥ, ಈ ಹುಡುಗನ ಸ್ವರಸಂಯೋಗಗಳನ್ನೂ ಮೂರ್ಛನಗಳನ್ನೂ, ಲಯವನ್ನೂ ನೋಡಿದಿರಾ! ವಾಃ ವಾಃ ವಾಃ, ಶಾಬಾಸ್! ಶಾಬಾಸ್!" ಎಂದು ಪೃಥ್ವೀರಾಜನು ಆ ಪೋರನನ್ನು ಅಭಿನಂದಿಸಿದನು.

"ಬಹು ಚನ್ನಾಗಿ ಹಾಡುತ್ತಾನೆ. ಪ್ರಸಿದ್ಧರಾದ ಗಾಯಕರಲ್ಲಿ ಇವನು ಕಲಿತಿರುವಂತೆ ಕಾಣುತ್ತದೆ. ಹುಡುಗಾ, ನೀನು ಗಾಯನಕಲೆಯನ್ನು ಕಲಿತಿರುವಿಯೇನು?" ಎಂದು ನರೇಂದ್ರನು ಕೇಳಿದನು.

"ಆಹುದು ದೇವರೂ, ನನ್ನ ತಂದೆಯುವರೇ ಪ್ರಸಿದ್ಧರಾದ ಗಾಯಕ ರಾಗಿದ್ದರು."

"ಹುಡುಗಾ, ನೀನು ಯಾವ ದೇಶದವನು?" ಎಂದು ಪೃಥ್ವೀರಾಜನು ಕೇಳಿದನು.

"ದೇವರೂ, ನಾನು ಬಂಗಾಲದವನು."

"ಬಂಗಾಲೀ ಭಾಷೆಯಲ್ಲಿಯ ಪದಗಳನ್ನು ಹೇಳಬಲ್ಲಿಯಾ?" ಎಂದು ನರೇಂದ್ರನು ಕೇಳಿದನು.

"ಹಾಡಬಲ್ಲೆನು. ಆದರೆ ಹೀಗೆ ರಾಗದಲ್ಲಿ ಮೆಟ್ಟಿನ ಮೇಲೆ ಹಾಡಲಿಕ್ಕೆ ಬರಲಿಕ್ಕಿಲ್ಲ."

"ಯಾಕೆ? ನೀನು ಕಲಿತವನೇ ಇರುವಿಯಲ್ಲವೆ?" ಎಂದು ನರೇಂದ್ರನು ಕೇಳಿದನು.

"ದೇವರೂ, ಯಾವನೇ ಗಾಯಕನಾಗಲಿ ಅವನು ನಾಲ್ವತ್ತು ಐವತ್ತು ಪದಗಳನ್ನು ಮಾತ್ರ ಚನ್ನಾಗಿ ಅರೆದು ಇಟ್ಟುಕೊಂಡಿರುವನು. ಅಷ್ಟೇ ಪದಗಳನ್ನೇ ಅವನು ಎಲ್ಲಿ ಹೋದರೂ ಹಾಡುವದು. ಹೊಸ ಪದಗಳನ್ನು ಅವನು ಚನ್ನಾಗಿ ಹಾಡಲಾರನು. ನನಗಾದರೂ ನನ್ನ ಗುರುಗಳು ಇಪ್ಪತ್ತೈದು ಮೂವತ್ತು ಪದಗಳನ್ನು ಚನ್ನಾಗಿ ಕಲಿಸಿದ್ದಾರೆ. ಅವುಗಳನ್ನು ಬಿಟ್ಟು ಹೊರಗಿನ ಪದಗಳನ್ನು ಹಾಡುವೆನೆಂದರೆ ನನ್ನಿಂದಾಗದು."

"ಗಾಯಕರ ಹುರುಳು ಹೀಗಿರುವದೇನು?" ಎಂದು ನರೇಂದ್ರನು ಕೇಳಿ ನಕ್ಕನು.

ಆ ಹುಡುಗನು ಮತ್ತೆ, 'भरन न देत बाबरिया' ಎಂಬ ಪದವನ್ನು ಒಳ್ಳೇ ಉಲ್ಲಾಸದಿಂದ ಹಾಡಿದನು.

"ಬಹೋತ್ ಅಚ್ಛಾ! ಕ್ಯಾ ಬಾತ್ ಹೈ! ಖಾಸೀ!" ಎಂದು ನರೇಂದ್ರನೂ, ಪೃಥ್ವೀರಾಜನೂ ತಮ್ಮತಮ್ಮ ಸಂತೋಷವನ್ನು ತೋರಿಸಿ ಆ ಹುಡುಗನಿಗೆ ಎರಡು ಅಕಬರೀ ಮೋಹರುಗಳನ್ನು ಕೊಟ್ಟರು.

ಆ ಹುಡುಗನು ಅವರೀರ್ವರಿಗೂ ಪ್ರಣಾಮ ಮಾಡಿ "ದೇವರೂ, ಬಹಳ ಕೊಟ್ಟಿರಿ. ಆದರೆ ನನ್ನದು ಇನ್ನೊಂದು ಕೋರಿಕೆಯದೆ" ಎಂದು ಹೇಳಿಕೊಂಡನು.

"ಮತ್ತೇನು ಬೇಕು ಹೇಳು?" ಎಂದು ಪೃಥ್ವೀರಾಜನು ಪ್ರೀತನಾಗಿ ಕೇಳಿದನು.

"ಮಹಾರಾಜರ ಪರಿವಾರದೊಡನೆ ನಾನು ರಾಜಮಹಾಲಿಗೆ ಬರಬೇಕೆಂದು ಮಾಡಿದ್ದೇನೆ. ಅಪ್ಪಣೆ ಇರಬೇಕು."

"ಅವಶ್ಯವಾಗಿ ಬಾ; ನಿನ್ನಂಥ ಗುಣಿಯಾದ ಹುಡುಗನು ಬೇಡಿದರೂ ಸಿಕ್ಕಲಿಕ್ಕಿಲ್ಲ. ನಮ್ಮ ಹವಾಲದಾರರ ಜೊತೆಯಲ್ಲಿ ಇದ್ದುಕೊಂಡು ನಡೆ" ಎಂದು ಪೃಥ್ವೀರಾಜನು ಹೇಳಿದನು.

"ಹುಡುಗಾ, ನೀನು ರಾಜಮಹಾಲಿಗೆ ಯಾಕೆ ಹೋಗುವಿ?" ಎಂದು ನರೇಂದ್ರನು ಕೇಳಿದನು.

"ಅಲ್ಲಿ ನನ್ನ ಮಾತೆಯವರಿದ್ದಾರೆ. ತಂದೆಯವರು ತೀರಿಕೊಂಡ ಬಳಿಕ ನಾನು ಗಾನವಿದ್ಯೆಯನ್ನು ಕಲಿಯಬೇಕೆಂದು ದಿಲ್ಲಿಗೆ ಹೋಗಿದ್ದೆನು."

"ನಿನ್ನ ತಂದೆಯವರ ಹೆಸರೇನು ?"

"ರವೀಂದ್ರಪಾಲ" ಎಂದು ಹುಡುಗನು ಹೇಳಿದನು.

"ರವೀಂದ್ರಪಾಲ! ರವೀಂದ್ರಪಾಲ ಗವಾಯಿಯು ಬಿಲಾಸಪುರದಲ್ಲಿ ಇದ್ದಿಲ್ಲವೆ ?"

"ಅಹುದು ದೇವರೂ. ಅವರು ತೀರಿಕೊಂಡ ಬಳಿಕ ನಮ್ಮ ಮಾತೆಯವರು ರಾಜಮಹಾಲಿಗೆ ಬಂದರು."

"ನಿನ್ನ ಹೆಸರೇನು ಹುಡುಗಾ ?"

"ದೇವರೂ, ನನ್ನನ್ನು ಹೇಮಚಂದ್ರನೆಂದು ಕರೆಯುತ್ತಾರೆ."

"ಎಂಥ ಚಲೋ ಹೆಸರು ನಿನ್ನದು!" ಎಂದು ನರೇಂದ್ರನು ಉದ್ಗಾರ ತೆಗೆದನು.

"ಈ ಚಲೋ ಹೆಸರಿನಿಂದ ನನಗೇನೂ ಹಿತವಾಗಿಲ್ಲ. ಹೆಸರಿನಲ್ಲಿ ಏನಿದೆ ದೇವರೂ ? ಬಂಗಾಲದಲ್ಲಿ ಇಂಥ ಹೆಸರುಗಳೇ ಬಹಳ. ಹೇಮಚಂದ್ರ, ಹೇಮಭೂಷಣ, ಹೇಮಕಾಂತಾ, ಹೇಮಲತಾ ಮುಂತಾದ ಹೇಮಪೂರ್ವಕವಾದ ಅನೇಕ ಹೆಸರುಗಳಿವೆ. ಇವೆಲ್ಲ ಒಳ್ಳೇ ಹೆಸರುಗಳೇನು ?" ಎಂದು ಹೇಮಚಂದ್ರನು ಕೇಳಿದನು.

"ಹೇಮಲತಾ ಎಂಬ ಹೆಸರು ಮನಸ್ಸಿಗೆ ಅಲ್ಹಾದವನ್ನೀಯುವದಲ್ಲವೆ ?" ಎಂದು ನರೇಂದ್ರನು ಏನೋ ಧ್ಯಾನಿಸುತ್ತ ಕೇಳಿದನು.

"ಹೆಸರಿನಲ್ಲಿ ಏನಿದೆ ನರೇಂದ್ರನಾಥ? ನನ್ನ ಹೆಸರೇ ನೋಡು, ಪೃಥ್ವೀರಾಜ! ಇನ್ನು ನಿಜವಾಗಿ ಪೃಥ್ವೀರಾಜನ್ಯಾರು ನೀನೇ ಹೇಳು. ನಮಗೆ ಪ್ರಿಯತಮಳಾದವಳ ಹೆಸರು 'ತೀನ ಕೌರೀ' (ಮೂರು ಕವಡೆ ಎಂದಿದ್ದರೂ, ಆ ಹೆಸರು ಕೇಳಿದ ಕೂಡಲೆ ನಮಗೆ ಅಲ್ಹಾದವಾಗುವದು. ನಮಗೆ ಬೇಡಾದವಳು ರೂಪವತಿಯೂ, ಅವಳ ಹೆಸರು ಮೋಹಿನಿಯು ಎಂದಿದ್ದರೂ ಆ ಹೆಸರು ಕೇಳಿದರೆ ನಮಗೆ ತಿರಸ್ಕಾರವೇ ಆಗುವದು. ಹೇಮಲತೆಯೆಂಬ ಹೆಸರು ನಿಮಗೆ ಚನ್ನಾಗಿ ಕಾಣುತ್ತಿರುವ ಪಕ್ಷದಲ್ಲಿ ಅದು ನಿಮ್ಮ ಪ್ರಿಯತಮೆಯ ಹೆಸರೇ ಇರಬಹುದು. ಯಾಕೋ ಹುಡುಗಾ ಹೇಮಚಂದ್ರಾ,

ನಾನು ಹೇಳುವದು ಸರಿಯಲ್ಲವೆ ? ”

“ ನಾನೇನು ಬಲ್ಲೆ ದೇವರೂ ? ಆದರೂ ಮಹಾರಾಜರ ಮಾತು ಸತ್ಯವಾಗಿರುವಂತೆ ಕಾಣುತ್ತದೆ. ”

ನರೇಂದ್ರನಿಗೆ ಈ ಮಾತಿನಿಂದ ಸಾಕುಬೇಕಾಗಿ ಹೋಯಿತು. ರಾತ್ರಿ ಬಹಳಾದ್ದರಿಂದ ಎಲ್ಲರೂ ತಮ್ಮ ತಮ್ಮ ಸ್ಥಳಕ್ಕೆ ಹೋಗಿ ಮಲಗಿಕೊಂಡರು.

ಪೃಥ್ವೀರಾಜನಿಗೆ ಯುದ್ಧಮಾಡುವ ಪ್ರಸಂಗವಿಲ್ಲದ್ದರಿಂದ ಅವನು ತನ್ನ ಸೈನ್ಯವನ್ನು ಸಾವಕಾಶವಾಗಿ ಕರಕೊಂಡು ರಾಜಮಹಾಲಿನ ಕಡೆಗೆ ನಡೆದನು. ತಿಂಗಳಾನುತಿಂಗಳ ಪ್ರವಾಸ ಮಾಡಿ ಪೃಥ್ವೀರಾಜನ ಪರಿವಾರವು ರಾಜ ಮಹಾಲಿಗೆ ಬಂದು ಮುಟ್ಟಿತು. ರಾಜಮಹಾಲಿಗೆ ಬಂದ ದಿವಸ ರಾತ್ರಿ ಹೇಮಚಂದ್ರನು ನಿತ್ಯದಂತೆ ಪೃಥ್ವೀರಾಜ ನರೇಂದ್ರನಾಥರ ಮುಂದೆ ಕುಳಿತು ಅವರ ಮನಸ್ಸು ಸಂತೋಷಪಡಿಸಿದ ಬಳಿಕ “ ದೇವರೂ, ನನಗಿನ್ನು ಅಪ್ಪಣೆ ಕೊಡಿರಿ, ಮನೆಗೆ ಹೋಗುತ್ತೇನೆ” ಎಂದು ಹೇಳಿ ಪೃಥ್ವೀರಾಜನ ಅಪ್ಪಣೆಯನ್ನು ತೆಗೆದುಕೊಂಡು ಹೋದ ಬಳಿಕ ನರೇಂದ್ರನು ಹೊರಗೆ ಬಂದು ಆ ಹುಡುಗನನ್ನು ಕರೆದನು. ಅವನು ಬಂದು ‘ ಏನು ಅಪ್ಪಣೆ ? ’ ಎಂದು ಕೇಳಲು, ನರೇಂದ್ರನು “ ಹೇಮಚಂದ್ರ, ನೀನು ಬಿಲಾಸಪುರಕ್ಕೆ ಎಂದಾದರೂ ಹೋಗಿರುವಿಯೇನು ? ” ಎಂದು ಕೇಳಿದನು.

“ ಒಂದೆರಡು ದಿವಸಗಳಲ್ಲಿಯೇ ಹೋಗುವೆನು. ನಾನು ಗಾನವನ್ನು ಕಲಿತು ಬಂದರೆ ಬಿಲಾಸಪುರದ ಜಮೀನದಾರರು ನನಗೆ ಆಶ್ರಯವನ್ನು ಕೊಡುವೆವೆಂದು ಹೇಳಿದ್ದಾರೆ. ಅದಕ್ಕಾಗಿ ಅಲ್ಲಿಗೆ ಹೋಗಲೇಬೇಕು. ರಾಜ ಮಹಾಲಿನಲ್ಲಿ ಕುಳಿತು ಏನು ಮಾಡಲಿ ? ” ಎಂದು ಹೇಳಿದನು.

“ ಬೀರನಗರವನ್ನು ನೀನು ನೋಡಿರುವಿಯೇನು ? ”

“ ನೋಡಿದ್ದೇನೆ. ದೇವೀಪುರದಲ್ಲಿ ನಮ್ಮ ಅಕ್ಕನೇ ಇದ್ದಾಳೆ. ಬಿಲಾಸ ಪುರದಿಂದ ದೇವೀಪುರವು ಮೂರೇ ಹರದಾರಿ. ಬೀರನಗರವಂತೂ ದೇವೀ ಪುರಕ್ಕೆ ಸಮೀಪವಾಗಿಯೇ ಇದೆ. ”

“ ಹಾಗಾದರೆ ನನ್ನದೊಂದು ಕೆಲಸವನ್ನು ನೀನು ಮಾಡುವಿಯಾ ? ”

“ ಮಾಡದೇನು ರಾಯ್‌ಬಹದ್ದೂರ, ಅವಶ್ಯವಾಗಿ ಮಾಡುತ್ತೇನೆ. ”

“ ನಾನೊಂದು ಪತ್ರವನ್ನು ಕೊಡುತ್ತೇನೆ. ಅದನ್ನು ಬೀರನಗರ

ದಲ್ಲಿರುವ ನವಕುಮಾರರವರ ಮಗಳಾದ ಹೇಮಲತಾದೇವಿಗೆ ಗೌಪ್ಯವಾಗಿ ತೆಗೆದುಕೊಂಡು ಹೋಗಿ ಕೊಡುವಿಯಾ ?"

"ಕೊಡುವೆನು. ಆದರೆ ಅವರು ಮತ್ತೇನಾದರೂ ಗುರುತು ಕೇಳಿದರೆ ಹೇಗೆ ?" ಎಂದು ಹೇಮಚಂದ್ರನು ನಗುತ್ತ ಕೇಳಿದನು.

ನರೇಂದ್ರನು ತನ್ನ ಕೊರಳಲ್ಲಿದ್ದ ಬಕುಲಮಾಲೆಯನ್ನು ತೆಗೆದು "ಇಕೋ ಈ ಗುರುತನ್ನು ತೆಗೆದುಕೋ. ಈ ಪತ್ರವನ್ನು ತೆಗೆದುಕೋ." ಎಂದು ಹೇಳಿ ಆ ಪತ್ರವನ್ನೂ, ಬಕುಲಮಾಲೆಯನ್ನೂ ಹೇಮಚಂದ್ರನ ಸ್ವಾಧೀನಮಾಡಿ ಮೇಲೆ ಹತ್ತು ಮೋಹರುಗಳನ್ನು ಕೊಟ್ಟನು.

## ಮೂವತ್ತೆರಡನೆಯ ಅಧ್ಯಾಯ

## ಸ್ಥಿತ್ಯಂತರವು

ಪೃಥ್ವೀರಾಜನ ಪರಿವಾರವು ಸಾವಕಾಶವಾಗಿ ರಾಜಮಹಾಲಿಗೆ ಬರುವ ದರೊಳಗಾಗಿಯೇ ಮಾನಸಿಂಹರಾಜನು ರಾಜಮಹಾಲಿಗೆ ಧಾವಿಸಿ ಬಂದು ಎಂಟು ಹತ್ತು ದಿವಸಗಳಾಗಿದ್ದವು. ಮಾನಸಿಂಹನು ಪಂಜಾಬಕ್ಕೆ ಹೋದಾಗ ಬಂಗಾಲದಲ್ಲಿದ್ದ ನಾಯಬ ಸುಭೇದಾರನು ಎಲ್ಲ ಮಹತ್ವವಾದ ಕೆಲಸಗಳನ್ನು ರಾಜರು ಬರಲೆಂದು ಹಾಗೆಯೇ ಇಟ್ಟಿದ್ದನು. ಆ ಕೆಲಸಗಳಲ್ಲಿ ಬೀರನಗರದ ಕೆಲಸವೂ ಒಂದಾಗಿತ್ತು.

ನವಕುಮಾರನೂ, ಗೋಕುಲದಾಸನೂ ಕೂಡಿ ತಮ್ಮನ್ನು ವಿಲಕ್ಷಣವಾಗಿ ಪೀಡಿಸುತ್ತಾರೆಂದು ಬೀರನಗರದ ಜನರು ಸುಭೇದಾರರ ಕಡೆಗೆ ಮೇಲಿಂದ ಮೇಲೆ ಅರ್ಜಗಳನ್ನು ಬರಕೊಂಡಿದ್ದರು. ಗೋಕುಲದಾಸನು ಅನ್ಯಾಯವಾಗಿ ತಮ್ಮ ಕಡೆಯಿಂದ ಕಂದಾಯಕ್ಕಿಂತಲೂ ಹೆಚ್ಚಿನ ಹಣವನ್ನು ತೆಗೆದುಕೊಳ್ಳು ತ್ತಿರುವನೆಂದೂ, ಅವನು ಲಂಚ ತೆಗೆದುಕೊಂಡು ಪಂಚಾಯತಿಯ ಕೆಲಸ ಗಳಲ್ಲಿ ನವಕುಮಾರನ ಕಡೆಯಿಂದ ಅನ್ಯಾಯದ ತೀರ್ಪುಗಳನ್ನು ಮಾಡಿಸುವ ನೆಂದೂ, ಅವನು ಸುಳ್ಳು ಕಾಗದಗಳನ್ನು ಹುಟ್ಟಿಸಿ ಒಬ್ಬರ ಆಸ್ತಿಯನ್ನು ಮತ್ತೊಬ್ಬರಿಗೆ ಕೊಡಿಸುವನೆಂದೂ, ಸಪ್ರಮಾಣವಾದ ಅರ್ಜಗಳು ಬಂದಿದ್ದವು.

ಮಾನಸಿಂಹರಾಜನು ಆ ಅರ್ಜಿಗಳನ್ನೆಲ್ಲ ಓದಿಕೊಂಡು ಗೋಕುಲ ದಾಸನನ್ನು ರಾಜಮಹಾಲಿಗೆ ಹಿಡಿತರಿಸಬೇಕೆಂದು ಒಬ್ಬ ಅಮಲದಾರನನ್ನೂ ಸಿಪಾಯರನ್ನೂ ಬೀರನಗರಕ್ಕೆ ಕಳಿಸಿದನು. ಆದರೆ ಆ ಧೂರ್ತನು, ಮಾನ ಸಿಂಹರಾಜನು ರಾಜಮಹಾಲಿಗೆ ಬರುವದರೊಳಗಾಗಿಯೇ ಬೀರನಗರ ದೇವೀ ಪುರಗಳ ಲೆಕ್ಕಪತ್ರಗಳನ್ನೆಲ್ಲ ಸುಟ್ಟುಹಾಕಿ ತನ್ನ ಕೈಗೆ ಸಿಕ್ಕಷ್ಟು ಹಣವನ್ನು ಎತ್ತಿಹಾಕಿದ್ದಲ್ಲದೆ ನವಕುಮಾರನ ಮನೆಯಲ್ಲಿಯ ಆಭರಣಗಳನ್ನು ಕೆಲವು ನಿಮಿತ್ತ ಹೇಳಿ ತಂದು ಅವುಗಳನ್ನೂ ಎತ್ತಿಕೊಂಡು ಎಲ್ಲಿಗೋ ಎದ್ದು ನಡೆದಿದ್ದನು.

ನವಕುಮಾರನು ಯೋಗ್ಯನಾದ ವ್ಯವಸ್ಥಾಪಕನಲ್ಲವೆಂದು ತಿಳಿದು ಮಾನಸಿಂಹರಾಜನು ಅವನನ್ನು ಬೀರನಗರದಿಂದ ತೆಗೆದು ಅವನ ಸ್ಥಳದಲ್ಲಿ ಶ್ರೀಶಚಂದ್ರನನ್ನು ಬೀರನಗರದ ವ್ಯವಸ್ಥಾಪಕನನ್ನಾಗಿ ಮಾಡಿ ಅಲ್ಲಿಗೆ ಕಳಿಸಿ ದನು. ಹೀಗೆ ತನಗೆ ಅಪಮಾನವಾದದ್ದು ಕಂಡು ನವಕುಮಾರನು ಶ್ರೀಶನು ಬರುವದರೊಳಗಾಗಿಯೇ ದೇವೀಪುರಕ್ಕೆ ಹೊರಟು ಹೋದನು.

ಶ್ರೀಶಚಂದ್ರನಾದರೂ ತನ್ನ ಹೆಂಡತಿಯನ್ನು ಕರಕೊಂಡು ಬೀರ ನಗರಕ್ಕೆ ವ್ಯವಸ್ಥಾಪಕನಾಗಿ ಬಂದನು. ನವಕುಮಾರನ ವಿಚಾರಹೀನ ವಾದ ಆಳಿಕೆ ಹೋಗಿ ಚತುರನೂ, ಗುಣಶೀಲನೂ ಆದ ಶ್ರೀಶಚಂದ್ರನು ತಮ್ಮ ಗ್ರಾಮದ ವ್ಯವಸ್ಥಾಪಕನಾಗಿ ಬಂದದ್ದು ಕಂಡು ಬೀರನಗರದ ನಿವಾಸಿ ಗಳೆಲ್ಲರೂ ಬಹಳೇ ಸಂತೋಷಪಟ್ಟರು. ಶ್ರೀಶನು ಬಂದ ಸ್ವಲ್ಪ ದಿವಸ ಗಳಲ್ಲಿಯೇ ಅನೇಕವಾದ ಲೋಕೋಪಯೋಗದ ಕೆಲಸಗಳಾದವು. ಗುಡಿ ಗುಂಡಾರಗಳು ಜೀರ್ಣೋದ್ಧಾರವನ್ನು ಹೊಂದಿ ಹೊಸವೂ, ವಿಶಾಲವಾದವು ಗಳೂ ಆಗಿ ಕಂಡವು. ಎಲ್ಲ ಕಡೆಯಲ್ಲಿಯೂ ಕೆರೆ ಕಾಲುವೆಗಳು, ತೋಟಪಟ್ಟಿ ಗಳೂ ಹೆಚ್ಚಾಗಿ ಬೀರನಗರವು ಬಹು ರಮಣೀಯವಾಗಿ ಕಾಣಲಾರಂಭಿಸಿತು. ಪ್ರಮಾಣಿಕರೂ ಬುದ್ಧಿವಂತರೂ ಆದ ಜನರ ಕೈಯಲ್ಲಿ ಗ್ರಾಮದ ಪಂಚಾಯತಿ ಬಂದದ್ದರಿಂದ ವ್ಯಾಜ್ಯಗಳ ನಿರ್ಣಯಗಳು ಬಹು ಸಮಾಧಾನಕರವಾಗಿ ಆಗುತ್ತಿದ್ದವು. ಪಂಡಿತರಾದವರಿಗೆ ಶ್ರೀಶನು ಉತ್ತೇಜನ ಕೊಟ್ಟದ್ದರಿಂದ ವಿದ್ಯಾಭಿವೃದ್ಧಿಯಾಗಲಾರಂಭಿಸಿತು.

## ಮೂವತ್ತಮೂರನೆಯ ಅಧ್ಯಾಯ

### ಶ್ರೀಶ, ಬಂದೆಯಾ? ಬಾ.

ಶ್ರೀಶಚಂದ್ರನನ್ನು ಹೊರಗೆ ಹಾಕಿದ್ದು ಅನ್ಯಾಯವಾಯಿತೆಂದೂ, ನರೇಂದ್ರನ ವಿರುದ್ಧವಾಗಿ ತಾನು ಮಾನಸಿಂಹರಾಜನಿಗೆ ಅಸತ್ಯವಾದ ವರ್ತಮಾನವನ್ನು ತಿಳಿಸಿದ್ದು ಕೇವಲ ಪಾಪದ ಕೆಲಸವಾಯಿತೆಂದೂ ನವಕುಮಾರನಿಗೆ ಬರಬರುತ್ತ ತಿಳಿಯಬಂದಿತು. ಊರ ಜನರೆಲ್ಲರೂ ಗೋಕುಲದಾಸನ ವಿರುದ್ಧವಾಗಿ ಕೂಗಿಕೊಳ್ಳುತ್ತಿರುವದನ್ನು ಅರಿತು ಅವನು ಸೂಕ್ಷ್ಮವಾಗಿ ವಿಚಾರಿಸಿಕೊಳ್ಳಲಾಗಿ ತನ್ನ ಗುಮಾಸ್ತನು ನೀಚನೂ, ಕೃತಘ್ನನೂ ಆಗಿರುವನೆಂದು ತೋರಿತು.

ನವಕುಮಾರನ ಹೃದಯದಲ್ಲಿ ಪಶ್ಚಾತ್ತಾಪವು ಕಟಿಯುತ್ತಿತ್ತು ; ಅವನ ಅರ್ಧಾಂಗಿಯು ಚಿಂತೆಮುಂಬಳಿಗಳಿಂದ ಕೊರಗಿ ಸೊರಗಿ ಹೋಗಿದ್ದಳು; ಮನೆಯಲ್ಲಿ ಸುಖಸಮಾಧಾನಗಳ ಲೇಶವಿಲ್ಲ; ಹೊರಗೆ ತನಗೆ ಮರ್ಯಾದೆ ಇಲ್ಲ; ಇಂಥ ಸ್ಥಿತಿಯಲ್ಲಿದ್ದ ನವಕುಮಾರನಿಗೆ ಹೃದ್ರೋಗವುಂಟಾಗದೆ ಮತ್ತೇನಾದೀತು ? ಮಾನಸಿಂಹರಾಜನ ಅವಕೃಪೆಗೆ ಅವನು ಪಾತ್ರನಾಗಿ ಮೇಲೆ ಮಾನಕ್ಷತನಾಗಿ ತಾನು ಬೀರನಗರದಿಂದ ಹೊರಗೆ ಹಾಕಿಸಿಕೊಂಡು ಬಂದ ಆರಭ್ಯ ಅವನ ಪ್ರಕೃತಿಯು ಹೆಚ್ಚಿಗೆ ಅಸ್ವಸ್ಥವಾಗಿ ಅವನು ಹಾಸಿಗೆ ಹಿಡುಕೊಂಡು ಮಲಗಿಕೊಂಡನು.

ಮಾನಸಿಂಹರಾಜನು ರಾಜಮಹಾಲಿಗೆ ಬಂದ ಎಂಟು ದಿವಸಗಳಲ್ಲಿಯೇ ಹೇಮಲತೆಯು ದೇವೀಪುರಕ್ಕೆ ಬಂದಳು. ಬೇನೆಯುವನಾದ ನವಕುಮಾರನು ಮಗಳು ಬಂದದ್ದು ಕಂಡು ಸಮಾಧಾನವನ್ನು ತಾಳಿ ಅಂದದ್ದು : “ಹೇಮಲತಾ, ಬಂದಿಯಾ ? ಅಕ್ಕಾ, ನಾನು ಹೀಗೆ ಬೇನೆಯಿಂದ ಮಲಗಿರಲು ನೀನು ರಾಜಮಹಾಲಿನಲ್ಲಿ ಶಾಂತಾದೇವಿಯೊಡನೆ ಚಕ್ಕಂದವಾಡುತ್ತಿರಬಹುದೆ!” ಎಂದು ನುಡಿದನು.

“ಅಪ್ಪಾ, ನಾನು ಆಗ್ರಾದಿಂದ ರಾಜಮಹಾಲಿಗೆ ಬಂದೇ ಎಂಟು ದಿವಸಗಳಾದವು. ನೀವು ಮಲಗಿರುವಿರೆಂಬ ವರ್ತಮಾನವನ್ನು ಕೇಳಿ ಧಾವಿಸಿ ಬಂದೆನು. ನಿಮ್ಮ ಜೀವಕ್ಕೆ ಸಮಾಧಾನವಿರುವದಷ್ಟೆ ? ” ಎಂದು ಹೇಮ

ಲತೆಯು ತಂದೆಯ ಸ್ಥಿತಿಯನ್ನು ನೋಡಿ ಕಣ್ಣಿಗೆ ನೀರು ತಂದು ಕೇಳಿದಳು.

ಸುಶೀಲಾದೇವಿಯು ಉಸುರು ಹಾಕುತ್ತ "ಎಲ್ಲಿಯ ಸಮಾಧಾನ ಹೇಮಲತೆ? ನೋಡಬಾರದೆ, ಎಂಥವರು ಹೋಗಿ ಹೇಗೆ ಹಲ್ಲಿಯಂತೆ ಆಗಿದ್ದಾರೆ! ಕಣ್ಣು ಒಳನಟ್ಟುಹೋಗಿವೆ, ತುಟಿಯು ಬೆಳ್ಳಗೆ ಹಂಜಿಯಾಗಿದೆ. ಅಖಂಡ ತಿಂಗಳ ದಿವಸ ಹಾಕಿದ ಹಾಸಿಕೆಯನ್ನು ತೆಗೆದಿಲ್ಲ!" ಎಂದು ಹೇಳಿ ಸೆರಗಿನಿಂದ ಕಣ್ಣೊರಸಿಕೊಂಡಳು.

"ಇನ್ನೇನಿದೆ ಹೇಮಲತಾ! ಭೂಮಿಯ ಋಣ ಕಡಿದಂತೆಯೇ ಸರಿ! ನಮ್ಮ ಆಸ್ತಿಯ ವ್ಯವಸ್ಥೆ ಕೆಟ್ಟು ಹೋಗಿದೆ. ಕಳ್ಳನಾದ ಗೋಕುಲದಾಸನು ಕೈಗೆ ಸಿಕ್ಕದ್ದು ಎತ್ತಿಕೊಂಡು ಓಡಿಹೋದನು. ಇಂಥ ಸಮಯದಲ್ಲಿ ನಮ್ಮನ್ನು ನೋಡುವವರು ಯಾರೂ ಇಲ್ಲದಾಯಿತು. ಶ್ರೀಶನು ಬೀರನಗರದಲ್ಲಿ ಮೆರೆಯುತ್ತಿದ್ದವನು ಇತ್ತ ಹಣೆಯಿಕ್ಕಿ ನೋಡಿದ್ದರೆ ಆಣೆ!" ಎಂದು ನವಕುಮಾರನು ವ್ಯಸನಾಕುಲನಾಗಿ ನುಡಿದನು.

"ನಮ್ಮ ಕರ್ಮಕ್ಕೆ ಯಾರೇನು ಮಾಡುವರು? ಶ್ರೀಶನು ಒಂದೆರಡ ಸಾರೆ ಇಲ್ಲಿಗೆ ನಿಮ್ಮ ಸಮಾಚಾರಕ್ಕಾಗಿ ಬಂದಾಗ ನೀವು ಅವನನ್ನು ಕಣ್ಣೆತ್ತಿ ನೋಡಲಿಲ್ಲ; ಮಾತಾಡಿಸಲಿಲ್ಲ. ಆ ಹುಡುಗನು ನನ್ನ ಬಳಿಯಲ್ಲಿಯೇ ತುಸು ಕುಳಿತು ನಿಮಗಾದ ಅವಸ್ಥೆಯನ್ನು ಕಂಡು ವ್ಯಸನಪಟ್ಟು ಕಣ್ಣಿಗೆ ನೀರು ತಂದು ಹೊರಟುಹೋದನು." ಎಂದು ಸುಶೀಲಾದೇವಿಯು ಹೇಳಿದಳು.

"ಅಪ್ಪಾ, ಶ್ರೀಶನನ್ನು ಈ ಸಮಯದಲ್ಲಿ ಕರಿಸುವದು ಒಳ್ಳೇದೆಂದು ನನಗೆ ತೋರುತ್ತದೆ. ವೈದ್ಯರನ್ನು ಕರಿಸಿ ಔಷಧೋಪಚಾರವನ್ನು ಮಾಡುವವರು ಯಾರಿದ್ದಾರೆ?" ಎಂದು ಹೇಮಲತೆಯು ಹೇಳಿದಳು.

"ದೇವೀಪುರದ ಉಸಾಬರಿ ನನಗೆ ಬೇಡವೇ ಬೇಡವೆಂದು ಶ್ರೀಶನು ಸಾರಿ ಹೇಳುತ್ತಿರಲು ನಾನು ಅವನನ್ನು ಹೇಗೆ ಕರಿಸಲಿ?"

"ದೇವೀಪುರದ ಆಸ್ತಿಯು ನೀವು ಕೊಟ್ಟರೂ ಅವನದು, ಕೊಡದಿದ್ದರೂ ಅವನದೇ. ನೀವು ಮಾತ್ರ ವೃಥಾಭಿಮಾನವನ್ನು ಹಚ್ಚಿಕೊಂಡಿರುವಿರಿ. ಸುಜ್ಞನಾದ ಆ ಹುಡುಗನು ನೀವು ಕರಿಸಿದರೆ ಬರುವದಿಲ್ಲೆ? ಜಗತ್ ಸುಂದರಿಯು ಬಂಗಾರದಂಥ ಮಗನನ್ನು ಹಡೆದಿದ್ದಾಳೆ. ಮಕ್ಕಳು

ಮೊಮ್ಮಕ್ಕಳನ್ನು ಮನೆಯಲ್ಲಿಟ್ಟುಕೊಂಡು ವೃದ್ಧಾಪ್ಯದಲ್ಲಿಯಾದರೂ ನಾಲ್ಕು ದಿವಸ ಆನಂದದಿಂದ ಕಾಲ ಕಳೆಯಬಾರದೆ ? ”

ಏನು ಬೇಕಾದದ್ದು ಮಾಡಿರಿ. ಸಾಯುವವನಾದ ನನಗೆ ಇನ್ನೇತರ ಅಭಿಮಾನ ? ಇರುವಳೊಬ್ಬ ಈ ಹುಡುಗೆಯ ಮದುವೆ ಮಾಡಿ ಕಣ್ಣು ಮುಚ್ಚಿಕೊಂಡು ಹೋಗುವೆನೆಂದರೆ ಈಕೆಯ ಆಗ್ರಹವೇ ಹೆಚ್ಚಾಗಿದೆ ! ”

“ ಹೇಮಲತೆಯ ಮದುವೆಯ ಗೊಡವೆ ಸಧ್ಯಕ್ಕೆ ನಮಗೆಲ್ಲಿ ಬೇಕಾಗಿದೆ? ನಿಮ್ಮ ಜೀವಕ್ಕೆ ತುಸು ಸಮಾಧಾನವಾಗಲಿ, ಬಳಿಕ ಮದುವೆಯ ಮಾತು. ಇಂದೆಯೇ ಶ್ರೀಶನನ್ನು ಕರಿಸಬಹುದೇನು ? ” ಎಂದು ಸುಶೀಲಾದೇವಿಯು ಮಮತೆಯಿಂದ ಕೇಳಿದಳು.

“ ನಿಮ್ಮೆಲ್ಲರ ಮನಸ್ಸಿಗೆ ಬಂದ ಬಳಿಕ ನಾನೊಬ್ಬನು ಬೇಡೆಂದರೆ ಏನಾಗುವದು ? ಶ್ರೀಶನ ಇಚ್ಛೆ ಬಂದರೆ ಬರಲಿ. ”

ಹೇಮಲತೆಯು ತಂದೆಯ ಅಭಿಪ್ರಾಯವನ್ನು ಕೇಳಿ ಸಂತುಷ್ಟಳಾಗಿ “ ಅಪ್ಪಾ, ಈಗಲೇ ಬಾರೆಂದು ನಾನು ಶ್ರೀಶಅಣ್ಣಗೆ ಬರೆಯಲೇನು ? ಜಗತ್‌ಸುಂದರಿಯು ತನ್ನ ಮುದ್ದು ಮಗನನ್ನು ಎತ್ತಿಕೊಂಡು ಮನೆಗೆ ಬಂದರೆ ಅವ್ವನು ಹಿರಿಹಿರಿ ಹಿಗ್ಗುವಳು. ”

“ ಕರಿಸಿಕೊಳ್ಳಿರಿ. ನನಗೂ ಸಾಕಾಗಿದೆ. ಊರ ಜನರು ನಿತ್ಯ ಒಂದು ಕಲಹವನ್ನು ತಂದು ನನಗೆ ತಲೆಬೇಸರಿಕೆ ಕೊಡುತ್ತಾರೆ; ಗ್ರಾಮದ ಹಣವೂ ಬರುವಷ್ಟು ಬರಲೊಲ್ಲದು; ನಮ್ಮ ತೋಟಪಟ್ಟಿಗಳು ನೋಡುವವರಿಲ್ಲದ ಕ್ಕಾಗಿ ಹಾಳಾಗುತ್ತ ಬಂದಿವೆ. ಶ್ರೀಶನು ಇವುಗಳನ್ನೆಲ್ಲ ನೋಡಿಕೊಂಡು ಹೋದರೆ ಯಾರು ಬೇಡನ್ನುವರು ? ”

ಹೇಮಲತೆಯ ಪತ್ರ ಮುಟ್ಟಿದ ಕೂಡಲೆ ಶ್ರೀಶನು ತನ್ನ ಹೆಂಡತಿಯನ್ನು ಕರಕೊಂಡು ತೀವ್ರವೇ ದೇವೀಪುರಕ್ಕೆ ಬಂದನು. ಶ್ರೀಶನು ಬಂದು ವಿನಯ ದಿಂದ ತನ್ನ ಬಳಿಯಲ್ಲಿ ಕುಳಿತದ್ದು ಕಂಡು, ಮೃದುವಾಗುತ್ತ ಬಂದಿದ್ದ ನವ ಕುಮಾರನ ಮನಸ್ಸು ಒಮ್ಮೆಲೇ ಕರಗಿತು. “ ಶ್ರೀಶ, ಬಂದಿಯಾ, ಬಾ. ಮಗನೇ, ನನ್ನ ಅವಸ್ಥೆ ಏನಾಗಿ ಹೋಗಿದೆ ನೋಡಬಾರದೆ ? ” ಎಂದು ಆರ್ತ ಧ್ವನಿಯಿಂದ ಹೇಳಿಕೊಂಡನು.

“ ತಿಳಿಗೇಡಿಯಾದ ನಾನು ಈ ಮೊದಲೇ ತಮ್ಮ ಸೇವೆ ಮಾಡಲಿಕ್ಕೆ

ಬರತಕ್ಕದ್ದು ; ಬರಲಿಲ್ಲ. ಈ ತಪ್ಪಿಗಾಗಿ ಹಿರಿಯರು ನನ್ನನ್ನು ಕ್ಷಮಿಸಬೇಕು" ಎಂದು ವ್ಯಸನಾಕುಲನಾದ ಶ್ರೀಶಚಂದ್ರನು ವಿನಯದಿಂದ ನುಡಿದನು.

"ಶ್ರೀಶ' ನಿನ್ನದೇನೂ ತಪ್ಪಿಲ್ಲ. ನೀಚನಾದ ಗೋಕುಲದಾಸನ ಮೋಸಕ್ಕೆ ಒಳಗಾಗಿ, ಮಗುವೆ, ನಿನ್ನನ್ನು ನಾನು ನಿಷ್ಠುರವಾಗಿ ದೂಡಿದೆನು. ಆದದ್ದು ಆಗಿಹೋಯಿತು. ಇನ್ನು ನೀನು ಇಲ್ಲಿಗೆ ಬಂದು ವೃದ್ಧರಾದ ನಮ್ಮನ್ನು ಸಂರಕ್ಷಿಸುತ್ತ ಇರು. ನೀನು ತಿಳಿದವನೂ ಸುಶೀಲನೂ ಆಗಿರುವಿ. ಹೆಚ್ಚಿಗೆ ಏನು ಹೇಳಲಿ ? "

" ಅಗತ್ಯವಾಗಿ ಬರುವೆನು. ಈ ಸಮಯದಲ್ಲಿ ನಿಮ್ಮ ಸೇವೆಯನ್ನು ಮಾಡಿಕೊಂಡು ಇರದಿದ್ದರೆ ನಾನು ಜನ್ಮಕ್ಕೆ ಬಂದು ಪ್ರಯೋಜನವೇನು ? ಸದ್ಯಕ್ಕೆ ನನಗೆ ಬೀರನಗರವನ್ನು ಬಿಟ್ಟು ಬರುವದು ಆಗದಿದ್ದರೂ ದಿನಕ್ಕೆ ಒಂದಾವರ್ತಿ ಇಲ್ಲಿಗೆ ಬಂದು ನಿಮ್ಮ ಅನುಕೂಲತೆಯನ್ನು ನೋಡಿಕೊಂಡಿರುವೆನು. "

" ಬೀರನಗರದಲ್ಲಿ ನಿನ್ನದೇನಿದೆ ? ಇಲ್ಲಿಯೇ ಇದ್ದು ಬೀರನಗರದ ವ್ಯವಸ್ಥೆಯನ್ನು ನೋಡಲಿಕ್ಕೆ ಆಗದೇನು ? " ಎಂದು ಸುಶೀಲಾದೇವಿಯು ಕೇಳಿದಳು.

" ಬೀರನಗರದಲ್ಲಿ ನನ್ನದೇನೂ ಇಲ್ಲ. ಆದರೂ ನರೇಂದ್ರನು ಬರುವವರೆಗೆ ನಾನು ಬೀರನಗರದಲ್ಲಿಯೇ ಇರತಕ್ಕದ್ದೆಂದು ಮಾನಸಿಂಹರು ವಿಧಿಸಿರುವರು. "

" ನರೇಂದ್ರನು ಕಡೆತನಕ ಬರುವದು ಬಿಟ್ಟರೆ ನೀನು ಅಲ್ಲಿಯೇ ಇರುವವನಾದಿಯೇನು ? " ಎಂದು ನವಕುಮಾರನು ಕೇಳಿದನು.

" ಕಡೆತನಕ ನರೇಂದ್ರನು ಬರುವದಿಲ್ಲೇನು ? ಬಹಳಾದರೆ ಏಳೆಂಟು ತಿಂಗಳು ಅವನು ಓಡಿಸಾ ಪ್ರಾಂತದಲ್ಲಿ ಇರುವನು."

" ಸರಕಾರದ ಚಾಕರಿ ಮಾಡಿ ನರೇಂದ್ರನು ಹೊಟ್ಟೆತುಂಬಿಕೊಳ್ಳಬೇಕಾಗಿದೆ ಏನು ? ಮನೆಯಲ್ಲಿ ಸಂಪತ್ತಿಗೇನು ಕೊರತೆಯಾಗಿದೆ ; ಚಾಕರಿ ಬಿಟ್ಟು ಬಾ ಎಂದರೆ ಅವನು ಬರಲಿಕ್ಕಿಲ್ಲೇನು? ನಿಮ್ಮ ಊರಿಗೆ ಒಡೆಯನಾಗಿ ನೀನು ಇರು. ಅವನೂರಿಗೆ ಒಡೆಯನಾಗಿ ಅವನಿರಲಿ. " ಎಂದು ಸುಶೀಲಾದೇವಿಯು ಹೇಳಿದಳು.

" ಅವ್ವಾ, ಇದರಲ್ಲಿ ಒಂದು ಸೂಕ್ಷ್ಮವಾದ ವಿಚಾರವಿರುವದು. ನರೇಂದ್ರನನ್ನು ನಾವು ಕರಿಸಬೇಕಾದರೆ ಹೇಮಲತೆಯನ್ನು ಕೊಡುತ್ತೇವೆಂದು ಹೇಳಿಯೇ ಕರಿಸಬೇಕು. ಯಾಕೆ ಹೇಮಲತಾದೇವಿ ? " ಎಂದು ಶ್ರೀಶನು ನಗುತ್ತ ಕೇಳಿದನು.

ಅಷ್ಟರಲ್ಲಿ ಶ್ರೀಶನ ಮಗನಾದ ಶಿಶಿರಕುಮಾರನು " ತ್ಯಾ ತ್ಯಾ" ಎಂದು ನವಕುಮಾರನ ಬಳಿಗೆ ಬಂದು ಅವನ ಮೀಸೆ ಹಿಡಿದನು.

ನವಕುಮಾರನು ಮಲಗಿದಲ್ಲಿಯೇ ಆ ಕೂಸಿನ ಕೈಹಿಡಿದು ನಗುತ್ತ " ತಾ, ತಾ, ಎಂದರೆ ನಾನೇನು ಕೊಡಲಿ. ಎಲ್ಲವೂ ನಿನ್ನದೇ ಇದೆ. ಹೇಮು, ಕರೆದುಕೋ ನಿನ್ನ ಅಳಿಯನನ್ನು. ನನ್ನ ಮೀಸೆಯನ್ನು ಹೇಗೆ ಜಗ್ಗುತ್ತಾನೆ ನೋಡಬಾರದೆ ! " ಎಂದು ಹೇಳಿ ಶಿಶಿರಕುಮಾರನನ್ನು ಹೇಮಲತೆಯ ಸ್ವಾಧೀನ ಮಾಡಿದನು.

ಹೇಮಲತೆಯು ಆ ಮಗುವನ್ನು ಎತ್ತಿಕೊಂಡು "ಇಷ್ಟು ದಿನ ಎಲ್ಲಿದ್ದಿ? ಈಗ ತಾ, ತಾ, ಎಂದು ಬಂದಿರುವಿ ? " ಎಂದು ನುಡಿದು ಲಟಲಟ ಮುದ್ದು ಕೊಟ್ಟಳು.

" ಶ್ರೀಶನ ಮುಖವನ್ನು ಹರಿದು ಹಚ್ಚಿದಂತೆ ಕಾಣುತ್ತದೆ. ನೋಡಿದಿಯಾ ಹೇಮು, ಈ ಮಗುವಿನ ಮುಖವನ್ನು? " ಎಂದು ನುಡಿದು ಸುಶೀಲಾದೇವಿಯು ಆ ಮಗುವನ್ನು ಎತ್ತಿಕೊಂಡು ಸಂತೋಷದಿಂದ ನೋಡುತ್ತ ಕುಳಿತಳು.

"ನಾನೀಗಲೆ ಪತ್ರ ಬರೆದು ಕವಿರಾಜ ಶರಚ್ಚಂದ್ರ ಮೂಕರ್ಜಿಯವರನ್ನು ಕರಿಸುವೆನು. ನಾಳಿಗೆ ಅವರು ಬಿಲಾಸಪುರದಿಂದ ಬೀರನಗರಕ್ಕೆ ಬರುವರು. ಅಲ್ಲಿಂದ ನಾನೂ ಅವರೂ ಕೂಡಿಯೇ ಬರುವೆವು. ಅಪ್ಪಣೆ ಕೊಡಿರಿ." ಎಂದು ಶ್ರೀಶನು ಕೇಳಿಕೊಂಡನು.

## ಮೂವತ್ತುನಾಲ್ಕನೆಯ ಅಧ್ಯಾಯ

## ಹೊಟ್ಟೆಯೊಳಗೆಲ್ಲ ನಗೆ ತುಂಬಿದೆ

ಕವಿರಾಜ ಶರಚ್ಚಂದ್ರ ಮೂಕರ್ಜಿಯವರು ಬಂದು ನವಕುಮಾರನ ರೋಗದ ಚಿಕಿತ್ಸೆ ಮಾಡಿ, 'ಮನಸ್ತಾಪದಿಂದಲೇ ಅವನ ಪ್ರಕೃತಿ ಕೆಟ್ಟಿದೆ. ಹೊರತಾಗಿ ರೋಗವೇನೂ ಇಲ್ಲ'ವೆಂದು ಹೇಳಿದರು. ನವಕುಮಾರನು ಚಿಂತಾಗ್ರಸ್ತನಾಗಿ ವ್ಯಾಳ್ಯವ್ಯಾಳ್ಯಕ್ಕೆ ಅನ್ನನೀರು ತೆಗೆದುಕೊಳ್ಳದೆ ಇದ್ದದ್ದಕ್ಕೂ, ನಿತ್ಯದ ಉದ್ಯೋಗಗಳನ್ನು ಬಿಟ್ಟು ವ್ಯಾಯಾಮವಿಲ್ಲದೆ ಕುಳಿತಲ್ಲಿ ಕುಳಿತಿದ್ದಕ್ಕೂ ಅವನು ಅಶಕ್ತನಾಗಿರುವನೆಂದು ಹೇಳಿ ಕವಿರಾಜರು ಅವನಿಗೆ ಕೆಲವು ಔಷಧಗಳನ್ನು ಕೊಟ್ಟು "ಇನ್ನುಮೇಲೆ ನೀವು ಏಕಾಕಿಯಾಗಿ ಕುಳಿತು ಚಿಂತಾಕರವಾದ ವಿಚಾರಗಳಿಗೆ ಒಳಗಾಗದೆ ಆಪ್ತರಿಷ್ಟರನ್ನು ಕುಳ್ಳಿರಿಸಿಕೊಂಡು ಅವರೊಡನೆ ವಿನೋದಗೈಯುತ್ತಿದ್ದರೆ ಔಷಧವಿಲ್ಲದೆ ನಿಮಗೆ ನೆಟ್ಟಗಾಗುವದು" ಎಂದು ಹೇಳಿ ಹೊರಟುಹೋದರು.

ತನ್ನ ಗಂಡನಿಗೆ ರೋಗವೇನೂ ಇಲ್ಲವೆಂದು ತಿಳಿದು ಸುಶೀಲಾದೇವಿಯ ಮನಸ್ಸಿಗೆ ಸಮಾಧಾನವಾದ್ದರಿಂದ ಅವಳು ಪೂರ್ವದಂತೆ ಆಸ್ಥೆಯಿಂದ ಮನೆಯ ಕೆಲಸಗಳಲ್ಲಿ ಮನಸ್ಸು ಹಾಕಹತ್ತಿದಳು. ಶ್ರೀಶಚಂದ್ರನು ಇನ್ನು ಮನೆಗೆ ಬಂದು ತನಗೂ ತನ್ನ ತಾಯಿಗೂ ಸಂತೋಷ ಕೊಡುವನೆಂದು ಅರಿತು ಹೇಮಲತೆಯೂ ಉಲ್ಲಾಸವನ್ನು ತಳೆದಳು. ಶ್ರೀಶನ ಮಧ್ಯಸ್ಥಿಗಾಗಿ ಗ್ರಾಮಪಲ್ಲಿಯ ಕಲಹಗಳೆಲ್ಲ ಇಲ್ಲದಾದ್ದರಿಂದ ನವಕುಮಾರನಿಗೆ ಜನರ ಉಪದ್ರವವಿಲ್ಲದಂತಾಯಿತು. ನಸುನಗುವ ಹಸುಮಗನಾದ ಶಶಿರಕುಮಾರನು ಅಂಬೆಗಾಲಿಕ್ಕಿ ಮನೆತುಂಬ ಹರಿದಾಡಿ ನವಕುಮಾರನ ಮನಸ್ಸಿನಲ್ಲಿ ಉಲ್ಲಾಸವನ್ನು ಹುಟ್ಟಿಸುವನು. ಹೀಗೆ ಸಮಾಧಾನ, ವಿನೋದ, ಆನಂದ ಪ್ರೇಮಗಳು ಸುತ್ತಲೂ ವ್ಯಾಪಿಸಿಕೊಳ್ಳುತ್ತ ನಡೆದದ್ದರಿಂದ ನವಕುಮಾರನ ಚಿಂತೆಗೆ ಆಸ್ಪದ ಉಳಿಯದಂತಾಗಿ ಅದು ಮೆಲ್ಲಮೆಲ್ಲನೆ ಎತ್ತಲೋ ಎದ್ದು ಹೋಯಿತು. ಕವಿರಾಜನ ಔಷಧವು ಒಂದು ಪಾಲಾದರೆ ಸಂತೋಷವು ಎರಡು ಪಾಲಾಗಿ ನವಕುಮಾರನ ವ್ಯಾಧಿಯು ಬೇಗನೆ ನಷ್ಟವಾಗಿ ಹೋಯಿತು. ಅವನ ಬಲವೂ, ರಕ್ತವೂ ಹೆಚ್ಚಾಗುತ್ತ ನಡೆದವು. ಚಿಂತೆಯೇ

ಮುಪ್ಪು, ಸಂತೋಷವೇ ಯೌವನವಲ್ಲವೆ?

ಶ್ರೀಶಚಂದ್ರನೂ, ಜಗತ್ ಸುಂದರಿಯೂ ನಿತ್ಯದಲ್ಲಿ ಪ್ರಾತಃಕಾಲಕ್ಕೆದ್ದು ದೇವೀಪುರಕ್ಕೆ ಬಂದು ಮಧ್ಯಾಹ್ನದ ಭೋಜನ ತಿರಿಸಿಕೊಂಡೇ ಮರಳಿ ಬೀರನಗರಕ್ಕೆ ಬರುತ್ತಿದ್ದರು. ಶ್ರೀಶನು ನವಕುಮಾರನ ಆಜ್ಞಾಧಾರಕನಾಗಿ ಮನೆಯ ಎಲ್ಲ ವ್ಯವಸ್ಥೆಯನ್ನು ಬಹು ಚನ್ನಾಗಿ ಇಟ್ಟಿದ್ದರಿಂದಲೂ, ದೇವೀ ಪುರದ ಆಸ್ತಿಯ ಬಗ್ಗೆ ಏರ್ಪಾಡುಗಳನ್ನು ಬಹು ಜಾಣತನದಿಂದ ನಡಿಸಿರು ವದರಿಂದಲೂ ನವಕುಮಾರನಿಗೆ ಶ್ರೀಶನ ವಿಷಯವಾಗಿ ದಿನದಿನಕ್ಕೆ ಆದರವೂ ಪ್ರೇಮವೂ ಉಂಟಾಗುತ್ತ ನಡೆದವು. ಕಾರ್ಯವಿಶೇಷಕ್ಕಾಗಿ ಶ್ರೀಶನು ಒಂದು ದಿವಸ ಬರುವದು ಬಿಟ್ಟರೆ ನವಕುಮಾರನ ಮನಸ್ಸಿಗೆ ಸಮಾಧಾನ ವಿರುತ್ತಿದ್ದಿಲ್ಲ. ಮೊಮ್ಮಗನಾದ ಶಿಶಿರಕುಮಾರನನ್ನು ಎತ್ತಿಕೊಂಡು 'ಹಾ! ಹೊ!' ಎಂದು ಅವನನ್ನು ಆಡಿಸುತ್ತಿರುವದೇ ಹೊರತಾಗಿ ನವಕುಮಾರನಿಗೆ ಬೇರೆ ಕೆಲಸವೇ ಇದ್ದಿಲ್ಲ.

ಒಂದು ದಿವಸ ಎಲ್ಲರೂ ಕುಳಿತು ಆನಂದದಿಂದ ಮಾತಾಡುತ್ತಿರುವಾಗ ಸುಶೀಲಾದೇವಿಯು ತನ್ನ ಮಗನಾದ ಶ್ರೀಶಚಂದ್ರನ ಮುಖವನ್ನು ನೋಡಿ "ಶ್ರೀಶ, ಹೀಗೆ ದಿನಾಲು ಹೋಗುತ್ತ ಬರುತ್ತ ಎಷ್ಟು ದಿವಸ ನೀನು ಶ್ರಮಪಡತಕ್ಕದ್ದು? ಬೀರನಗರದ ವ್ಯವಸ್ಥೆಯನ್ನು ಮತ್ಯಾರ ಸ್ವಾಧೀನ ಮಾಡಿ ನಿನ್ನನ್ನು ಬಿಟ್ಟುಬಿಡೆಂದು ನೀನು ಮಾನಸಿಂಹರಾಜನಿಗೆ ಬರೆದುಬಿಡು. ಈ ಮುದ್ದು ಬಾಲಕನನ್ನು (ಶಿಶಿರಕುಮಾರನನ್ನು) ಬಿಟ್ಟು ಇನ್ನು ಮೇಲೆ ನನ್ನಿಂದ ಒಂದು ಅರಗಳಿಗೆಯಾದರೂ ಇರುವದಾಗದು" ಎಂದು ಹೇಳಿದಳು.

"ಅವ್ವಾ, ಮಾನಸಿಂಹರಾಜನು ಬಲು ಆಗ್ರಹಿಯಾದ ಮನುಷ್ಯನು. ಅವನ ಬಾಯಿಗೆ ಬಂದದ್ದು ಎಂದಿಗೂ ತಿರುಗದು. ನನ್ನನ್ನು ದೇವೀ ಪುರಕ್ಕೆ ತಂದಿರಿಸಿಕೊಳ್ಳುವದು ಹೇಮಲತೆಯ ಸ್ವಾಧೀನದ ಮಾತು."

"ಅಂದರೇನು ಶ್ರೀಶಚಂದ್ರಾ?" ಎಂದು ಸುಶೀಲಾದೇವಿಯು ಕುತೂಹಲದಿಂದ ಕೇಳಿದಳು.

"ಅಂದರೆ, ಹೇಮಲತೆಯನ್ನು ತನಗೆ ಕೊಟ್ಟರೆ ತಾನು ಬೀರನಗರಕ್ಕೆ ಬರತಕ್ಕವನೆಂದು ನರೇಂದ್ರನು ಪ್ರತಿಜ್ಞೆಮಾಡಿದ್ದಾನೆ" ಎಂದು ಹೇಳಿ ಶ್ರೀಶನು ನಕ್ಕನು.

" ನಾನು ನನ್ನ ಮಗಳನ್ನು ನರೇಂದ್ರನಿಗೆ ಕೊಡುವದಿಲ್ಲ" ಎಂದು ನವಕುಮಾರನೆಂದನು.

" ಹೇಮಲತೆಯು ಅವನನ್ನಲ್ಲದೆ ಇನ್ನೊಬ್ಬನನ್ನು ಮದುವೆಯಾಗುವದಿಲ್ಲವೆಂದು ಆಗ್ರಹವನ್ನೇ ತೊಟ್ಟಿರುವಳು. ಅಂತೂ ಇಂತೂ ಇಬ್ಬರಿಗೂ ಲಗ್ನವಿಲ್ಲ!" ಎಂದು ಶ್ರೀಶನು ಅಂಜುತ್ತಂಜುತ್ತ ನುಡಿದು ನವಕುಮಾರನ ಮುಖವನ್ನು ನೋಡಿ ನಕ್ಕಂತೆ ಮಾಡಿದನು.

" ನರೇಂದ್ರನು ಲಗ್ನವಿಲ್ಲದೆ ಇರಬಹುದು, ಆದರೆ ಹೇಮಲತೆಯು ಮದುವೆಯಿಲ್ಲದೆ ಹೇಗೆ ಇರುವಳು?" ಎಂದು ನವಕುಮಾರನು ತನ್ನ ಮುಖದಲ್ಲಿಯ ಗಾಂಭೀರ್ಯವನ್ನು ತುಸು ಕಡಿಮೆ ಮಾಡಿ ಕೇಳಿದನು.

" ನಾದಿನಿಯುವರಿಗೆ ಆಗ್ರಹವೇಕೆ? ಹೆಣ್ಣುಮಕ್ಕಳು ಸಮ್ಮನೆ ಕೊಟ್ಟ ಮನೆಗೆ ಹೋದರಾಯಿತು?" ಎಂದು ಜಗತ್‌ಸುಂದರಿಯು ಹೇಮಲತೆಯ ಚಿಂತಾಕ್ರಾಂತವಾದ ಮುಖವನ್ನು ನೋಡಿ ನಗುತ್ತ ಕೇಳಿದಳು.

" ಸುಮ್ಮನಿರು ಜಗತ್‌ಸುಂದರೀ! ಕೊಟ್ಟ ಮನೆಗೆ ಹೋಗುವಂಥ ಒಳ್ಳೆವಳು ನೀನು ರಾಜಮಹಾಲಿಗೆ ಓಡಿ ಹೋಗಿ ಕಳವಿಲೆ ಮದುವೆ ಮಾಡಿಕೊಂಡಿ ಯಾಕೆ?" ಎಂದು ಹೇಮಲತೆಯು ನುಡಿದು ಕೋಪಾವೇಶದಲ್ಲಿಯೇ ನಕ್ಕಳು.

" ಹೇವ್, ಜಗತ್‌ಸುಂದರಿಯು ತನ್ನ ಅಣ್ಣನು ಕೊಟ್ಟ ಮನೆಗೆ ಬಂದಿರುವಳು" ಎಂದು ನವಕುಮಾರನು ನುಡಿದು ತುಸು ನಕ್ಕನು.

" ಅದಾಯಿತು. ನೀವಿನ್ನೂ ಹೇಮಲತೆಯ ಲಗ್ನದ ಮಾತಿನಲ್ಲಿ ಆಗ್ರಹವನ್ನು ಬಿಡುವದಿಲ್ಲೇನು?" ಎಂದು ಸುಶೀಲಾದೇವಿಯು ತನ್ನ ಗಂಡನನ್ನು ಕೇಳಿದಳು.

" ನರೇಂದ್ರನಿಗಿಂತಲೂ ಶ್ರೇಷ್ಠವಾದ ವರಕ್ಕೆ ಕೊಟ್ಟರೆ ಆಗದೇನು? ಹೇಮಲತೆಗಾದರೂ ಯಾಕೆ ಆಗ್ರಹ?"

" ಹೇಮಲತೆಯು ಕೂಸು. ಕೂಸಿನ ಕೂಡ ನೀವೂ ಕೂಸೇ ಆಗ್ನುವಿರೇನು?"

" ಹೇಮಲತೆಯು ಕೂಸೇ? ಹಾಗಾದರೆ ಅವಳ ಓರಿಗೆಯುವಳಾದ ಜಗತ್‌ಸುಂದರಿಯು ಕೂಸೇ! ಇನ್ನು ನಾವು ಶಿಶಿರಕುಮಾರನಿಗೆ ಏನೆನ

ಬೇಕು ?" ಎಂದು ಕೇಳಿ ನವಕುಮಾರನು ತನ್ನ ವಾದವು ಸಪ್ರಮಾಣವಾದ ದ್ದೆಂದೆಣಿಸಿ ಆಢ್ಯತೆಯಿಂದ ಸುತ್ತಲೂ ನೋಡಿದನು.

ಶಿಶಿರಕುಮಾರನನ್ನು ತೋಳಿನಲ್ಲಿ ಎತ್ತಿಕೊಂಡಿರುವ ಸುಶೀಲಾದೇವಿಯು ಆ ಅರ್ಭಕನ ಮುಖವನ್ನು ಎತ್ತಿಹಿಡಿದು "ಇದು ರನ್ನ! ಇದು ಚಿನ್ನ!" ಎಂದು ಮಾತಿಗೊಮ್ಮೆ ಚುಂಬಿಸುತ್ತ ನುಡಿದಳು.

ಈ ಶಿಶುವಾತ್ಸಲ್ಯದ ಹೃದ್ಯವಾದ ಪ್ರಯೋಗದಿಂದ ನವಕುಮಾರನ ಸಪ್ರಮಾಣವಾದ ವಾದವು ತುಂಡುತುಂಡಾಗಿ ಮುರಿದುಹೋಯಿತು. ಪ್ರೇಮ ಭರದಿಂದ ಉಕ್ಕುತ್ತಿರುವ ತನ್ನ ಹೆಂಡತಿಯ ಮುಖವನ್ನು ನೋಡಿ ಅವನು ಮುಗುಳುನಗೆ ನಕ್ಕು ಸುಮ್ಮನಾದನು.

ಶ್ರೀಶನು ಉತ್ಸಾಹದಿಂದ ನಕ್ಕು "ಈ ವಾದದ ಮಥಿತಾರ್ಥವು ತಿಳಿದಂತೆ ಆಯಿತು. ಅವ್ವಾ, ನಿಮ್ಮ ಮನಸ್ಸಿನಲ್ಲಿ ಹೇಮಲತೆಯನ್ನು ನರೇಂದ್ರನಿಗೆ ಕೊಡುವದಿದೆ ಅಷ್ಟೆ? ಕಕ್ಕನವರ ಅನುಮತಿಯನ್ನು ಕೊಡಿಸುವದು ನನ್ನನ್ನು ಕೂಡಿತು. ಯಾಕೆ ಹೇಮಲತಾ, ಇನ್ನಾದರೂ ನಿನ್ನ ಹುಬ್ಬಿನ ಗಂಟು ಬಿಚ್ಚಿ ಹಾಕಿ ತುಸು ನಗು ನೋಡೋಣ!" ಎಂದು ಶ್ರೀಶನು ನವಕುಮಾರನ ಮನಸ್ಸಿನ ಸ್ಥಿತಿಯನ್ನು ಅರಿತುಕೊಂಡು ಕೇಳಿದನು.

"ಹೊಟ್ಟೆಯೊಳಗೆಲ್ಲ ನಗೆ ತುಂಬಿದೆ. ಹೇಮಲತಾದೇವಿಯವರೇ, ತುಸು ಹೊರಬೀಳಲಿ ಆ ನಗೆ!" ಎಂದು ಜಗತ್ಸುಂದರಿಯು ಹೇಮಲತೆಯ ಮುಖವನ್ನು ನೋಡಿ ಯಥೇಷ್ಟವಾಗಿ ನಕ್ಕಳು.

"ಇಬ್ಬರ ಪಾಲಿನ ನಗೆಯನ್ನು ನೀನೇ ನಗುತ್ತಿರುವಿಯಲ್ಲ ಸಾಲದೇನು?" ಎಂದು ಹೇಮಲತೆಯು ಅತ್ತಕಡೆ ಮೋರೆ ತಿರುವಿ ನುಡಿದಳು.

"ಹೇಮ, ನಿಮ್ಮ ಅಣ್ಣನು ನಿನ್ನ ಮನಸ್ಸಿನಂತೆ ಮಾಡುವೆನೆಂದು ಹೇಳಿದ್ದು ಸಾಲದೇನು? ನಾನು ಹೇಳಿದರೇನು ಮತ್ತೆ ಅವನು ಹೇಳಿದರೇನು? ನೀನು ಉಲ್ಲಾಸದಿಂದ ನಕ್ಕದ್ದು ನನಗೂ ನೋಡಬೇಕಾಗಿದೆ" ಎಂದು ನವಕುಮಾರನು ಹೇಳಿದನು.

"ಈಗ ಹೇಗೆ ನಗೆ ಬಂದಿತು ನಾದಿನಿಯವರಿಗೆ! ಸೆರಗು ಮರೆ ಮಾಡಿಕೊಂಡು ನಕ್ಕರೆ ಆಯಿತೇನು?" ಎಂದು ಜಗತ್ಸುಂದರಿಯು ಕೇಳಿದಳು.

"ಶ್ರೀಶ ಅಣ್ಣಾ, ಹೆಂಡತಿಗೆ ಒಳ್ಳೇ ಶಿಕ್ಷೆಯನ್ನು ಕಲಿಸಿರುವಿಯಲ್ಲ! ಇಂಥವಳ ಕೈಯಲ್ಲಿ ನೀನು ಪಾರಾಗುವದೇ ಕಷ್ಟ" ಎಂದು ಹೇಳಿ ಜಗತ್ ಸುಂದರಿಯು ನೆವದಿಂದ ಹೇಮಲತೆಯು ತನ್ನ ಮುಖಾರವಿಂದದಲ್ಲಿ ಮೃದು ಹಾಸವನ್ನು ತಳೆದು ಸಂತೋಷವನ್ನು ವ್ಯಕ್ತಪಡಿಸಿದಳು.

## ಮೂವತ್ತೈದನೆಯ ಅಧ್ಯಾಯ

## ದುರ್ಗಾಪೂಜಾ ಮಹೋತ್ಸವವು

ದಕ್ಷಿಣದೇಶದಲ್ಲಿ ನವರಾತ್ರಿಯ ಉತ್ಸವಗಳಿಗೆ ಶ್ರೀ ವೆಂಕಟೇಶ್ವರನೇ ಅಧಿದೇವತೆಯು. ಶೇಷಾಚಲ ನಿವಾಸಿಯಾದ ಆ ಶ್ರೀನಿವಾಸನ ದರ್ಶನಕ್ಕಾಗಿ ಮದ್ರಾಸ, ಮುಂಬಯಿ, ಹೈದರಾಬಾದ, ಮುಂತಾದ ಪ್ರಾಂತಗಳಿಂದ ಅನೇಕ ಸಹಸ್ರ ಜನರೂ ಸಹಕುಟುಂಬರಾಗಿ "ಗಿರಿ"ಗೆ ಬಂದು ಹೇರಳವಾದ ಹಣವನ್ನು ದಾನಧರ್ಮಗಳಲ್ಲಿಯೂ, ಉತ್ಸವಗಳಲ್ಲಿಯೂ ವೆಚ್ಚಮಾಡಿ ಶ್ರೀ ವೆಂಕಟೇಶನ ದರ್ಶನ ತೆಗೆದುಕೊಂಡು ಧನ್ಯರಾಗಿ ಹೋಗುವದು ಕರ್ನಾಟಕಸ್ಥರಿಗಂತೂ ವಿದಿತವಾದ ಮಾತೇ. ಗಿರಿಗೆ ಹೋಗಲನುಕೂಲ ವಿಲ್ಲದವರು ತಮ್ಮ ತಮ್ಮ ಮನೆಗಳಲ್ಲಿ ಒಂಬತ್ತು ದಿವಸ ಭಕ್ತಿಪೂರ್ವಕವಾಗಿ ಉತ್ಸವ ಮಾಡುತ್ತಾರೆ.

ಬಂಗಾಲ ದೇಶದಲ್ಲಿ ಈ ನವರಾತ್ರಿಯ ಉತ್ಸವಕ್ಕೆ ದುರ್ಗಾಪೂಜಾ ಮಹೋತ್ಸವವೆಂದು ಹೇಳುತ್ತಾರೆ. ಯಾಕಂದರೆ ಆ ಪೂಜಾಮಹೋತ್ಸವಕ್ಕೆ ದುರ್ಗಾದೇವಿಯು ಅಧಿದೇವತೆಯು. ಆ ಕಾಲದಲ್ಲಿ ಸೂರ್ಯನು ಸಿಂಹ-ರಾಶಿಯಿಂದ ಕನ್ಯಾರಾಶಿಯಲ್ಲಿ ಪ್ರವೇಶಿಸುವನೆಂದು ಸಿಂಹವಾಹನಳಾದ ಗಿರಿರಾಜನ ಕನ್ನೆಯನ್ನು ಹಿರಿಯರು ಪೂಜಿಸುತ್ತಿರುವರಾದೀತು. ಇಲ್ಲವೆ ಆ ದೇಶದಲ್ಲಿ ಬತ್ತದ ಪೈರುಗಳೆಲ್ಲ ಸಂಪೂರ್ಣವಾಗಿ ಬೆಳೆದು ಕೊಯ್ಯಲಿಕ್ಕೆ ಬಂದಿರುವದರಿಂದ ಅನ್ನಸಂಚಯವನ್ನೀಯುವ ಅನ್ನಪೂರ್ಣಾದೇವಿಯನ್ನು ಭಜಿಸುತ್ತ ರೈತರು ಆನಂದದಿಂದ ಆ ಮಹೋತ್ಸವವನ್ನು ಬೆಳಿಸುತ್ತಿದ್ದರೂ ಇರಬಹುದು.

ಆ ಕಾಲಕ್ಕೆ ಶರತ್ಕಾಲವಿರುವದರಿಂದ ಆಕಾಶಭೂಮಿಗಳಲ್ಲಿ ಕೂಡಿಯೇ ಸೌಭಾಗ್ಯವು ಮೆರೆಯುವದು. ಘನವಾಗಿರುವ ಬಿಳಿಮೋಡಗಳ ಮಧ್ಯದಲ್ಲಿ ಹೆಚ್ಚಿಗೆ ಎದ್ದುಕಾಣಿಸುವ ನೀಲವರ್ಣದ ಮುಗಿಲಿನ ಭಾಗವು ಸಂಗಮರವರದಿಂದ ಕಟ್ಟಿದಂಥ ನೀಲಜಲದ ಸರೋವರದಂತೆ ಶೋಭಿಸುವದು. ಹಗಲು ಸೂರ್ಯನು ತನ್ನ ತೇಜಃಪುಂಜವಾದ ಪ್ರಭೆಯಿಂದ ಎಲ್ಲ ದಿಕ್ಕುಗಳಲ್ಲಿಯೂ ತನ್ನ ಕೀರ್ತಿಯನ್ನು ಹಬ್ಬಿಸುವನು. ರಾತ್ರಿಯಲ್ಲಿ ತಾರಾನಾಥನು ಮುಖ್ಯಮುಖ್ಯರಾದ ತನ್ನ ಸಂದರಿಯರೊಡನೆ ಆನಂದದಿಂದ ಕ್ರೀಡಿಸುತ್ತಿರುವನು.

ಸ್ಫಟಿಕದಂತೆ ನಿರ್ಮಲವಾಗಿರುವ ನದಿಗಳಿಂದಲೂ, ವಿಲಕ್ಷಣವಾದ ಬಣ್ಣವನ್ನು ತಳೆದ ಹಣ್ಣಾದ ಪೈರುಗಳಿಂದಲೂ ಬಹು ರಮಣೀಯಳಾಗಿ ಕಾಣುವ ಪ್ರಕೃತಿಸ್ವರೂಪಳಾದ ಭೂದೇವಿಯು, ಪ್ರಕೃತಿಯೇ ತಾನಾಗಿರುವ ದುರ್ಗಾದೇವಿಗೆ ಸ್ವಾಗತವನ್ನು ನೀಡಲು, ಸರ್ವಾಲಂಕಾರಭೂಷಿತೆಯಾಗಿ ನಿಂತಿರುವಳೋ ಎಂಬಂತೆ ಕಂಗೊಳಿಸುವಳು.

ಆಬಾಲವೃದ್ಧರೆಲ್ಲರೂ ತಮ್ಮ ನಿತ್ಯದ ಉದ್ಯೋಗಗಳನ್ನು ಲಕ್ಷಿಸದೆ ಉತ್ಸಾಹದಿಂದ ದುರ್ಗಾಪೂಜಾ ಮಹೋತ್ಸವಗಳಲ್ಲಿ ತೊಡಗುವರು. ಆ ಉತ್ಸವದ ಕಾಲದಲ್ಲಿ ರೈತರಿಗೆ ಹೊಲಮನೆಯ ಕೆಲಸಗಳಿಲ್ಲ, ಸರಕಾರದ ಕಾಮದಾರರಿಗೆ ಕಚೇರಿ ದರಬಾರಗಳಿಲ್ಲ, ಹುಡುಗರಿಗೆ ಶಾಲೆಗಳಿಲ್ಲ. ನಾರಿಯರು ಮನೆಕೆಲಸಗಳ ವಿಚಾರವನ್ನು ಬಿಟ್ಟು ಹೊಸಹೊಸ ಸೀರೆ ಕುಪ್ಪಸಗಳನ್ನು ಉಟ್ಟುಕೊಳ್ಳುವದರಲ್ಲಿಯೂ, ಆಭರಣಗಳನ್ನು ಇಟ್ಟುಕೊಳ್ಳುವದರಲ್ಲಿಯೂ, ಕನ್ನಡಿಗಳನ್ನು ಮುಂದಿಟ್ಟುಕೊಂಡು ಅರಸಿನ ಕುಂಕುಮಗಳನ್ನು ತೀಡಿತೀಡಿ ಹಚ್ಚಿಕೊಳ್ಳುವದರಲ್ಲಿಯೂ ನಿರತರಾಗಿರುವರು. ಅಂಗಿ ಜರದ ಟೊಪ್ಪಿಗೆಗಳನ್ನು ಹಾಕಿಕೊಂಡು ಶಾಲೆಯಿಲ್ಲವೆಂಬ ಉಬ್ಬಿನಿಂದ ಜಿಗಿದಾಡುತ್ತಲೂ, ಕುಣಿದಾಡುತ್ತಲೂ ಬಾಲಕರು ಗೊಂದಲೋ ಗೊಂದಲವನ್ನೆಬ್ಬಿಸಿ ಮನೆಯ ಹಿರಿಯರನ್ನು ಪೀಡಿಸಿಬಿಡುವರು. ತರುಣರು ರೇಸಿಮೆಯ ಅಂಚಿನ ದೋತರಗಳನ್ನು ಉಟ್ಟು ಬೆಲೆಯುಳ್ಳ ಅಂಗಿಗಳನ್ನು ತೊಟ್ಟುಕೊಂಡು ಜರದ ಮಂದೀಲುಗಳನ್ನು ಓರೆಕಟ್ಟಿನಿಂದ ಸುತ್ತಿಕೊಂಡು ಒನಪಿನ ಒಯ್ಯಾರೆಯರ ಮುಂದೆ ಸುಳಿದಾಡುವರು.

ಸುಧಾಶುಭ್ರವಾದ ಮಂದಿರಗಳೂ, ತಳಿರು ತೋರಣ ಮಂಟಪಗಳಿಂದ ಅಲಂಕೃತವಾದ ದೇವತಾಯತನಗಳೂ, ಅನೇಕ ಪ್ರಕಾರದ ಹೊಸ ಸರಕುಗಳಿಂದ ತುಂಬಿದ ಪೇಟೆಗಳೂ ಅಲ್ಲಲ್ಲಿ ಬಹು ಚಿತ್ರಮಯವಾಗಿ ಮೆರೆಯುವವು. ಶ್ರೀಮಂತರ ಮನೆಯ ಸದರಿನ ಪಡಸಾಲೆಗಳಲ್ಲಿ ಬಹು ಚಮತ್ಕಾರವಾಗಿ ಕಟ್ಟಿದ ಮಂಟಪಗಳಲ್ಲಿ ದುರ್ಗಾದೇವತೆಯ ಮೂರ್ತಿಗಳು ಬಹು ಅಟ್ಟಹಾಸದಿಂದ ಕುಳಿತಿದ್ದವು. ಎಲ್ಲಿ ಹೋದಲ್ಲಿ ಮಂಗಲವಾದ್ಯಗಳ ಮಂಜುಲವಾದ ನಿನಾದವು, ಎಲ್ಲಿ ಹೋದಲ್ಲಿ ಬಾಲಕರು ಸ್ಫೂರ್ತಿಯಿಂದ ಹಾರಿಸುತ್ತಿರುವ ಪಟಾಕ್ಷೆ ಧಡಲ್‌ಬಾಜಿಗಳ ಆರ್ಭಟೆಯ ಸಪ್ಪಳಗಳು, ಎಲ್ಲಿ ಹೋದಲ್ಲಿ 'ಕಾಲೀಮಾತಾಕಿ ಜಯ್!' ಎಂಬ ಜಯಘೋಷಗಳು.

ಆ ವರುಷ ದೇವೀಪುರದ ಅರಮನೆಯಲ್ಲಿ ದುರ್ಗಾಪೂಜೆಯ ಉತ್ಸವವೂ ಬಹು ಸಂಭ್ರಮದಿಂದ ನಡೆದಿತ್ತು. ತನ್ನ ಮಗನಾದ ಶ್ರೀಶನು ಹೆಂಡತಿಯಿಂದ ಒಡಗೂಡಿದವನಾಗಿ ಮನೆಗೆ ಬಂದರೆ ದೇವಿಗೆ ಚಂದ್ರಹಾರವನ್ನಿತ್ತು ಉತ್ಸವವನ್ನು ಹೆಚ್ಚಾದ ವೈಭವದಿಂದ ಮಾಡಿಸುವೆನೆಂದು ಸುಶೀಲಾದೇವಿಯು ಬೇಡಿಕೊಂಡಿದ್ದಳಷ್ಟೆ? ಮಗ ಸೊಸೆಯರು ನಗೆಮೊಗದ ಮೊಮ್ಮಗನನ್ನು ಎತ್ತಿಕೊಂಡು ಬಂದರು. ಮಗಳಾದ ಹೇಮಲತೆಗೆ ಅನುರೂಪನಾದ ಪತಿಯು ಬರುವವನಾಗಿದ್ದನು. ಪತಿಯಾದ ನವಕುಮಾರನು ವ್ಯಾಧಿರಹಿತನಾಗಿ ಮುಂಚಿನಂತೆ ಉತ್ಸಾಹಯುತನಾಗಿ ತಿರುಗಾಡಲಾರಂಭಿಸಿದ್ದನು. ಹೀಗೆ ತನ್ನ ಮನದೆಣಿಕೆಗಳನ್ನೆಲ್ಲ ದುರ್ಗಾದೇವಿಯು ತನ್ನ ಭಕ್ತಿಗೆ ಮೆಚ್ಚಿ ದಯಪಾಲಿಸಿದಳೆಂದು ಸುಶೀಲಾದೇವಿಯು ಪೂಜಾಮಹೋತ್ಸವವನ್ನು ಬಹು ವಿಜೃಂಭಣೆಯಿಂದ ಮಾಡಿಸುತ್ತಿದ್ದಳು.

ಪೂಜೆ, ಅರ್ಚೆ, ಹೋಮ ಹವನಾದಿಗಳನ್ನು ಶ್ರೀಶ, ಜಗತ್‌ಸುಂದರಿಯರೇ ಮಾಡುವವರು. ನವಕುಮಾರ ಸಶೀಲಾದೇವಿಯವರು ಆನಂದದಿಂದ ನೋಡುವವರು. ಎಲ್ಲ ಹಿರಿತನವು ಶ್ರೀಶನ ಕೈಯಲ್ಲಿ. ಸಕಲ ಮರ್ಯಾದೆಗಳು ಜಗತ್‌ಸುಂದರಿಗೆ. ಹೀಗೆ ಮಗ, ಸೊಸೆಯರನ್ನು ಮುಂದೆ ಮಾಡಿ ಸಂತೋಷದಿಂದ ನಲಿದಾಡುವ ಸುಶೀಲಾದೇವಿಯ ಮುಖದ ವರ್ಚಸ್ಸವನ್ನು ನೋಡಿ ನವಕುಮಾರನೂ ತಾನು ಕೃತಕೃತ್ಯನಾದೆನೆಂದು ತಿಳುಕೊಂಡನು.

ಪೂಜಾಮಹೋತ್ಸವಗಳಾದ ಬಳಿಕ ಒಂದು ದಿವಸ ಎಲ್ಲರೂ ಭೋಜನ

ಮಾಡಿ ಆನಂದದಿಂದ ಮಾತಾಡುತ್ತ ಕುಳಿತಾಗ ಸುಶೀಲಾದೇವಿಯು ನವ ಕುಮಾರನನ್ನು ಕುರಿತು :

" ಇನ್ನು ಹೇಮಲತೆಯ ಮದುವೆಯನ್ನು ಮುಂದಕ್ಕೆ ಹಾಕುವದು ಸರಿಯಲ್ಲ. ನರೇಂದ್ರನಿಗೆ ಪತ್ರ ಬರೆದು ಬೇಗನೆ ಕರಿಸಿಕೊಳ್ಳಬೇಕಲ್ಲವೆ ? " ಎಂದು ವಿನಯದಿಂದ ಕೇಳಿಕೊಂಡಳು.

" ನಾನಾದರೂ ಅದೇ ಯೋಚನೆಯಲ್ಲಿಯೇ ಇರುವೆನು. ನರೇಂದ್ರನು ಬಾದಶಹರ ಆಜ್ಞೆಯ ಮೇರೆಗೆ ರಾಜಕಾರಣಕ್ಕಾಗಿ ಓಡಿಸಾ ಪ್ರಾಂತಕ್ಕೆ ಹೋಗಿದ್ದಾನೆ. ನಾವು ಕರೆದ ಕೂಡಲೆ ಬರಲಿಕ್ಕೆ ಆವನು ಸ್ವತಂತ್ರನೆ?

" ಮುಂದೆ ? " ಎಂದು ಸುಶೀಲಾದೇವಿಯು ವಿಚಾರಗ್ರಸ್ತಳಾಗಿ ಕೇಳಿದಳು.

" ಶ್ರೀಶ, ಹೇಮಲತೆಯನ್ನು ನರೇಂದ್ರರಿಗೆ ಕೊಟ್ಟು ವಿವಾಹ ಮಹೋತ್ಸವವನ್ನು ನಾವು ಜರಗಿಸುವವರಿದ್ದೇವೆಂದು ನೀನು ಮಾನಸಿಂಹ ರಾಜರಿಗೆ ತಿಳಿಸಿ ನರೇಂದ್ರನಾಥನಿಗೆ ಊರಿಗೆ ಬರಲು ಅಪ್ಪಣೆ ಕೊಡಿಸ ಬೇಕೆಂದು ವಿನಂತಿ ಮಾಡಿಕೋ " ಎಂದು ನವಕುಮಾರನು ಸಂತೋಷದಿಂದ ಹೇಳಿದನು.

" ನಾನು ಮಾನಸಿಂಹರಾಜರಿಗೂ ಬರೆಯುವೆನು. ಇತ್ತ ನರೇಂದ್ರನಿಗೂ ನಮ್ಮ ಮನೋಗತವನ್ನು ತಿಳಿಸುವೆನು. ಹೇಮಲತಾ, ನಿನ್ನ ಪತಿರಾಜನಿಗೆ ಏನೆಂದು ಪತ್ರ ಬರೆಯಲಿ ಹೇಳು ? " ಎಂದು ಶ್ರೀಶನು ವಿನೋದದಿಂದ ಕೇಳಿದನು.

" ಹೇಳಿರಿ ಹೇಮಲತಾದೇವಿಯವರೇ, ನರೇಂದ್ರನ ಕೊರಳಿಗೆ ಹಾಕು ವದಕ್ಕೆ ಮನೋಹರವಾಗಿ ರಚಿಸಿದ ಮಾಲೆಯನ್ನು ಸಿದ್ಧಮಾಡಿ ಇಟ್ಟು ಕೊಂಡಿರುವಿರೆಂದು ತಿಳಿಸಬಹುದಷ್ಟೇ ? " ಎಂದು ಜಗತ್‌ಸುಂದರಿಯು ನಗೆಯಾಡಿ ಕೇಳಿದಳು.

" ಗಂಡನ ಸಂಗಡ ಲೋಲಾಡಿ ನಕ್ಕು ನಕ್ಕು ನಿನ್ನ ಬಾಯಿ ಇಷ್ಟು ಅಗಲವಾಗಿದೆ ಎಂದು ನೀನು ಹೀಗೆ ಮಾತಾಡುವಿಯಲ್ಲೆ ? ಸೂಜಿ ದಾರ ಗಳನ್ನು ತೆಗೆದುಕೊಂಡು ನಿನ್ನ ಬಾಯಿಯನ್ನೇ ಹೊಲಿದುಬಿಡುವೆನು ಗೊತ್ತಿರಲಿ! " ಎಂದು ನಗುತ್ತ ನುಡಿಯುವ ಹೇಮಲತೆಗೆ ಇಲ್ಲದ ಕೋಪದ

ಆವಿರ್ಭಾವವನ್ನು ಮಾಡುವೆನೆಂದರೆ ಸಾಧಿಸಲಿಲ್ಲ.

“ಹೇಮು, ಇಷ್ಟೇ ತಪ್ಪಿಗೆ ಜಗತ್‌ಸುಂದರಿಯ ಬಾಯಿ ಹೊಲಿಯುವಂಥ ಶೀಕ್ಷೆ ತಕ್ಕದ್ದಲ್ಲ. ಬಾಯಿತುಂಬ ಸಕ್ಕರೆ ಹಾಕಿ ಇವಳ ಬಾಯಿ ಕಟ್ಟಿಬಿಟ್ಟರೆ ಹೇಗೆ ಮಾತಾಡುತ್ತಾಳೋ ನೋಡೋಣ” ಎಂದು ಸುಶೀಲಾದೇವಿಯು ಸೊಸೆಯ ಉಲ್ಹಾಸದ ಮುಖವನ್ನು ನೋಡಿ ಹಿಗ್ಗಿದವಳಾಗಿ ಹೇಳಿದಳು.

ತಾನಿನ್ನು ವೃದ್ಧನಾಗಿರುವೆನೆಂದೂ ತನ್ನ ಸ್ಥಳದಲ್ಲಿ ತನ್ನ ಮಗನಾದ ಶ್ರೀಶಚಂದ್ರನನ್ನು ದೇವೀಪುರದ ಗಾದಿಯ ಮೇಲೆ ಕುಳ್ಳಿರಿಸಲು ಅಪ್ಪಣೆ ಇರಬೇಕೆಂದೂ ನವಕುಮಾರನು ಮಾನಸಿಂಹರಾಜನಿಗೆ ತಾನೊಂದು ವಿನಂತೀಪತ್ರವನ್ನು ಬರಕೊಂಡನು. ನವಕುಮಾರನಿಗೆ ಸದ್ಬುದ್ಧಿಯುಂಟಾದದ್ದನ್ನು ಅರಿತು ಮಾನಸಿಂಹರಾಜನಿಗೆ ಸಮಾಧಾನವಾಯಿತು. ಶ್ರೀಶನನ್ನು ದೇವೀಪುರದ ಗಾದಿಯ ಮೇಲೆ ಕುಳ್ಳಿರಿಸಲಿಕ್ಕೆ ಅಪ್ಪಣೆ ಕೊಟ್ಟು ಮೇಲೆ ನರೇಂದ್ರನನ್ನು ಬೇಗನೆ ಓಡಿಸಾ ಪ್ರಾಂತದಿಂದ ಬಿಡುಗಡೆ ಮಾಡಿ ಬೀರನಗರಕ್ಕೆ ಕಳಿಸುತ್ತೇವೆಂದು ನವಕುಮಾರನಿಗೆ ತಿಳಿಸಿದನು.

## ಮೂವತ್ತಾರನೆಯ ಅಧ್ಯಾಯ

### ಒಬ್ಬನೇ ಇನ್ನೆಷ್ಟು ದಿವಸ ಇರುವಿ ?

ವಿಲಂಬಮಾಡದೆ ನರೇಂದ್ರನನ್ನು ಬಿಡುಗಡೆ ಮಾಡಿ ಬೀರನಗರಕ್ಕೆ ಹೋಗಲು ಅಪ್ಪಣೆ ಕೊಡಬೇಕೆಂದು ಸೇನಾಪತಿಗಳಾದ ಮಾನಸಿಂಹರಾಜರ ಆಜ್ಞಾಪತ್ರವು ಬಂದ ಮೇರೆಗೆ ಪೃಥ್ವೀರಾಜನು ನರೇಂದ್ರನಿಗೆ ಹೋಗಲಪ್ಪಣೆ ಕೊಟ್ಟನು. ತನ್ನ ಹೃದಯರಮಣಿಯಾದ ಹೇಮಲತೆಯ ಮುಖವನ್ನು ಯಾವಾಗ ನೋಡುವೆನೋ ಎಂಬ ಔತ್ಸುಕ್ಯದಿಂದ ನರೇಂದ್ರನು ಹಗಲಿರುಳೆಂಬದನ್ನರಿಯದೇ ಹಾದೀ ನಡೆದು ಬೇಗನೆ ಬೀರನಗರಕ್ಕೆ ಬಂದು ಮುಟ್ಟಿದನು.

ಬೀರನಗರವನ್ನು ಯಾವಾಗ ಕಾಣುವೆವೋ ಎಂಬ ಲವಲವಿಕೆಯಾಗಿತ್ತು. ಭೂಪೇಂದ್ರನಾಥನು ತೀರಿಕೊಂಡ ಬಳಿಕ ತಮ್ಮ ಸುಖದುಃಖಗಳನ್ನು ಕೇಳಿ ಕೊಳ್ಳುವ ಧೊರೆಯು ಇಲ್ಲವಾದ್ದರಿಂದ ಆ ಜನರು ನರೇಂದ್ರನು ದೊಡ್ಡವ ನಾಗುವವರೆಗೆ ಹಾಗೂ ಹೀಗೂ ಮುಂದಿನ ಆಶೆ ತಾಳಿ ಕಾಲಕಳೆದರು. ಇನ್ನು ನಮ್ಮ ಚಿಕ್ಕ ಧೊರೆಯು ತಮ್ಮ ಸಮಾಚಾರವನ್ನು ಕೇಳಿಕೊಳ್ಳಲಿಕ್ಕೆ ಯೋಗ್ಯ ನಾದನೆಂದು ಅವರು ಸಂತೋಷಪಡುವಷ್ಟರಲ್ಲಿಯೇ ಸುಭೇದಾರನು ಅವ ನನ್ನು ಎತ್ತಿಕೊಂಡು ಹೋದನು. ಅಂತೂ ಇಂತೂ ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲವೆಂಬಂತೆ ಪಾಪ, ಬೀರನಗರದವರು "ಆಳುವ ಅರಸನಿಲ್ಲ ಕೇಳುವ ಪ್ರಧಾನನಿಲ್ಲ" ವೆಂಬ ಸ್ಥಿತಿಯಲ್ಲಿ ಉಳಿದಿದ್ದರು.

ತಮ್ಮ ಧೊರೆಯು ಇನ್ನು ಬೇಗನೆ ಬರುವನೆಂದೂ, ಅವನಿಗೆ ನವ ಕುಮಾರನು ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿಕೊಡುವವನಿರುವ ನೆಂದೂ ಕೇಳಿ ಆ ಜನರೆಲ್ಲರೂ ಒಳ್ಳೇ ಆನಂದದಲ್ಲಿದ್ದರು. ನರೇಂದ್ರನ ವಿವಾಹಮಹೋತ್ಸವಕ್ಕಾಗಿಯೂ, ಆತನ ಸ್ವಾಗತಕ್ಕಾಗಿಯೂ ಅವರು ತಮ್ಮ ಊರನ್ನು ಶೃಂಗರಿಸಲಾರಂಭಿಸಿದರು. ಮನೆಗಳನ್ನು ತೊಳೆದು ಸುಣ್ಣ ಕೆಮ್ಮಣ್ಣುಗಳನ್ನು ಹಚ್ಚಿದರು. ಮನೆಗಳ ಹೆಬ್ಬಾಗಿಲಗಳನ್ನೆಲ್ಲ ಬಾಳೆಗಂಬ ಗಳಿಂದ ಅಲಂಕರಿಸಿ, ಹಾದಿಗೆ ಹಂದರಗಳನ್ನೂ ಬೀದಿಗಳಿಗೆ ತಳಿಯನ್ನೂ ಹಾಕಿಕೊಂಡು ಸಿದ್ಧರಾಗಿ ಕುಳಿತುಕೊಂಡು ನಗರವಾಸಿಗಳು ನರೇಂದ್ರನು ಬರುವ ಹಾದೀ ನೋಡುತ್ತಿದ್ದರು.

ಇಂದು ನಮ್ಮ ಧೊರೆಯು ಬರುವನೆಂಬ ಉಬ್ಬಿನಿಂದ ನರನಾರಿಯ ರೆಲ್ಲರೂ ಹೊಸ ಹೊಸ ವಸ್ತ್ರಗಳನ್ನು ಧರಿಸಿ ಆಭರಣಗಳನ್ನಿಟ್ಟುಕೊಂಡು ಸಿಂಗಾರಾದರು. ಹಲಿಗೆ, ಕಹಳೆ, ಸನಾಯಿ, ಬಜಂತ್ರಿಗಳ ಸನ್ನಾಹ ದೊಡನೆ ಊರಲ್ಲಿಯ ಪ್ರಮುಖರು ಅರ್ಧ ಹಾದಿಗೆ ಹೋಗಿ ನರೇಂದ್ರನಾಥ ರಾಯ್‌ಬಹದ್ದೂರನ ಸ್ವಾಗತಕ್ಕಾಗಿ ನಿಂತು ಕೊಂಡಿದ್ದರು. ಬನ್ನಿಯ ಗಿಡದ ಹತ್ತರ ಗುಡಾರಗಳನ್ನು ಹಾಸಿ ಉಚ್ಚಸ್ಥಾನದಲ್ಲಿ ಯಜಮಾನನಿಗಾಗಿ ದಿಂಬು ತಿವಾಸಿಗೆಗಳನ್ನು ಇಟ್ಟಿದ್ದರು.

ಎಲ್ಲರೂ ನರೇಂದ್ರನು ಬರುವ ಹಾದಿಯ ಕಡೆಗೆ ಮೋರೆಯಾಗಿ ಕುಳಿತು ಕೊಂಡಿದ್ದರು. ಹೀಗೆ ತುಸು ಹೊತ್ತು ಕುಳಿತು ಬೇಸತ್ತ ಬಳಿಕ ಕೆಲವರು

ಎದ್ದು ನಿಂತು ನೋಡಲಾರಂಭಿಸಿದರು, ಕೆಲವರು ಎತ್ತರವಾದ ಸ್ಥಳಗಳಲ್ಲಿ ನಿಂತು ನೋಡಿದರು, ಕೆಲವು ಹರೆಯದ ಹುಡುಗರಂತೂ ಗಿಡಗಳನ್ನೇರಿ ನೋಡುತ್ತಿದ್ದರು. "ಅಕೋ ನೋಡಿರಿ! ಕೆಂದೂಳವೆದ್ದಂತೆ ಕಾಣುತ್ತದೆ!" ಎಂದು ಒಬ್ಬನು ಹೇಳಿ ಚಪ್ಪಳೆ ಹೊಡೆದನು. ಎಲ್ಲರೂ ಹುಬ್ಬುಗೈ ಇಕ್ಕಿಕೊಂಡು ನೋಡುತ್ತ ನಿಂತರು. "ಆ ಕೆಂದೂಳದ ಮರೆಗೆ ನಾಲ್ಕಾರು ಕುದುರೆಗಳು ಓಡುತ್ತ ಬರುವಂತೆ ಕಾಣುವದಿಲ್ಲವೆ?" ಎಂದು ಎಳೆಗಣ್ಣಿನವನಾದ ತರುಣನು ದಿಟ್ಟಿಸಿ ನೋಡುತ್ತ ಕೇಳಿದನು. "ಅಹುದು. ಅಹುದು!" ಎಂದು ನಾಲ್ಕಾರು ಜನರು ಕೂಗಿದರು.

"ಐದು ಕುದುರೆಗಳಿವೆ. ಮುಂದೆರಡು, ಹಿಂದೆರಡು, ನಡುವೆ ಒಂದು. ಆ ಐವರಲ್ಲಿ ನಮ್ಮ ಯಜಮಾನನಾರು?" ಎಂದು ಮಧುಸೂದನದಾಸನೆಂಬವನು ಕೇಳಿದನು.

"ನಡುವಿನವರೇ ಯಜಮಾನರಾಗಿರಬಹುದು.. ಹಿಂದೆ ಮುಂದಿನವರು ಮೈಗಾವಲಿನ ರಾವುತರಾಗಿ ಕಾಣುತ್ತಾರೆ" ಎಂದು ಅಂಬಿಕಾಚರಣನು ತರ್ಕಿಸಿದನು.

"ಅಹುದೇಳಿರಿ, ನಡುವಿನವರೇ ಯಜಮಾನರು ಕಾಣಿರಾ!" ಎಂದು ನರೇಂದ್ರನ ಪ್ರೀತಿಯ ಶಿಷ್ಯನಾದ ವನಮಾಲಿಯು ಹೇಳಿದನು.

ನರೇಂದ್ರನ ಉಚ್ಛ್ರಿತವಾದ ಮೂರ್ತಿಯು ಭವ್ಯವಾದ ಕುದುರೆಯ ಮೇಲೆ ಕುಳಿತುಕೊಂಡು ಆರ್ಭಟೆಯಿಂದ ಬರುತ್ತಿರುವದು ಸ್ಪಷ್ಟವಾಗಿ ಕಂಡಕೂಡಲೆ ಊರವರೆಲ್ಲರು ಎದ್ದು ನಿಂತು "ನರೇಂದ್ರನಾಥಕಿ ಜಯ್! ನರೇಂದ್ರನಾಥಕಿ ಜಯ್!" ಎಂದು ಹುರುಪಿನಿಂದ ಜಯಘೋಷವನ್ನು ಮಾಡಿದರು. ತನ್ನ ಯಜಮಾನನ ಮುಖವನ್ನು ಕಂಡಕೂಡಲೆ ವನಮಾಲಿಯು ಮೂರು ಹಾರಿಕೆ ಹಾರಿಹೋಗಿ ನರೇಂದ್ರನ ಕುದುರೆಯ ಕಡಿವಾಣವನ್ನು ಹಿಡಿದು ಪ್ರಣಾಮ ಮಾಡಿದನು. ಗ್ರಾಮದ ಮುಖ್ಯಸ್ಥರೆಲ್ಲರೂ ಪ್ರಣಾಮ ಮಾಡಿದರು. ನರೇಂದ್ರನು ಕುದುರೆಯ ಮೇಲೆ ಕುಳಿತಾಗಲೇ ಬಗ್ಗಿ ತನ್ನ ಪರಿವಾರದ ವಂದನಗಳನ್ನು ಸ್ವೀಕರಿಸಿ ನಗೆಮುಖವನ್ನು ತಳೆದನು. ಶ್ರೀಶಚಂದ್ರನು ಕೈಕೊಟ್ಟು, ನರೇಂದ್ರನನ್ನು ಕುದುರೆಯ ಮೇಲಿಂದ ಇಳಿಸಿಕೊಂಡು ಪ್ರೇಮದಿಂದ ಅಪ್ಪಿಕೊಂಡನು. ಆ ಭಾವಮೈದುನರ

ಪ್ರೇಮಭಾವವನ್ನು ನೋಡಿ ಗ್ರಾಮವಾಸಿಗಳೆಲ್ಲರೂ ಸಂತೋಷದಿಂದ ಚಪ್ಪಳೆ ಹೊಡೆದರು. ಶ್ರೀಶನು ನರೇಂದ್ರನನ್ನು ಕರಕೊಂಡು ಹೋಗಿ ಉಚ್ಚಾಸನದಲ್ಲಿ ಕುಳ್ಳಿರಿಸಿದನು. ಬಳಿಕ ಊರಿಗೆ ದೊಡ್ಡ ರೈತನಾದ ಮಧುಸೂದನದಾಸನು ನರೇಂದ್ರನಾಥನ ಕೊರಳಿಗೆ ಹೂಮಾಲೆಯನ್ನು ಹಾಕಿ "ಇಂದು ಯಜಮಾನರು ಊರಿಗೆ ಬಂದದ್ದು ಕಂಡು ನಮಗೆಲ್ಲರಿಗೂ ಹರುಷವಾಗಿದೆ" ಎಂದು ನಗುತ್ತ ನುಡಿದು ಚಪ್ಪಳೆ ಹೊಡೆದನು. ಕೂಡಲೆ ನೆರೆದವರೆಲ್ಲರೂ ಹುರುಪಿನಿಂದ ಕೂಗಿ ಚಪ್ಪಳೆ ಹೊಡೆದು ಅಲ್ಲೋಲ ಕಲ್ಲೋಲವಾದ ಧ್ವನಿ ಎಬ್ಬಿಸಿದರು. ನರೇಂದ್ರನು ಎದ್ದು ನಿಂತು ತನ್ನ ಪರಿವಾರದವರನ್ನು ಸಂತೋಷದಿಂದ ಕೊಂಡಾಡಿದನು. ಬಳಿಕ ತಾಂಬೂಲ, ಅತ್ತರ, ಗುಲಾಬಗಳನ್ನು ಶ್ರೀಶನು ನರೇಂದ್ರನಿಗೂ, ಗ್ರಾಮವಾಸಿಗಳಿಗೂ ಸಮರ್ಪಿಸಿದನು. ಕಹಳೆಯವನು ಸ್ಫೂರ್ತಿಯಿಂದ ಊದಿ ಹೊರಡತಕ್ಕದ್ದೆಂದು ಸೂಚಿಸಿದ ಕೂಡಲೆ ಎಲ್ಲರೂ ಎದ್ದು ಊರ ಹಾದಿಯನ್ನು ಹಿಡಿದರು. ಊರಲ್ಲಿ ಉಳಿದವರೆಲ್ಲರೂ ಮಾಳಿಗೆಗಳನ್ನು ಏರಿ ನರೇಂದ್ರನು ಮೆರವಣಿಗೆ-ಯಿಂದ ಬರುವದನ್ನು ಉತ್ಸುಕತೆಯಿಂದ ನೋಡುತ್ತಿದ್ದರು.

ನರೇಂದ್ರನು ಮನೆಗೆ ಬಂದ ಕೂಡಲೆ ಬಾಗಿಲದಲ್ಲಿ ಕದಲಾರತಿಯನ್ನು ಹಿಡುಕೊಂಡು ನಿಂತಿದ್ದ ಜಗತ್‌ಸುಂದರಿಯು ತನ್ನ ಅಣ್ಣನಿಗೆ ಆರತಿ ಮಾಡಿ ಸಂತೋಷದಿಂದ ನಗುತ್ತ "ಅಣ್ಣಾ, ಬಂದಿಯಾ!" ಎಂದು ಸತ್ಕಾರ ಗೈದಳು. ನರೇಂದ್ರನಿಗೂ ತನ್ನ ತಂಗಿಯನ್ನು ಕಂಡು ಪರಮಾವಧಿಯ ಸಂತೋಷವಾಯಿತು. ಪ್ರೇಮದಿಂದ ಅವನು ಜಗತ್‌ಸುಂದರಿಯ ಬಗ-ಲೊಳಗಿನ ಮಗನನ್ನು ಎತ್ತಿಕೊಂಡು ಮುದ್ದಿಕ್ಕಿ "ಗಂಟುಕಳ್ಳಾ, ನಮ್ಮ ಮನೆಯಲ್ಲಿ ಯಾಕೆ ನೀನು?" ಎಂದು ಆಡಿಸುತ್ತ ಒಳಕ್ಕೆ ಬಂದನು.

"ಸೋದರಳಿಯಂದಿರು ಗಂಟುಕಳ್ಳರೇ! ಇವನಾದರೂ ಯಾಕೆ ಬಿಡುವನು?" ಎಂದು ನುಡಿಯುತ್ತ ಜಗತ್‌ಸುಂದರಿಯು ಅಣ್ಣನೊಡನೆ ವಿನೋದಮಾಡುತ್ತ ಬಂದಳು.

"ಜಗತ್‌ಸುಂದರೀ, ಎಲ್ಲರೂ ಕ್ಷೇಮದಿಂದ ಇರುವಿರಷ್ಟೆ?" ಎಂದು ನರೇಂದ್ರನು ಕೇಳಿದನು.

"ಕ್ಷೇಮದಿಂದಲೇ ಇರುವೆವು ಕಂಡಿಯಾ. ಹೇಮಲತೆಯಂತೂ

ಸುಕ್ಷೇಮದಿಂದಿರುವಳು.''

" ಬುಬ್ಬುಣೀ! " ಎಂದು ನರೇಂದ್ರನು ತುಸು ನಾಚಿ ನುಡಿದನು.

" ನಾವಿಬ್ಬರಂತೂ ನಿನ್ನ ಮುಂದೆಯೇ ನಿಂತಿರುವೆವು. ನೀನು ಇನ್ನಾರ ಕ್ಷೇಮವನ್ನು ಕೇಳಿದಿ? " ಎಂದು ಜಗತ್‌ಸುಂದರಿಯು ವಿಲಾಸ ದಿಂದ ಕೇಳಿದಳು.

" ಇರಲಿ ಬಿಡೆ! " ಎಂದು ನರೇಂದ್ರನು ಜಗತ್‌ಸುಂದರಿಗೆ ಹೇಳಿ ಶ್ರೀಶನನ್ನು ಕುರಿತು: " ಶ್ರೀಶ, ನೀನಾಗಲೆ ಮೆಲ್ಲನೆ ದೇವೀಪುರದ ಆಸ್ತಿ-ಯನ್ನು ಆಕ್ರಮಿಸಿಕೊಂಡುಬಿಟ್ಟಿರುವಿಯಂತೆ? " ಎಂದು ಕೇಳಿದನು.

" ನಮ್ಮದೇ ನಾವು ಆಕ್ರಮಿಸಿಕೊಂಡೆವೆಂದರೆ ಏನು ಅಣ್ಣಾ? ದೇವೀಪುರವು ನಮ್ಮದಲ್ಲದೆ ಮತ್ತಿನ್ನಾರದು? " ಎಂದು ಅಭಿಮಾನದಿಂದ ಜಗತ್‌ಸುಂದರಿಯು ತನ್ನ ಗಂಡನ ಪಾಲು ತಾನೇ ಉತ್ತರಕೊಟ್ಟಳು.

ಭೋಜನದ ತರುವಾಯ ಮೂವರೂ ಅನೇಕ ವಿಷಯಗಳನ್ನು ಕುರಿತು ಮಾತಾಡಿದ ಬಳಿಕ ಶ್ರೀಶನು ಭಾಂಡಾರದಲ್ಲಿಯ ಹಣವನ್ನೂ, ಲೆಕ್ಕಪತ್ರ ಗಳನ್ನೂ ನರೇಂದ್ರನ ಸ್ವಾಧೀನ ಮಾಡಿ ತನಗಿನ್ನು ದೇವೀಪುರಕ್ಕೆ ಹೋಗಲು ಅಪ್ಪಣೆ ಕೊಡೆಂದು ನರೇಂದ್ರನನ್ನು ಕೇಳಿದನು.

" ಶ್ರೀಶ, ಈಗಲೇ ನಡೆದಿಯೇನು? "

" ಹೋಗುತ್ತೇವೆ, ಮನೆಯಲ್ಲಿ ಕೆಲಸ ಬಹಳ ಅದೆ'' ಎಂದು ಶ್ರೀಶನೆಂದನು.

" ನೀನ್ಯಾಕೆ ಸಿದ್ಧಳಾಗಿ ನಿಂತುರುವಿ ಜಗತಾ? " ಎಂದು ನರೇಂದ್ರನು ತನ್ನ ತಂಗಿಯನ್ನು ಕೇಳಿದನು.

" ನಾನಿಲ್ಲಿ ನಿಂತರೆ ಅಲ್ಲಿ ನಿನ್ನ ಮದುವೆಯ ಸಿದ್ಧತೆಯನ್ನು ಯಾರು ಮಾಡಬೇಕು? "

" ಅಹುದೇ! ನಾನೊಬ್ಬನೇ ಇರಲೇನು ಈ ಮನೆಯಲ್ಲಿ? ''

" ಒಬ್ಬನೇ ಇನ್ನೆಷ್ಟು ದಿವಸ ಇರುವಿ? ಬೇಗನೆ ಈ ಮನೆಯ ಯಜಮಾನತಿಯನ್ನೇ ನಿನಗೆ ಜೋಡುಮಾಡಿ ಕೊಡುತ್ತೇವೆ.''

" ಶ್ರೀಶ, ಜಗತ್‌ಸುಂದರಿಯು ಈಗ ಮಾತು ಬಹಳ ಕಲಿತಿದ್ದಾಳೆ! " ಎಂದು ನರೇಂದ್ರನು ಆ ಗಂಡ ಹೆಂಡರೀರ್ವರನ್ನು ಕುರಿತು ಚೇಷ್ಟೆಮಾಡಿದನು.

"ಹೇಮಲತೆಯ ಜೊತೆಯಲ್ಲಿ ಇದ್ದವಳು. ಅನ್ಯರಾರು ಕಲಿಸಬೇಕು?" ಎಂದು ಶ್ರೀಶನು ವಿನೋದಮಾಡಿ ನಕ್ಕು ಹೆಂಡತಿಯ ಸಮೇತನಾಗಿ ದೇವೀಪುರಕ್ಕೆ ಹೊರಟುನಡೆದನು.

## ಮೂವತ್ತೇಳನೆಯ ಅಧ್ಯಾಯ

### ಜುಲೇಕೆಯು ಝುಗೆಯನ್ನು ತೆಗೆದೊಗೆದು ಹೇಮಲತೆಯಾದಳು.

ಶ್ರೀಶಚಂದ್ರಬೋಸನು ದೇವೀಪುರದ ಗಾದಿಯ ಮೇಲೆ ವಿರಾಜಮಾನನಾದ ಒಂದೆರಡು ದಿವಸಗಳಲ್ಲಿ ನವಕುಮಾರನೂ, ಶ್ರೀಶನೂ ಬೀರನಗರಕ್ಕೆ ಬಂದು ಹೇಮಲತೆಯನ್ನು ಸ್ವೀಕರಿಸಬೇಕೆಂದು ನರೇಂದ್ರನಾಥನಿಗೆ ವಿನಂತಿ ಮಾಡಿಕೊಂಡರು. ಅನುಕೂಲವಾದ ಕಾಲದಲ್ಲಿ ಸಕಲವಾದ ವಾಂಛಿತಾರ್ಥಗಳು ಹೇಗೆ ತಾವೇ ಮುಂದೆಮುಂದಾಗಿ ಬಂದು ಕೈಜೋಡಿಸಿಕೊಂಡು ನಿಲ್ಲುತ್ತವೆ ನೋಡಿರಿ! ನರೇಂದ್ರನ ಹೆಸರು ತೆಗೆದುಕೊಂಡರೆ ತನ್ನ ಮೈ ಉರಿಯುತ್ತದೆ ಎಂದು ಹೇಳುತ್ತಿರುವ ನವಕುಮಾರನೇ ಈಗ ಅರ್ಥಿಯಾಗಿ ಬಂದು ಹೇಮಲತೆಯನ್ನು ಸ್ವೀಕರಿಸಿ ಅನುಗ್ರಹಿಸಬೇಕೆಂದು ವಿನೀತನಾಗಿ ಹೇಳಿಕೊಂಡನು.

ನರೇಂದ್ರನು ತನ್ನ ಮಾವನಾದ ನವಕುಮಾರನಿಗೆ ಒಳ್ಳೇ ಸನ್ಮಾನದಿಂದ ನಮಸ್ಕರಿಸಿ ನಗುತ್ತ "ಮಾವನವರೆ, ನನಗೆ ಹಿರಿಯರೆಂದರೆ ತಾವೊಬ್ಬರೇ. ತಮ್ಮ ಇಚ್ಛೆಯೆಂದರೆ ನನಗೆ ವಿಚಾರದಂಥ ಆಜ್ಞೆಯೆಂದು ತಿಳಿದುಕೊಂಡಿರುವೆನು" ಎಂದು ಬಹು ವಿನಯದಿಂದ ನುಡಿದನು.

"ಘೋರತರದ ಸಂಸಾರವು ದುಃಖದ ವಾರಿಧಿ" ಎಂಬ ಕಲ್ಪನೆಯನ್ನು ನರೇಂದ್ರನು ತನ್ನ ಮನದೊಳಗಿಂದ ನೂಕಿ ಹಾಕಿ ತಾನಿನ್ನು ತನ್ನ ಮನೋಜ್ಞಳಾದ ಸಹಧರ್ಮಚಾರಿಣಿಯೊಡನೆ ವೈಭವದಿಂದ ಶೃಂಗರಿಸಿದ ನೌಕೆಯಲ್ಲಿ ಕುಳಿತುಕೊಂಡು ಸಂಸಾರರತ್ನಾಕರದಲ್ಲಿ ಯಥೇಷ್ಟವಾಗಿ ವಿಹರಿಸಿ ಅಲ್ಲಿರುವ ಅನುರ್ಘವಾದ ಮಣಿಮೌಕ್ತಿಕಗಳ ಸಂಗ್ರಹವನ್ನು ಮಾಡುವೆನೆಂಬ

ಸಂಕಲ್ಪವನ್ನು ಮಾಡಿಕೊಂಡನು.

ತರುಣನೂ, ಬೀರನಗರದ ಶ್ರೀಮಂತನೂ, ಪ್ರತ್ಯಕ್ಷ ಅಕಬರ ಬಾದಶಹನ ಆದರಕ್ಕೆ ಪಾತ್ರನಾದವನೂ ಆದ ನರೇಂದ್ರನಾಥನ ವಿವಾಹ ಮಹೋತ್ಸವವು ಒಳ್ಳೇ ವೈಭವದಿಂದ ನೆರವೇರಿತೆಂಬದನ್ನು ಹೇಳಬೇಕೇನು? ಅನೇಕ ಮಹೋತ್ಸವಗಳನ್ನು ನೋಡಿದವರಾದ ವಾಚಕರಿಗೆ ಮದುವೆಯ ಸಮಾರಂಭದ ವರ್ಣನೆಯನ್ನು ಹೇಳಿ ನಾವು ಗುಡ್ಡಕ್ಕೆ ಕಲ್ಲೇಕೆ ಹೋರೋಣ?

ಮದುವೆಯ ಸಮಾರಂಭವು ಮುಗಿದ ಬಳಿಕ ಒಂದು ದಿವಸ ಸಾಯಂ ಕಾಲದಲ್ಲಿ ನರೇಂದ್ರನೂ, ಅವನ ಅರ್ಧಾಂಗಿಯಾದ ಹೇಮಲತಾದೇವಿಯೂ ರಥದಲ್ಲಿ ಕುಳಿತುಕೊಂಡು ತಮ್ಮ ತೋಟವನ್ನು ನೋಡಲಿಕ್ಕೆ ಹೋದವರು ದೀಪ ಹಚ್ಚುವ ಸಮಯಕ್ಕೆ ಮನೆಗೆ ಬಂದರು. ನರೇಂದ್ರನು ದಿವಾನಖಾನೆ ಯಲ್ಲಿ ಕಳಿತು ಏನೋ ಓದುತ್ತ ಕುಳಿತಿರುವಾಗ ಯಾರೋ ಮೆಲ್ಲಗೆ ಅವನ ಸಮೀಪದಲ್ಲಿ ಬಂದು ನಿಂತಂತಾಯಿತು. ನರೇಂದ್ರನು ಚಕಿತನಾಗಿ " ಯಾರವರು ? " ಎಂದು ತಿರಿಗಿ ನೋಡಲಾಗಿ ಊದಿಬಣ್ಣದ ಝುಗೆಯನ್ನು ತೊಟ್ಟುಕೊಂಡು ನಿಂತಿರುವ ಯುವನಸ್ತ್ರೀಯನ್ನು ಕಂಡನು. ಈ ಆಗಂತುಕೆಯು ಯಾರಿರಬಹುದೆಂದು ಅವನು ಅವಳನ್ನು ದಿಟ್ಟಿಸಿ ನೋಡು ವಾಗಲೇ ಜುಲೇಕೆಯು ಹ !! ಹ !! ಹ !! ಎಂದು ನಕ್ಕಳು.

" ಜುಲೇಕಾ ! ಎಲ್ಲಿಂದ ಬಂದೆ ನೀನು ? "

" ಎಲ್ಲಿಂದೇಕೆ ? ನಾನು ನಿಮ್ಮ ವಿವಾಹಮಹೋತ್ಸವಕ್ಕಾಗಿ ಆಗ್ರಾ ಪಟ್ಟಣವನ್ನು ಬಿಟ್ಟು ಲಗಬಗೆಯಿಂದ ದೇವೀಪುರಕ್ಕೆ ಬಂದಿದ್ದೆನಲ್ಲೆ ? "

" ಎಲ್ಲಿದ್ದಿ ನೀನು ದೇವೀಪುರದಲ್ಲಿ ? ನಾನು ನಿನ್ನನ್ನು ನೋಡಲೇ ಇಲ್ಲ ! " ಎಂದು ನರೇಂದ್ರನು ಆಶ್ಚರ್ಯದಿಂದ ಕೇಳಿದನು.

" ನೀವು ನನ್ನನ್ನು ಯಾಕೆ ನೋಡುವಿರಿ ? ನಿಮಗೇನು ನಿಮ್ಮ ಪ್ರಿಯ ತಮೆಯ ಧ್ಯಾನವೇ ಧ್ಯಾನವಾಗಿತ್ತು ! ನಾನು ಹಿಂದೂಜನರ ಸೀರೆ-ಕುಪ್ಪಸ ಗಳನ್ನುತೊಟ್ಟುಕೊಂಡು ಸಮಾರಂಭದಲ್ಲಿ ಓಡಾಡುತ್ತಿದ್ದೆನಾದ್ದರಿಂದ ನಿಮಗೆ ನನ್ನ ಗುರುತು ಹತ್ತಿರಲಿಕ್ಕಿಲ್ಲ " ಎಂದು ಜುಲೇಕೆಯು ನಗುತ್ತ ಹೇಳಿದಳು.

" ನಮ್ಮ ಸ್ತ್ರೀಯರ ವೇಷ ಹಾಕಿಕೊಂಡರೆ ಏನಾಯಿತು ಜುಲೇಕಾ, ನಾನು ನಿನ್ನ ಗುರುತು ಹಿಡಿಯದೇ ಇರುತ್ತಿದ್ದೆನೆ ? "

"ಆಗಲಿ, ನಾಳಿಗೆ ನಾನು ಹಿಂದೂಜನರ ವೇಷ ಹಾಕಿಕೊಂಡು ನಾಲ್ಕುಜನ ಸ್ತ್ರೀಯರೊಡನೆ. ಬರುತ್ತೇನೆ, ಆಗ ಹಿಡಿಯುವಿರಂತೆ ಗುರುತು!" ಎಂದು ಮಂದಸ್ಮಿತೆಯಾಗಿ ಜುಲೇಕೆಯು ಹೇಳಿದಳು.

"ಬಂದಾದರೂ ಬಾ. ನಿನ್ನ ಗುರುತು ನಾನು ಹಿಡಿಯದಿದ್ದರೆ ಈ ಮಂದಿರವನ್ನೇ ನಿನಗೆ ಬಿಟ್ಟುಕೊಡುವೆನು" ಎಂದು ನರೇಂದ್ರನು ನಗುತ್ತ ಹೇಳಿದನು.

"ಬಹು ಜೋಕೆ ನೋಡಿರಿ ರಾಯ್‌ಬಹಾದ್ದೂರ್!"

"ಆಗಿಹೋಗಲಿ."

"ರಾಯ್, ನೀವು ವಿವಾಹಿತರಾಗಿ ಸಂಸಾರಸುಖದಲ್ಲಿ ಲೋಲಾಡುತ್ತಿರುವದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಮಾತ್ರ ಈ ಬಡ ಜುಲೇಕೆಯನ್ನು ಮರೆಯಬೇಡಿರಿ ಕಂಡಿರಾ!"

"ಏನು ಹಾಗಂದರೆ ಜುಲೇಕಾ? ನಿನ್ನ ಉಪಕಾರಗಳನ್ನು ನಾನು ಯಾವಜ್ಜೀವ ಮರೆಯಲಿಕ್ಕಿಲ್ಲ!" ಎಂದು ನರೇಂದ್ರನು ಆದರದಿಂದ ನುಡಿದನು.

"ಒಳ್ಳೇದು, ನಾನಿನ್ನು ನಿಮ್ಮ ಸೌಭಾಗ್ಯವತಿಯರ ದರ್ಶನ ತೆಗೆದುಕೊಂಡು ದೇವೀಪುರಕ್ಕೆ ಹೋಗುವೆನು. ನಾಳೆ ಮತ್ತೆ ಭೆಟ್ಟಿ ಆಗಿಯೇ ಆಗುವೆನು" ಎಂದು ಹೇಳಿ ಜುಲೇಕೆಯು ಹೊರಟುಹೋದಳು.

ಈ ಜುಲೇಕೆಯು ದೇವೀಪುರಕ್ಕೆ ಯಾವಾಗ ಬಂದಳು? ಬಂದಿದ್ದರೆ ಅವಳ ಗುರುತು ನನಗೆ ಹೇಗೆ ಸಿಕ್ಕಲಿಲ್ಲ! ಎಂಥ ಮಾಟಗಾರತಿಯಾದ ಹೆಣ್ಣುಮಗಳಿವಳು? ಎಂದು ನರೇಂದ್ರನು ಆಲೋಚಿಸುತ್ತ ಕುಳಿತಿರುವಾಗ ಸೇವಕನು ಬಂದು ಭೋಜನಕ್ಕೆ ದಯಮಾಡಬೇಕೆಂದು ಹೇಳಿದನು. ಆವನು ಹೆಂಡತಿಯೊಡನೆ ನಗುತ್ತ ಕೆಲೆಯುತ್ತ ಭೋಜನ ತೀರಿಸಿಕೊಂಡು ತಾಂಬೂಲಕ್ಕಾಗಿ ಅವಳ ಕೋಣೆಯೊಳಗೆ ಸೇರಿದನು. ಹೇಮಲತೆಯು ಮೆಲ್ಲನೆ ಹಾಡುತ್ತ ವೀಳ್ಯಗಳನ್ನು ಸಿದ್ಧಮಾಡುತ್ತಿದ್ದಳು. ಪತಿಯು ಬಂದು ತನ್ನ ಪಾರ್ಶ್ವದಲ್ಲಿ ಕುಳಿತದ್ದು ಕಂಡು ಹೇಮಲತೆಯು ವಿಲಾಸದಿಂದ ನಗುತ್ತ "ಆಗಲೇ ನಿಮ್ಮ ದಿವಾನಖಾನೆಯಲ್ಲಿ ಯಾರು ಬಂದಿದ್ದರು?" ಎಂದು ಕೇಳಿದಳು.

"ಅವಳೇ! ನಾನು ಆಗ್ರಾಪಟ್ಟಣದಲ್ಲಿ ಬೇನೆಯಿಂದ ಮಲಗಿಕೊಂಡಾಗ

ನನ್ನ ಆರೈಕೆ ಮಾಡಿದ ಯವನ ಸೈರಂಧ್ರಿಯು ! ”

“ ಆದರೇನಾಯಿತು ! ಹೀಗೆ ಕಳವಿಲೆ ನಿಮ್ಮ ದಿವಾನಖಾನೆಯಲ್ಲಿ ಸೇರಿ ಕೊಳ್ಳಬೇಕೇನು ?” ಎಂದು ತುಸು ಕೋಪ ತಾಳಿ ಹೇಮಲತೆಯು ಕೇಳಿದಳು.

“ ಕಳವಿಲೆ ಸೇರಿದಳೇನು? ಅವಳು ಬರುವ ಹಾಗೆ ಬಂದಳೆಂದು ನಾನು ತಿಳಿದೆನು. ”

“ ಇವೆಲ್ಲ ನಮಗೆ ತಿಳಿಯುತ್ತವೆ. ಮಧ್ಯರಾತ್ರಿಯಲ್ಲಿಯೇ ಅವಳು ನಿಮ್ಮನ್ನು ಆಗ್ರಾಪಟ್ಟಣದಿಂದ ಎತ್ತಿಕೊಂಡು ಹೋದಳೆಂದು ನನಗೆ ತಾರಾ ದೇವಿಯು ಹೇಳಿದಳು. ನಾನಿದ್ದ ಮನೆಯಲ್ಲಿ ಅಂಥ ಹೆಂಗಸು ಬರುವಳೇ! ” ಎಂದು ಆ ಸತಿಯು ಕಡುಕೋಪದಿಂದ ನುಡಿದಳು.

“ ಪ್ರಿಯೆ, ಅವಳು ಇಲ್ಲಿಂದ ನಿನ್ನ ದರ್ಶನಕ್ಕಾಗಿ ಒಳಗೇ ಬಂದಳು. ಅವಳು ಕಳವಿಲೆ ಬಂದಳೆಂದರೆ ನಾನೇನು ಹೇಳಲಿ ? ಅನ್ಯರ ಹೆಣ್ಣುಮಕ್ಕಳ ಮೇಲೆ ಹಾಗೆ ಅಪವಾದ ತೆಗೆದುಕೊಳ್ಳಲಾಗದು ” ಎಂದು ನರೇಂದ್ರನು ವಿಸ್ಮಯಾಕುಲನಾಗಿ ಹೇಳಿದನು.

“ ಅನ್ಯರ ಸ್ತ್ರೀಯರ ವಿಷಯವಾಗಿ ನಾನೇನೂ ಮಾತಾಡುವದಿಲ್ಲ. ಅವರೊಡನೆ ನನ್ನ ಪ್ರಾಣೇಶ್ವರರ ನಡತೆಗೆ ಕುಂದು ಬರುವದಿಲ್ಲವೆ ? ”

“ ನಾನು ತಪ್ಪಿನಲ್ಲಿ ಇಲ್ಲವೇ ಇಲ್ಲ. ”

“ ಅವಳು ಒಳ್ಳೇ ಹೆಣ್ಣುಮಗಳಾಗಿದ್ದರೆ ನಾಳಿಗೆ ನಮ್ಮ ಜನರ ವೇಷ ವನ್ನು ಹಾಕಿಕೊಂಡು ಬಂದು ನಿಮ್ಮೊಡನೆ ಗುರುತು ಹಿಡಿಯುವಿರೋ ಇಲ್ಲವೋ ಎಂಬ ವಿನೋದವನ್ನೇಕೆ ಮಾಡುವಳು ? ”

“ ಅವಳು ವಿನೋದಗಾರತಿಯೇ ಇರುವಳು. ಬಾದಶಹರ ಅಂತಃಪುರ ದಲ್ಲಿ ಅನೇಕ ವೇಷಾಂತರಗಳನ್ನು ತಳೆದು ಅಲ್ಲಿಯ ರಾಣೀ ಜನರನ್ನು ವಿನೋದಗೊಳಿಸುತ್ತಿದ್ದಳು. ಅವಳು ನಾಳಿಗೆ ಬಂದರೆ ನನ್ನಿಂದಾದರೂ ಅವಳ ಗುರುತನ್ನು ಹಿಡಿಯೋಣಾಗಲಿಕ್ಕಿಲ್ಲ. ”

“ ಅಷ್ಟು ಚತುರೆಯೇ ಅವಳು ? ನಾಳೆ ಅವಳು ಬಂದರೆ ನೀವು ಗುರುತು ಹಿಡಿಯಬಲ್ಲಿರೇನು ? ”

“ ನಾನು ಹಿಡಿಯುದೇನು ? ಅಖಂಡ ಎರಡು ತಿಂಗಳು ಅವಳು ನನ್ನ ಬಳಿಯಲ್ಲಿಯೇ ಇರುತ್ತಿದ್ದಳು. ”

ಹೇಮಲತೆಯು ತುಸು ಮಂದಸ್ಮಿತೆಯಾಗಿ, "ಆಗಲೇ ಅವಳು ನನ್ನ ಬಳಿಯಲ್ಲಿ ಬಂದು ತನ್ನ ಚಾತುರ್ಯವನ್ನು ಬೆಳಿಸಿಹೇಳುತ್ತಿದ್ದಳು. ಸೀರೆ ಕುಪ್ಪಸಗಳನ್ನು ತೊಟ್ಟುಕೊಂಡು ತಾನು ನಿಮ್ಮ ಬಳಿಯಲ್ಲಿಯೇ ಕುಳಿದ್ದರೂ ಅವಳ ಗುರುತು ನಿಮಗೆ ಸಿಕ್ಕದೆಂದು ಅವಳು ಹೇಳುತ್ತಿದ್ದಳು. ಇಂಥ ಚತು ರೆಯೇ ಅವಳು ? " ಎಂದು ಕೇಳಿದಳು.

ನರೇಂದ್ರನು ತನ್ನ ಹೆಂಡತಿಯ ಮುಖವನ್ನು ನೋಡಿ ನಕ್ಕು ಅವಳು ಚತುರೆ ಇರಬಹುದು. ನಿನ್ನ ಮಾತಿನಿಂದ ನಾನು ಪರೀಕ್ಷಾಹೀನನೆಂದು ನೀನು ಹೇಳಿದಂತಾಗಲಿಲ್ಲವೇ ? " ಎಂದು ಕೇಳಿದನು.

"ಹಾಗಾದರೆ ಜುಲೇಕೆಯು ನನ್ನ ಸೀರೆಕುಪ್ಪಸಗಳನ್ನು ತೊಟ್ಟು ಕೊಂಡು ಕುಂದೆಯ ಸಂಗಡ ಮಾತಾಡುತ್ತ ಕುಳಿತಿದ್ದಾಳೆ. ನನ್ನ ಸೂಚನೆ ಯನ್ನು ಕೇಳಿಯಾದರೂ ನೀವು ಅವಳ ಗುರುತು ಹಿಡಿದು ಬನ್ನಿರಿ ನೋಡೋಣ!"

ನರೇಂದ್ರನು ಜುಲೇಕೆಯನ್ನು ನೋಡುವದಕ್ಕಾಗಿ ತನ್ನ ಹೆಂಡತಿಯು ತೋರಿಸಿದ ಕೋಣೆಯಲ್ಲಿ ಹೋಗಿ ನೋಡಿದನು. ಅಲ್ಲಿ ಜುಲೇಕೆಯೂ ಇಲ್ಲ ಕುಂದೆಯೂ ಇಲ್ಲ. ಅಲ್ಲಿಂದ ಅವನು ಮತ್ತೊಂದು ಕೋಣೆಯಲ್ಲಿ ಹೊಕ್ಕು ನೋಡಿದನು. ಹೀಗೆ ಮನೆ ತುಂಬ ಹುಡುಕಿ ನೋಡಿದರೂ ಜುಲೇಕೆಯು ಸಿಕ್ಕಲಿಲ್ಲ. ತನ್ನ ಅರ್ಧಾಂಗಿಯು ತನ್ನೊಡನೆ ಸುಳ್ಳೇ ವಿನೋದಗೈದಳೆಂದು ನೆನೆದು ಅವನು ನಸು ನಗುತ್ತ ಅವಳ ಕೋಣೆಗೆ ಮರಳಿ ಬಂದು "ಪ್ರಿಯೆ................" ಎಂದು ನುಡಿಯುವಷ್ಟರಲ್ಲಿ ಅಲ್ಲಿ ಜುಲೇಕೆಯನ್ನು ಕಂಡು ಚಕಿತನಾದನು.

"ರಾಯಬಹದ್ದೂರ್, ಯಾರಿಗೆ ಪ್ರಿಯೆ ಎಂದು ಸಂಬೋಧಿಸಿದಿರಿ ? ಹೇಮಲತಾದೇವಿಯು ಕೇಳಿದರೆ ನನ್ನ ಪ್ರಾಣವನ್ನು ತೆಗೆದುಕೊಂಡಾಳು" ಎಂದು ಜುಲೇಕೆಯು ಭೀತಿಗ್ರಸ್ತಳಾದಂತೆ ಬಹು ಮೆಲ್ಲನೆ ನುಡಿದಳು.

ನರೇಂದ್ರನು ಭರದಿಂದ ಜುಲೇಕೆಯನ್ನು ಅಪ್ಪಿಕೊಂಡು ಅವಳ ಮುಖ ವನ್ನು ಬಲಾತ್ಕಾರದಿಂದ ಅನೇಕಾವರ್ತಿ ಚುಂಬಿಸಿ "ಪ್ರಿಯ ಜುಲೇಕೆ, ನಾನು ನಿನ್ನನ್ನು ಹೀಗೆ ಪ್ರೇಮಪಾಶದಲ್ಲಿ ಹಿಡಿದಿರಲು ಹೇಮಲತಾದೇವಿಯು ನಿನ್ನ ಗೇನು ಮಾಡುತ್ತಾಳೋ ನೋಡೋಣ. ನಿನಗೇ ನಾನು ಹೇಮಲತೆಯೆಂಬ

ಹೆಸರಿಟ್ಟು ನನ್ನ ಅರ್ಧಾಂಗಿಯನ್ನು ಮಾಡಿಕೊಳ್ಳುತ್ತೇನೆ. ಹೇಮಲತೆಯು ಬೇಕಾದರೆ ಜುಲೇಕೆಯಾಗಲೊಲ್ಲಳೇಕೆ!" ಎಂದು ಗಹಗಹಿಸಿ ನಕ್ಕನು.

ಜುಲೇಕೆಯು ತನ್ನ ಝುಗೆಯನ್ನು ತೆಗೆದೊಗೆದು ಹೇಮಲತೆಯಾದಳು. ಆಗ ನರೇಂದ್ರನು ತನ್ನ ಹೆಂಡತಿ ಜುಲೇಕೆಯಾದದ್ದು ಹೇಗೆ, ಅವಳು ಅಂತಃಪುರದಲ್ಲಿ ಸೇರಿದ್ದು ಹೇಗೆ ಇತ್ಯಾದಿ ಪ್ರಶ್ನಮಾಡಲಾಗಿ ಹೇಮಲತೆಯು ಹೇಳಿದಳು: "ನಾನು ಮಾನಸಿಂಹರಾಜನ ಮಗಳಾದ ತಾರಾದೇವಿಯೊಡನೆ ಆಗ್ರಾಕ್ಕೆ ಹೋದದ್ದು ನಿಮಗೆ ಗೊತ್ತೇ ಇದೆಯಲ್ಲ! ಮುಂದೆ ಪ್ರಾಣನಾಥರು ಯುದ್ಧದಲ್ಲಿ ಗಾಯವನ್ನು ಹೊಂದಿ ಅಂಬರದ ಅತಿಥಿಗೃಹದಲ್ಲಿ ಇದ್ದ ಸಂಗತಿಯು ನನಗೆ ತಿಳಿಯಿತು. (ಮಾನಸಿಂಹರಾಜನ ಸೋದರ ಅತ್ತೆಯೇ ಅಂಬರದ ಬಾದಶಾಹಿಣಿಯು.) ನಾನು ತಾರಾದೇವಿಯೊಡನೆ ಅಂಬರದ ಬಾದಶಾಹಿಣಿಯ ದರ್ಶನದ ನಿಮಿತ್ತವಾಗಿ ತಮ್ಮನ್ನು ನೋಡಬೇಕೆಂದು ಹೋದೆನು. ಭಯಂಕರವಾದ ಗಾಯವಾಗಿದ್ದರಿಂದ ತಮಗೆ ಪ್ರಜ್ಞೆಯೇ ಇದ್ದಿಲ್ಲ. ಆಗ ನನ್ನ ಜೀವ ನಿಂದಿರಲಾರದೆ ಅಂಬರದ ಬಾದಶಾಹಿಣಿಯ ಅನುಮತಿಯಿಂದ ನಾನು ಜುಲೇಕಾ ಎಂಬ ಹೆಸರಿಟ್ಟುಕೊಂಡು ಅಲ್ಲಿಯೇ ತಮ್ಮ ಆರೈಕೆ ಮಾಡುತ್ತಿದ್ದೆನು. ನಾನು ಬಂಗಾಲದವಳೆಂಬದು ಆ ಅಂತಃಪುರದಲ್ಲಿ ಯಾರಿಗೂ ತಿಳಿಯಗೊಡಲಿಲ್ಲ. ಅಂಬರದ ಬಾದಶಾಹಿಣಿಯೊಬ್ಬಳಿಗೇ ಗೊತ್ತು. ಆ ಬಾದಶಾಹಿಣಿಯ ಅಧಿಕಾರದಿಂದ ನನಗೆ ಅಂತಃಪುರದಲ್ಲಿ ಬೇಕಾದ ಹಾಗೆ ಸಂಚರಿಸುವದಕ್ಕೆ ಬರುತ್ತಿತ್ತು. ಅವಳ ದರ್ಪದಿಂದಲೇ ನನ್ನ ಹೆಸರು ಯಾರೂ ತೆಗೆಯುತ್ತಿದ್ದಿಲ್ಲ."

"ವಾಃ! ಪ್ರಿಯೇ, ಇಷ್ಟು ಚಾತುರ್ಯವೂ, ಸಾಹಸವೂ ನಿನ್ನಲ್ಲಿ ಇತ್ತೆಂದು ನಾನು ಎಳ್ಳಷ್ಟಾದರೂ ಎಣಿಸಿದ್ದಿಲ್ಲ. ಆದರೆ ನಿನ್ನ ಗುರುತು ನನಗೆ ಹೇಗೆ ಹತ್ತಲಿಲ್ಲವೊ ಕಾಣೆನು. ನೋಡಿದರೆ ನಾವು ನೀವು ಕೂಡಿ ಎರಡು ತಿಂಗಳ ಒತ್ತಟ್ಟಿಗೆ ಇದ್ದೆವು."

"ಅದಕ್ಕಾಗಿಯೇ ನಾನು ನಿಮಗೆ ಹಗಲು ಭೆಟ್ಟಿಯೇ ಆಗುತ್ತಿದ್ದಿಲ್ಲವಷ್ಟೇ?"

"ಅಹುದು! ಅಹುದು! ಈ ದಿವಸವಾದರೂ ಈ ಜುಲೇಕೆಯು ದೀಪ ಹಚ್ಚಿದ ಬಳಿಕೇ ಬಂದು ನನ್ನನ್ನು ಮೋಸಗೊಳಿಸಬೇಕೆಂದು ಮಾಡಿ

ದ್ದಳು" ಎಂದು ನರೇಂದ್ರನು ತನ್ನ ಹೆಂಡತಿಯ ಗದ್ದವನ್ನು ಹಿಡಿದು ನಗುತ್ತ ಹೇಳಿದನು.

"ಪ್ರಾಣನಾಥರೆ, ನಾನು ಕೊಟ್ಟ ಬಕುಲದ ಹಾರವನ್ನು ಕಾಯ್ದು ಇಟ್ಟಿರುವಿರೋ ಎಲ್ಲಿಯಾದರೂ ಚಲ್ಲಿಕೊಟ್ಟಿರೋ?" ಎಂದು ಹೇಮಲತೆಯು ಮೃದುಹಾಸಗೈದು ಕೇಳಿದಳು.

"ಯಾಕೆ! ಆ ಹಾರವನ್ನೂ, ಒಂದು ಪತ್ರವನ್ನೂ ರವೀಂದ್ರಪಾಲ ಗವಾಯಿಯ ಮಗನಾದ ಹೇಮಚಂದ್ರನ ಕೂಡ ಕೊಟ್ಟು ನಿನ್ನ ಕಡೆಗೆ ಕಳಿಸಿದ್ದೆನಲ್ಲ! ಅವನು ತಂದುಕೊಡಲಿಲ್ಲವೇನು?" ಎಂದು ನರೇಂದ್ರನು ವಿಸ್ಮಯದಿಂದ ಕೇಳಿದನು.

"ರವೀಂದ್ರನ ಮಗ ಹೇಮಚಂದ್ರ! ರಾಯಬಹಾದ್ದೂರ, ರವೀಂದ್ರನು ಮದುವೆ ಮಾಡಿಕೊಂಡಿದ್ದಿಲ್ಲ. ಅವನಿಗೆ ಮಕ್ಕಳೆಲ್ಲಿ? ನೀವು ಅನ್ಯಸ್ತ್ರೀಯರಲ್ಲಿ ಪ್ರೇಮವನ್ನಿಟ್ಟು ನಾನು ಪ್ರೇಮದಿಂದ ಕೊಟ್ಟ ಹಾರವನ್ನು ಎಲ್ಲಿಯೋ ಹರಿದು ಒಗೆದಿರಬಹುದು!" ಎಂದು ಹೇಮಲತೆಯು ಮತ್ಸರದಿಂದ ಹುಬ್ಬಿಗೆ ಗಂಟಿಕ್ಕಿ ಕೇಳಿದಳು.

"ಪ್ರಿಯೇ, ನಾನು ಅನ್ಯಸ್ತ್ರೀಯರಲ್ಲಿ ಪ್ರೇಮವನ್ನು ಎಂದಿಗಾದರೂ ಬಳಸುವವನೆ?"

"ಜುಲೇಕೆಯೊಡನೆ ನೀವೆಷ್ಟಾವರ್ತಿ ಚೇಷ್ಟೆಮಾಡುತ್ತ ಅವಳನ್ನು ಚುಂಬಿಸಿದಿರಿ?"

"ನೀನೇ ಜುಲೇಕೆಯಲ್ಲ! ನಾನು ಮರ್ಯಾದೆಯನ್ನು ದಾಟಿ ಹೋಗಿದ್ದೆನೆ? ಒಣ ಚೇಷ್ಟೆಯನ್ನು ಮಾಡಿದರೆ ಏನಾಯಿತು?"

"ನನಗಂತೂ ಸಂಶಯವು ಬರುತ್ತದೆ. ಆ ಬಕುಲಹಾರವನ್ನು ಏನು ಮಾಡಿದಿರಿ? ಸತ್ಯವಾಗಿ ಹೇಳಿರಿ."

"ಪ್ರಿಯೆ, ನಾನು ಹೇಳಿದ್ದು ಸುಳ್ಳಲ್ಲ. ನನ್ನ ಉಂಗುರವನ್ನೂ ನೀನು ಕೊಟ್ಟಿದ್ದ ಬಕುಲಹಾರವನ್ನೂ ನಮ್ಮ ಸೈನ್ಯದ ಸಂಗಡ ಇದ್ದ ಹೇಮಚಂದ್ರನೆಂಬ ಗಾಯಕರ ಹುಡುಗನೊಡನೆ ನಾನು ನಿನ್ನ ಕಡೆಗೆ ಕಳಿಸಿದ್ದು ನಿಜ" ಎಂದು ನರೇಂದ್ರನು ಆಣೆ ಮಾಡಿ ಹೇಳಿದನು.

"ಪ್ರಾಣನಾಥರೆ, ಹಾಗೆ ಹುಚ್ಚರ ಹಾಗೆ ಕಂಡಕಂಡವರೊಡನೆ

ಪ್ರಿಯತಮೆಗೆ ಪತ್ರವನ್ನು ಬರೆದು ಕಳಿಸಬಹುದೆ? ಆ ಪೋರನು ನಿಮ್ಮ ಪತ್ರವನ್ನು ಒಡೆದು ನೋಡಿದ್ದು, ಅನ್ಯರಾರಿಗಾದರೂ ತೋರಿಸಿದ್ದು ಆಗಿದ್ದರೆ ಒಳ್ಳೇದೇನು? ನೀವು ಹಾಗೆ ಅವಿಚಾರದ ಕೆಲಸ ಮಾಡಿದ್ದಕ್ಕಾಗಿ ಆ ಹುಡುಗನು ನಿಮ್ಮ ಉಂಗುರವನ್ನು ಎತ್ತಿಹಾಕಿ ಚೆನ್ನಾಗಿ ಬುದ್ಧಿಗಲಿಸಿದನೆಂದು ನಾನು ತಿಳಿಯುತ್ತೇನೆ. ''

ನರೇಂದ್ರನು ವಿಚಾರಮಗ್ನನಾಗಿ ಕುಳಿತುಕೊಂಡು "ಪ್ರಿಯೆ........" ಎಂದು ಮಾತಾಡುವಷ್ಟರಲ್ಲಿಯೇ "ನಾನು ಹೇಳುವದಂತೂ ಮೊದಲು ಕೇಳಿರಿ. ಈಗ ಆದದ್ದು ಆಗಿಹೋಯಿತು. ಒಣಗಿ ಜೀರ್ಣವಾಗಿ ಹೋದ ಹಾರವು ಹೋದರೆ ಹೋಯಿತು. ಈ ಹೊಸ ಹಾರವನ್ನು ತೆಗೆದುಕೊಳ್ಳಿರಿ. ನನಗೋಸ್ಕರ ನೀವು ನಿಮ್ಮ ಬೆಲೆಯುಳ್ಳ ಉಂಗುರವನ್ನು ಕಳಕೊಂಡಿರಿ! ಅದಕ್ಕೆ ಬದಲಾಗಿ ನಾನು ಬೇರೊಂದು ಉಂಗುರವನ್ನು ಕೊಡುವೆನು. ಇದೊ, ತಕೊಳ್ಳಿ. ಇನ್ನೊಮ್ಮೆ ಮಾತ್ರ ಇಂಥ ಬೆಲೆಯುಳ್ಳ ಉಂಗುರವನ್ನು ಹೇಮಚಂದ್ರನಂಥ ಪರಿಚಯವಿಲ್ಲದವನ ಕೈಯಲ್ಲಿ ಕೊಡಬೇಡಿರಿ!" ಎಂದು ಹೇಳಿ ಹೇಮಲತೆಯು ಒಂದು ಉಂಗುರವನ್ನು ತನ್ನ ಪತಿಯ ಸ್ವಾಧೀನ ಮಾಡಿದಳು.

"ಹೇಮ, ನಾನು ಹೇಮಚಂದ್ರನ ಕೈಯಲ್ಲಿ ಕೊಟ್ಟ ಉಂಗುರವೇ ಇದು! ನಿನಗೆಲ್ಲಿ ಸಿಕ್ಕಿತು?"

"ಸಿಕ್ಕುತ್ತದೇಕೆ? ಇದನ್ನು ನೀವೇ ರಾಜಮಹಾಲಿನಲ್ಲಿ ನನ್ನ ಕೈಯಲ್ಲಿ ಕೊಟ್ಟಿರಲ್ಲ!'' ಎಂದು ಹೇಮಲತೆಯು ನುಡಿದು ತನ್ನ ಗಂಡನ ಮೋರೆಯನ್ನು ನೋಡಿ ಯಥೇಷ್ಟವಾಗಿ ನಕ್ಕಳು.

ನರೇಂದ್ರನು ಹೇಮಲತೆಯ ಹೆಗಲ ಮೇಲೆ ಕೈಹಾಕಿ "ಹಾಗಾದರೆ ಹೇಮಚಂದ್ರನೆಂದರೆ ಗಾಯಕರ ವೇಷವನ್ನು ಹಾಕಿದ ಹೇಮಲತೆಯೇ ಎನ್ನಬಾರದೆ! ಬಹುರೂಪಿಣೀ, ಇನ್ನು ನನ್ನನ್ನು ವಂಚಿಸ ಬಾ ನೋಡೋಣ!" ಎಂದು ಹೇಳಿ ಮೆಲ್ಲಗೆ ಅವಳ ಗಲ್ಲವನ್ನು ಬಡಿಯುವ ಹಾಗೆ ಮಾಡಿ ಮುಟ್ಟಿದನು.

"ಇನ್ಯಾಕೆ ವಂಚಿಸಲಿ? ಯಾರು ನನ್ನ ಪ್ರೇಮವನ್ನು ಅಪಹರಿಸಿದ್ದರೋ ಅವರ ಪ್ರೇಮವನ್ನು ನಾನು ಅಪಹರಿಸಿಕೊಂಡುಬಿಟ್ಟೆನು. ಮುಯ್ಯಿಗೆ ಮುಯ್ಯಿ ತೀರಿತು."

"ಪ್ರಿಯೆ, ನನಗೋಸ್ಕರವಾಗಿ ನೀನು ಹೀಗೆ ಬಹುರೂಪಿಣಿಯಾಗಿ ತಿರುಗಿ ಕಷ್ಟಪಟ್ಟೆಯಲ್ಲವೆ?" ಎಂದು ವಿಷಾದದಿಂದ ನರೇಂದ್ರನು ಸುಡಿದನು.

"ಪ್ರಾಣಕಾಂತರ ಮುಖವನ್ನು ನಿತ್ಯದಲ್ಲಿಯೂ ನೋಡುವ ಆನಂದವು ಬೇಕಾಗಿದ್ದರೆ ಬಹುರೂಪಿಣಿಯಾದರೂ ಆಗಬೇಕು. ಮತ್ತಿನ್ನೇನಾದರೂ ಆಗಬೇಕು! ಕಡೆಗೆ ಜುಲೇಕೆಯು ನಿಮ್ಮ ವಿವಾಹಕ್ಕೆ ಬಂದೊದಗುವೆನೆಂದು ಹೇಳಿದ ವಚನಕ್ಕೆ ತಪ್ಪಲಿಲ್ಲವಷ್ಟೆ?" ಎಂದು ಬಹು ವಿಲಾಸವೊಂದಿಗೆ ಹೇಮಲತೆಯು ಕೇಳಿದಳು.

"ಜುಲೇಕೆಯು ಬರದಿದ್ದರೆ ನನ್ನ ಲಗ್ನವೇ ಆಗುತ್ತಿದ್ದಿಲ್ಲ" ಎಂದು ನರೇಂದ್ರನು ತನ್ನ ಪ್ರಾಣಕಾಂತೆಯನ್ನು ಮತ್ತೆ ಭರದಿಂದ ಅಪ್ಪಿಕೊಂಡು, ಅವಳ ಮುಖವನ್ನು ಅನೇಕಾವರ್ತಿ ಚುಂಬಿಸಿದನು.

— ಸಮಾಪ್ತ —

# ಮನೋಹರ ಗ್ರಂಥಮಾಲೆ, ಧಾರವಾಡ

ಈ ಗ್ರಂಥಮಾಲೆಯು **೧೯೩೩ನೆಯ ಅಗಸ್ಟ ೧೫ಕ್ಕೆ** ಪ್ರಾರಂಭವಾಗಿದೆ.

ಕಾದಂಬರಿ, ಸಣ್ಣಕತೆ, ನಾಟಕ, ಏಕಾಂಕ, ಹರಟೆ, ದಿನಚರಿ ಮೊದಲಾದ ಸರಸಸಾಹಿತ್ಯವನ್ನೆ ಈ ಗ್ರಂಥಮಾಲೆಯು ಪ್ರಕಟಿಸುತ್ತಿದೆ.

ಕಾವ್ಯ-ವಿಮರ್ಶೆ-ವಿಜ್ಞಾನ-ವಿಚಾರ ಸಾಹಿತ್ಯವನ್ನೂ ಗ್ರಂಥಮಾಲೆಯು **ಬಿಡಿಮುತ್ತುಗಳೆಂದು** ಆಗೀಗ ಪ್ರಕಟಿಸುತ್ತಿದೆ.

ಶ್ರೀಯುತರಾದ ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ ಇವರು ಈ ಗ್ರಂಥಮಾಲೆಗೆ ಪ್ರಾರಂಭದಿಂದಲೂ ಸಾಹಿತ್ಯವಿಷಯದಲ್ಲಿ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ.

ಇಡಿ ಕನ್ನಡ ನಾಡಿನ ಸಿದ್ಧಹಸ್ತಬರೆಹಗಾರರೆಲ್ಲರೂ ಈ ಗ್ರಂಥಮಾಲೆಗಾಗಿ ಗ್ರಂಥಗಳನ್ನು ಬರೆದುಕೊಟ್ಟು ಇದರ ಗೌರವವನ್ನೂ ಕೀರ್ತಿಯನ್ನೂ ಹೆಚ್ಚಿಸಿದ್ದಾರೆ; ಇದರ ಸಾಹಿತ್ಯಸ್ಥಾನವನ್ನು ಉನ್ನತವಾಗಿಸಿದ್ದಾರೆ.

ಗ್ರಂಥಮಾಲೆಯ ಹೊಸ ವರ್ಷವು **ಅಗಸ್ಟ** ತಿಂಗಳಿಂದ ಪ್ರಾರಂಭವಾಗುತ್ತದೆ; ಜುಲೈ ತಿಂಗಳಿಗೆ ಮುಗಿಯುತ್ತದೆ.

ವರ್ಷದಲ್ಲಿ ಯಾವಾಗ ಬೇಕಾದರೂ ಈ ಗ್ರಂಥಮಾಲೆಗೆ ಹೊಸದಾಗಿ ಚಂದಾದಾರರಾಗಬಹುದು. ಆದರೆ ಆ ಹಿಂದೆ ಪ್ರಕಟವಾದ ಆ ವರ್ಷದ ಗ್ರಂಥಗಳನ್ನು ಮಾತ್ರ ಅಗಸ್ಟದಿಂದಲೆ ಪ್ರಾರಂಭವೆಂದು ತಿಳಿದು—ಅವರಿಗೆ ಕಳಿಸಿಕೊಡಲಾಗುವುದು.

ಚಂದಾಹಣವನ್ನು ಮುಂಗಡವಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಮನಿಯಾರ್ಡರ ಮೂಲಕ ಕಳುಹಿಸಿಕೊಡಬೇಕು.

ಗ್ರಂಥಮಾಲೆಯ ನಡೆಯುವ ವರ್ಷದ ಗ್ರಂಥಗಳನ್ನು ಬಿಟ್ಟು ಹಿಂದಿನ ಗ್ರಂಥಗಳಿಗೆ ಚಂದಾಸವಲತ್ತು ಅನ್ವಯಿಸುವುದಿಲ್ಲ. ಅವನ್ನು ಮುಖಬೆಲೆ ಕೊಟ್ಟು ಕೊಳ್ಳಬೇಕಾಗುವುದು.

ಗ್ರಂಥಮಾಲೆಗೆ **ಒಂದೇ ಸಲಕ್ಕೆ ೧೫೦ ರೂಪಾಯಿಗಳನ್ನು** ಸಲ್ಲಿಸಿ ಆಜೀವ ಚಂದಾದಾರರಾಗಬಹುದು. ಅವರಿಗೆ ಅವರ ಆಜನ್ಮಪರ್ಯಂತ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಹಾಗೆಯೆ ಸಲ್ಲಿಸಲಾಗುವುದು.

ಗ್ರಂಥಮಾಲೆಯ ಬಿಡಿಮುತ್ತುಗಳನ್ನು ವಿಶೇಷ ಸವಲತ್ತಿನಿಂದ ಅವರಿಗೆ ಪೂರೈಸಲಾಗುವುದು.

ಗ್ರಂಥಮಾಲೆಯ ವಾರ್ಷಿಕ ಚಂದಾ **ಎಂಟು ರೂಪಾಯಿ (೮-೦-೦)** ಮಾತ್ರ ಇದೆ.

ಗ್ರಂಥಮಾಲೆಯ ಕಾರ್ಯಾಲಯದಲ್ಲಿಯೆ ಬಂದು ಪುಸ್ತಕಗಳನ್ನು ತೆಗೆದುಕೊಂಡುಹೋಗಲಪೇಕ್ಷೆಯುಳ್ಳವರಿಗೆ ಮಾತ್ರ ಆರು ರೂಪಾಯಿ ಎಂಟಾಣೆ ( ೬-೮-೦ ) ತೆಗೆದುಕೊಳ್ಳಲಾಗುವುದು.

ಗ್ರಂಥಮಾಲೆಯಿಂದ ಒಂದು ವರ್ಷದಲ್ಲಿ ಹೆಚ್ಚುಕಡಿಮೆ ಕ್ರಾ. ಅ. ೧೦೦೦ ಪುಟಗಳಷ್ಟು ಸರಸಸಾಹಿತ್ಯವನ್ನು ಗ್ರಾಹಕರಾದವರಿಗೆ ಸಲ್ಲಿಸಲಾಗುತ್ತದೆ.

ವರ್ಷದಲ್ಲಿ ಪ್ರಕಟವಾಗುವ ಗ್ರಂಥಗಳ ಸಂಖ್ಯೆಯು ಅವುಗಳ ಪುಟಸಂಖ್ಯೆಯಿಂದ ಹೆಚ್ಚು ಕಡಿಮೆಯಾಗಬಹುದು.

ಹಿಂದಿನ ಗ್ರಂಥಗಳಿಗೆ 'ಬೇಡಿಕೆ'ಯನ್ನು ಕೊಡುವಾಗ **'ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳ'** ಪಟ್ಟಿಯೊಳಗಿಂದಲೇ ಆಯ್ದು ಕೊಡಬೇಕು.

ಪುಸ್ತಕವ್ಯಾಪಾರಿಗಳು ತಮ್ಮ ಬೇಡಿಕೆಯನ್ನು ಕಳಿಸುವದರ ಜೊತೆಗೆ ಮುಂಗಡ ಹಣವನ್ನೂ ಕಳಿಸಬೇಕಾಗುವುದು.

ಅವರ ಬೇಡಿಕೆಯ ಒಟ್ಟುಬೆಲೆಯ ಮೇಲೆ ೧೮೩%ಕಮಿಶನ್ ಕೊಡಲಾಗುವುದು.

**೧೫೦ ರೂಪಾಯಿಗಳ ಮೇಲ್ಪಟ್ಟು ಬೇಡಿಕೆ ಕಳುಹಿಸಿದಲ್ಲಿ** Free Delivery **ಕೊಡುವ ಸವಲತ್ತಿದೆ.**

ಪ್ಯಾಕಿಂಗ್, ಅಂಚೆವೆಚ್ಚ ಪ್ರತ್ಯೇಕ.

**ವಿಳಾಸ :**

ಸಂಪಾದಕ

**ಮನೋಹರ ಗ್ರಂಥಮಾಲಾ**

**ಧಾರವಾಡ**

# ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳು

## ಕಾದಂಬರಿಗಳು :

| | | | | | |
|---|---|---|---|---|---|
| ೧ | ಧರ್ಮಸೆರೆ | ಜಡಭರತ | ... ೨ | ೦ | ೦ |
| ೨ | ನಿಸರ್ಗ | ಮಿರ್ಜಿ ಅಣ್ಣಾರಾಯರು | ... ೩ | ೮ | ೦ |
| ೩ | ರಾಷ್ಟ್ರಪುರುಷ | ,, ,, | .. ೮ | ೦ | ೦ |
| ೪ | ಅನಂತ | ಸತ್ಯಬೋಧ | .. ೧ | ೪ | ೦ |
| ೫ | ಭಗ್ನಮಂದಿರ | ಹೇಮಂತ | ೪ | ೮ | ೦ |
| ೬ | ಅನ್ನ | ರಂ. ಶ್ರೀ. ಮುಗಳಿ | . ೪ | ೦ | ೦ |
| ೭ | ಕಾರಣಪುರುಷ | ,, ,, | . ೧ | ೮ | ೦ |
| ೮ | ಗಂಗಾಸಾನಿ | ವರಗಿರಿ | . ೧ | ೧೪ | ೦ |
| ೯ | ಮಾದನ ಮಗಳು | ಎಂ. ವಿ. ಸೀ. | . ೬ | ೦ | ೦ |
| ೧೦ | ಮುನಿಯನ ಮಾದರಿ | ಕೆ. ಎ. ಎನ್. ರಾವ್ | .. ೨ | ೧೨ | ೦ |
| ೧೧ | ಮೇದಿನಾಪುರದ ಮಲ್ಲ | ಗುರುರಾಜ ಜೋಶಿ | .. ೨ | ೧೨ | ೦ |
| ೧೨ | ಔರಂಗಜೇಬ | ಕೆರೂರ ವಾಸುದೇವಾಚಾರ್ಯರು .. | ೩ | ೦ | ೦ |
| ೧೩ | ವಾಲ್ಮೀಕಿ ವಿಜಯ | | .. ೧ | ೦ | ೦ |
| ೧೪ | ಯವನ ಸೈರಂಧ್ರೀ | | ೨ | ೪ | ೦ |
| ೧೫ | ಇಂದ್ರಜಾಲ | ರಂಗರಾವ ದಲಚೇರಕರ | .... ೨ | ೮ | ೦ |
| ೧೬ | ಎರಡನೆಯ ಸಂಬಂಧ | ಎನ್ಕೆ. ಕುಲಕರ್ಣಿ | .... ೩ | ೦ | ೦ |
| ೧೭ | ಮರ್ಯಾದೆ-ಮಹಲು | ಅಶ್ವತ್ಥ | ... ೩ | ೮ | ೦ |

## ನಾಟಕಗಳು :

| | | | | | |
|---|---|---|---|---|---|
| ೧೮ | ಮಿಂಚಿನ ಹುಡಿ | ಕೃಷ್ಣಕುಮಾರ | .... ೨ | ೮ | ೦ |
| ೧೯ | ಎತ್ತಿದ ಕೈ | ರಂ. ಶ್ರೀ. ಮುಗಳಿ | .... ೧ | ೧೪ | ೦ |
| ೨೦ | ಯುಗಾಂತರ | ವಿ. ಕೃ ಗೋಕಾಕ | .... ೦ | ೧೨ | ೦ |
| ೨೧ | ಬಿತ್ತಿದ ಬೆಳೆ | ಶಿವರಾಮ ಕಾರಂತ | .... ೧ | ೦ | ೦ |
| ೨೨ | ಪರಿವರ್ತನ | ಲ. ಜಿ. ಬೇಂದ್ರೆ | .... ೦ | ೧೨ | ೦ |
| ೨೩ | ವೇಣುಮಾನ | ಶ್ರೀಮತಿ ಪ. ಸೀತಾದೇವಿ | .... ೦ | ೧೨ | ೦ |
| ೨೪ | ಮಂಗು | ಕೆ. ಎ. ಎನ್. ರಾವ | .... ೧ | ೮ | ೦ |

| | | | | | |
|---|---|---|---|---|---|
| | ಹೊಸ ಸಂಸಾರ | ದ. ರಾ. ಬೇಂದ್ರೆ | ... ೨ | ೮ | ೦ |
| ೨೬ | ಭಾಗ್ಯಶ್ರೀ | ದ. ರಾ. ಬೇಂದ್ರೆ | .... ೧ | ೦ | ೦ |
| ೨೭ | ವಿಮರ್ಶಕ ವೈದ್ಯ | ವಿ. ಕೃ. ಗೋಕಾಕ | ... ೦ | ೬ | ೦ |
| ೨೮ | ನಲದಮಯಂತಿ | ಕೆರೂರ ವಾಸುದೇವಾಚಾರ್ಯರು | ... ೧ | ೮ | ೦ |

## ಸಣ್ಣಕತೆ, ಲಲಿತಪ್ರಬಂಧಗಳು :

| | | | | | |
|---|---|---|---|---|---|
| ೨೯ | ಕುರಿಹಿಂಡು | ಜಲಧರ | ೨ | ೮ | ೦ |
| ೩೦ | ಹೂಬಾಣಗಳು | ಪ. ರಮಾನಂದ | ೩ | ೦ | ೦ |
| ೩೧ | ಜಡಭರತನ ಕನಸುಗಳು | ಜಡಭರತ | ೧ | ೮ | ೦ |
| ೩೨ | ಪ್ರೇಮವಿಜಯ | ಕೆರೂರ ವಾಸುದೇವಾಚಾರ್ಯ | ೨ | ೮ | ೦ |
| ೩೩ | ಬಹುಮಾನ ಪಡೆದ ಬರಹಗಳು | ವಿವಿಧ ಲೇಖಕರು | ೧ | ೧೨ | ೦ |
| ೩೪ | ಚೀನದ ಬಾಳು-ಬದುಕು | ,, ,, | ೭ | ೦ | ೦ |
| ೩೫ | ಬಾಳ-ಹೊಳೆ | ಅಶ್ವತ್ಥ | ೨ | ೮ | ೦ |

## ಕಾವ್ಯಗಳು:

| | | | | | | |
|---|---|---|---|---|---|---|
| ೩೬ | ಗರಿ | ಅಂಬಿಕಾತನಯದತ್ತ | ಸಾದಾ | ೨ | ೦ | ೦ |
| | | | ಒಳ್ಳೇ ಕಾಗದ | ೨ | ೮ | ೦ |
| ೩೭ | ಗಂಗಾವತರಣ | ,, ,, | ಸಾದಾ | ೨ | ೦ | ೦ |
| | | | ಒಳ್ಳೇ ಕಾಗದ | ೨ | ೮ | ೦ |
| ೩೮ | ಸಖೀಗೀತ | ,, ,, | | .... ೨ | ೮ | ೦ |
| ೩೯ | ಬಾಸಿಗ | ರಂ. ಶ್ರೀ. ಮುಗಳಿ | | .... ೧ | ೪ | ೦ |
| ೪೦ | ಸಮುದ್ರ ಗೀತಗಳು | ವಿ. ಕೃ. ಗೋಕಾಕ | | .... ೧ | ೪ | ೦ |
| ೪೧ | ಮಹಾಯುದ್ಧ | ಕೆ. ಎ. ಎಸ್. ರಾವ | | .... ೧ | ೮ | ೦ |

## ವಿಮರ್ಶಾತ್ಮಕ ಗ್ರಂಥಗಳು :

| | | | | | |
|---|---|---|---|---|---|
| ೪೨ | ಸಾಹಿತ್ಯ ಸಂಶೋಧನ | ದ. ರಾ. ಬೇಂದ್ರೆ | .... ೨ | ೮ | ೦ |
| ೪೩ | ಸಾಹಿತ್ಯ ಮತ್ತು ವಿಮರ್ಶೆ | ,, ,, | .... ೧ | ೮ | ೦ |
| ೪೪ | ದತ್ತವಾಣಿ | ಮಿರ್ಜಿ ಅಣ್ಣಾರಾಯರು | .... ೧ | ೪ | ೦ |
| ೪೫ | ಮಾತೃವಾಣಿ | ಶಿಶು ಮಧುರಚೆನ್ನ | .... ೧ | ೪ | ೦ |
| ೪೬ | ಯುಗಪ್ರವರ್ತಕ ಬಸವಣ್ಣ | ಚಿಂತಾಮಣಿ | .... ೧ | ೦ | ೦ |

# ಈ ಮೂರು ವರ್ಷಗಳಲ್ಲಿ ಹೊರಟ ಗ್ರಂಥಗಳು

## ೧೯೪೯ ಅಗಸ್ಟದಿಂದ ೧೯೫೦ ಜುಲೈ ವರೆಗಿನ ಒಂದು ವರ್ಷದಲ್ಲಿ ಶತಗ್ರಂಥಪೂರ್ತಿಯ ನೆನಪಿಗಾಗಿ ಪ್ರಕಟವಾದ ಗ್ರಂಥಗಳು

| | | | | |
|---|---|---|---|---|
| ೧ | ಜಡಭರತನ ಕನಸುಗಳು .... | ಜಡಭರತ | ೧೩೭ | ೧-೮-೦ |
| ೨ | ಗಂಗಾಸಾನಿ (ಕಾದಂಬರಿ) .... | ವರಗಿರಿ | ೧೬೮ | ೧-೧೪-೦ |
| ೩ | ಮಗು (ನಾಟಕ) .... | ಅಶ್ವತ್ಥ | ೧೦೫ | ೧-೮-೦ |
| ೪ | ಚೀನದ ಬಾಳು-ಬದುಕು (ಕತೆಗಳು) | ಬೇರೆಬೇರೆಯವರು | ೪೩೩ | ೭-೦-೦ |
| ೫ | ಮೇದಿನಾಪುರದ ಮಲ್ಲ (ಕಾದಂಬರಿ) | ಗುರುರಾಜ | ೨೧೭ | ೨-೧೨-೦ |
| ೬ | ಮಾದನ ಮಗಳು (ಕಾದಂಬರಿ) | ಎಂ. ವಿ. ಸೀ. | ೪೦೩ | ೬-೦-೦ |

ಒಟ್ಟು ಕೊಟ್ಟ ಪುಟಗಳು : ೧೪೬೩. ಮುಖಬೆಲೆ ೨೦-೮-೦

## ೧೯೫೦ ಅಗಸ್ಟದಿಂದ ೧೯೫೧ ಜುಲೈವರೆಗಿನ ಒಂದು ವರ್ಷದಲ್ಲಿ ಪ್ರಕಟವಾದ ಗ್ರಂಥಗಳು

| | | | | |
|---|---|---|---|---|
| ೧ | ಹೊಸ ಸಂಸಾರ (ನಾಟಕ) .... | ದ. ರಾ. ಬೇಂದ್ರೆ | ೧೮೬ | ೨-೮-೦ |
| ೨ | ಇಂದ್ರಚಾಪ (ಕಾದಂಬರಿ) .... | ರಂಗರಾವ ತಳ್ಳೇರಿ | ೧೮೮ | ೨-೮-೦ |
| ೩ | ಬಾಳಹೊಳೆ (ಕತೆಗಳು) .... | ಅಶ್ವತ್ಥ | ೨೨೮ | ೨-೮-೦ |
| ೪ | ಭಾಗ್ಯಶ್ರೀ (ನಾಟಕ) .... | ಎಲ್. ಜೆ. ಬೇಂದ್ರೆ | ೭೭ | ೧-೦-೦ |
| ೫ | ಎರಡನೆಯ ಸಂಬಂಧ (ಕಾದಂಬರಿ) | ಎನ್ಕೆ ಕುಲಕರ್ಣಿ | ೨೯೦ | ೩-೦-೦ |

ಒಟ್ಟು ಕೊಟ್ಟ ಪುಟಗಳು: ೯೬೯ ಮುಖಬೆಲೆ ೧೧-೮-೦

## ೧೯೫೧ ಅಗಸ್ಟದಿಂದ ೧೯೫೨ ಜುಲೈ ವರೆಗಿನ ಒಂದು ವರ್ಷದಲ್ಲಿಯ ಗ್ರಂಥಗಳು.

| | | | | |
|---|---|---|---|---|
| ೧ | ಮರ್ಯಾದೆ ಮಹಲು (ಕಾದಂಬರಿ)....ಅಶ್ವತ್ಥ | | ೩೫೦ | ೩–೮–೦ |
| ೨ | ಯವನಸೈರಂಧ್ರೀ ....ಕೆರೂರ ವಾಸುದೇವಾಚಾರ್ಯ | | ೨೨೫ | ೨–೪–೦ |
| ೩ | ಪ್ರೇಮವಿಜಯ (ಐತಿಹಾಸಿಕ ಕಥೆಗಳು) | ,, | ,, | –ಅಚ್ಚಿನಲ್ಲಿ |
| ೪ | ಬೆಳಗಿದ ದೀಪಗಳು (ಚಾರಿತ್ರಿಕ ಕಥೆಗಳು) | ,, | ,, | ,, |
| ೫ | ಬೆಳ್ಳೀಚಿಕ್ಕಿ (ಪತ್ತೆದಾರೀ ಕಥೆಗಳು) | ,, | ,, | ,, |

ಒಟ್ಟು ಕೊಡುವ ಪುಟಗಳು: ೧೦೦೦ ಮುಖಬೆಲೆ....

## ೧೯೫೨ ಅಗಸ್ಟದಿಂದ ೧೯೫೩ ಜುಲೈ ವರೆಗಿನ ಒಂದು ವರ್ಷದಲ್ಲಿಯ ಕೆಲ ಗ್ರಂಥಗಳು.

| | | | |
|---|---|---|---|
| ೧ | ತೊಳೆದ ಮುತ್ತು (ಸಂಪೂರ್ಣಕಥೆಗಳು) | ಕೆರೂರರವರು | ಅಚ್ಚಿನಲ್ಲಿ |
| ೨ | ಗಾಳಿಯ ಉಡಿಯಲ್ಲಿ (ಪ್ರಬಂಧಗಳು) | ಪ್ರೊ. ಕೆ. ಆರ್. ಮಹಿಷಿ | ,, |
| ೩ | ಆಶುನಾಟಕಗಳು (ಏಕಾಂಕಗಳು) .... | ಜಿ. ಬಿ. ಜೋಶಿ | ,, |

ವಿಶೇಷಸೂಚನೆ :

ಅಗಸ್ಟದಿಂದ ಪ್ರಾರಂಭವಾಗುವ ಈ ಹೊಸವರ್ಷದಿಂದ **ಮೂರು ತಿಂಗಳ ವರೆಗೆ ಮಾತ್ರ** ಗ್ರಂಥಮಾಲೆಯ ಹಿಂದಿನ ಗ್ರಂಥಗಳನ್ನು ಕೊಳ್ಳ ಬಯಸುವವರಿಗೆ ಒಂದು ವಿಶೇಷ ಸವಲತ್ತಿನಿಂದ ಕೊಡುವದನ್ನು ಗೊತ್ತು ಮಾಡಲಾಗಿದೆ. ಆಸ್ಥೆಯುಳ್ಳ ಓದುಗರು, ವಾಚನಾಲಯಗಳ ಸಂಚಾಲಕರು ಈ ಸುಪ್ರಸಂಗದ ಲಾಭ ಪಡೆಯಬಹುದು. ಅದರ ವಿವರಗಳನ್ನು ತಿಳಿಯಲು ಅಪೇಕ್ಷೆಯುಳ್ಳವರು ಪತ್ರವ್ಯವಹಾರದಿಂದ ತಿಳಿದುಕೊಳ್ಳಬೇಕಾಗಿ ವಿನಂತಿ.

— ಸಂಪಾದಕ